

ಕರ್ನಾಟಕ ಸರ್ಕಾರ

# ಪುರಂದರ ಸಾಹಿತ್ಯ ದರ್ಶನ

ಸಂಪುಟ ೨

## ಅಧ್ಯಾತ್ಮ ದರ್ಶನ

ಪುರಂದರ ಸಾಹಿತ್ಯ ದರ್ಶನ—ಸಂಪುಟ ೨

# ಅಧ್ಯಾತ್ಮ ದರ್ಶನ


ಸಂಪಾದಕರು

ವಿದ್ಯಾಲಂಕಾರ ಪ್ರೊ॥ ಸಾ. ಕೃ. ರಾಮಚಂದ್ರರಾವ್

ಸಹಾಯಕ ಸಂಪಾದಕರು

ಪ್ರೊ॥ ಅ. ರಾ. ಮಿತ್ರ

ರತ್ನಾ ಶಿವಶಂಕರ್



ಪ್ರಕಾಶನ

ಶ್ರೀ ಪುರಂದರದಾಸರ ಐದನೆಯ ಶತಮಾನೋತ್ಸವದ ಸಂದರ್ಭದಲ್ಲಿ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

೧೪-೩ಎ, ನೃಪತುಂಗ ರಸ್ತೆ, ಬೆಂಗಳೂರು ೫೬೦ ೦೦೨

PURANDARA SAHITYA DARSHANA (in 4 Volumes) — Collection of Purandaradasa's compositions with Annotations, and a Critical Estimate of his Personality, Times and Works Vol 1 Jivana-Darshana (Compositions pertaining to his life and travel) ; Vol. 2 Adhyatma-Darshana (Philosophical compositions), Vol. 3 Samaja-Darshana (Compositions dealing with social and ethical problems), Vol 4 · Kirtana-Darshana (Compositions dealing with Krishna, Suladis, Ugabhogas and Udayaragas) ; Edited by Prof. S K. Ramachandra Rao, and Associate Editors Prof. A R. Mitra and Smt. Ratna Shivashankar; Published by Sri A R Chandrahasa Gupta, I A S, for The Directorate of Kannada and Culture, Government of Karnataka, 14-3A, Nrupathunga Road, Bangalore 560 002, on the occasion of the 500th Birth Anniversary of Sri Purandaradasa, 1985

Pp 471 + iv



ನಾಲ್ಕು ಸಂಪುಟಗಳ ಬೆಲೆ : ರೂ. 65-00

ಛಾಯಾ ಚಿತ್ರಗಳು . ಬಿ ಕೇಸರ್‌ಸಿಂಗ್

ಮೊದಲ ಮುದ್ರಣ . 1985, ಶ್ರೀ ಪುರಂದರದಾಸರ ಐದನೆಯ ಶತಮಾನೋತ್ಸವ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪರವಾಗಿ, ಶ್ರೀ ಅ. ರಾ. ಚಂದ್ರಹಾಸಗುಪ್ತ, ಐ.ಎ.ಎಸ್., ಅವರಿಂದ ಪ್ರಕಟಿತ. ಐಬಿಎಚ್ ಪ್ರಕಾಶನ ಪ್ರಿಂಟರಿ, ರಾಮಯ್ಯ ಇಂಡಸ್ಟ್ರಿಯಲ್ ಎಸ್ಟೇಟ್, ಬೆಂಗಳೂರು 560 054ರ ಪರವಾಗಿ ಎಚ್. ಎಸ್. ಎನ್. ರಾವ್, ಅವರಿಂದ ಮುದ್ರಣವಾದದ್ದು.

# ಪರಿವಿಡಿ

# 1

ಪುರಂದರದಾಸರು ಹರಿದಾಸರು , ಹರಿಯ ಸೇವೆಗೆಂದು ತಮ್ಮ ಬದುಕನ್ನೆಲ್ಲ ಮೀಸಲಾಗಿ ಇರಿಸಿದವರು ತಮಗೆ ದೊರೆತಿರುವ ಶರೀರವು ಸಾಧನಾಶರೀರವೆಂದೂ, ಮಾನವಜನ್ಮವನ್ನು ಹಾನಿಮಾಡಿಕೊಳ್ಳದೆ ಅದರ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಬೇಕೆಂದೂ ಹರಿದಾಸರ ನಂಬಿಕೆ ಪುರಂದರದಾಸರು ಹೀಗೆ ಹರಿದಾಸ ರಾಗುವ ಮೊದಲು ಅವರ ಧರ್ಮವೇನು, ನಿಲುವೇನು, ಆಚಾರವೇನು ಎಂಬುದು ಸ್ಪಷ್ಟವಾಗುವುದಿಲ್ಲ ಅವರಿಗೆ ಹರಿದಾಸದೀಕ್ಷೆಯನ್ನು ಒದಗಿಸಿದ ವ್ಯಾಸರಾಯಸ್ವಾಮಿ ಗಳೇನೋ ಮಾಧ್ವಸಂಪ್ರದಾಯದವರು, ವೈಷ್ಣವ ಭಾಗವತರು ಅವರನ್ನು ಗುರು ಗಳೆಂದು ಬಗೆದ ಪುರಂದರದಾಸರೂ ಅದೇ ಸಂಪ್ರದಾಯವನ್ನು ಹಿಡಿದುದು ಸಹಜವೇ. ಅವರ ಕೃತಿಗಳಲ್ಲಿ ಮಾಧ್ವಮತದ, ದ್ವೈತದರ್ಶನದ, ಮಧ್ವಾಚಾರ್ಯರ ಹಿರಿಮೆ ಯನ್ನು ಹೇಳುವ ಪದಗಳು ಹಲವಾರು ಇವೆ ಅವರು ಮಾಧ್ವಸಂಪ್ರದಾಯದ ನಿಷ್ಠೆಯಲ್ಲಿದ್ದವರೆಂಬುದು ಸ್ಪಷ್ಟವಾಗಿದೆ ಆದರೆ ಹರಿದಾಸರ ಮನೋವೃತ್ತಿ ಇತರ ಪಂಡಿತರಂತೆ ಸಂಕುಚಿತವಾಗಿರದೆ ಉದಾರವಾಗಿರುವುದರಿಂದ ಅವರ ತಾತ್ತ್ವಿಕ ನಿಲು ವಾಗಲಿ ಧಾರ್ಮಿಕ ಧೋರಣೆಯಾಗಲಿ ಈ ಸಿದ್ಧಾಂತಕ್ಕೇ ಸೀಮಿತವಾಗಿಲ್ಲ ದ್ವೈತ ಸಿದ್ಧಾಂತದ ಪ್ರಮೇಯಗಳು ಅವರ ಪದಗಳಲ್ಲಿ ಅಡಿಗಡಿಗೆ ಬಂದರೂ, ದಾಸರ ಆಧ್ಯಾತ್ಮಿಕ ದೃಷ್ಟಿ ಅಷ್ಟಕ್ಕೇ ಮುಗಿಯುವುದಿಲ್ಲ ಇನ್ನೂ ವ್ಯಾಪಕವಾಗಿರುವ ಮನೋಧರ್ಮ ಅವರದ್ದು

ಪುರಂದರದಾಸರ ಪಾಲಿಗೆ ಸಿದ್ಧಾಂತಕ್ಕಿಂತ ಸಾಧನೆ ಮುಖ್ಯವಾದುದು. ವ್ಯಾಸ ಕೂಟ–ದಾಸಕೂಟಗಳ ಭೇದವನ್ನು ನಾವು ಗಮನಿಸಬೇಕು. ನಿಷ್ಠಾವಂತರಾದ, ಶಾಸ್ತ್ರೈಕನಿಷ್ಠರಾದ, ಸ್ವಮತಮಂಡನೆ–ಪರಮತಖಂಡನೆಯೇ ಪರಮಾರ್ಥಕ್ಕೆ ದಾರಿ ಎಂದು ಹಟ ಹಿಡಿದ ಮಡಿಮಡಿಯ ಗುಂಪಿಗೆ ವ್ಯಾಸಕೂಟವೆಂದು ಹೆಸ ರಾಯಿತು ಇದಕ್ಕೆ ಸೇರಿದವರಿಗೆ ಸಂಸ್ಕೃತಪಾಂಡಿತ್ಯ, ಸಚ್ಛಾಸ್ತ್ರ ವ್ಯಾಸಂಗ, ಸಿದ್ಧಾಂತ ಪ್ರಮೇಯಗಳ ಯುಕ್ತಿಯುಕ್ತ ಸಾಧನೆ, ಶಾಸ್ತ್ರಾಭ್ಯಾಸದಿಂದ ಬಂದ ಜ್ಞಾನ, ವರ್ಣಾಶ್ರಮಧರ್ಮಗಳ ಪಾಲನೆ ಇವು ಮುಖ್ಯವಾದವು ಭಕ್ತಿಯ ಅಗತ್ಯವನ್ನು ಪ್ರಮೇಯವಾಗಿ ಗ್ರಹಿಸಿದರೂ ಅವರ ಒಲವೆಲ್ಲ ಜ್ಞಾನದ ಕಡೆಯೇ ಸಾಧನೆಯ ಸ್ವಾರಸ್ಯವನ್ನು ಅವರು ಗ್ರಂಥಗಳಲ್ಲಿ ಬಲ್ಲರೇ ವಿನಾ ಅನುಭವದಲ್ಲಿ ಕಂಡರಿಯರು

ಆದರೆ ದಾಸಕೂಟದವರಿಗೆ ಭಕ್ತಿ ಮುಖ್ಯ, ಶಾಸ್ತ್ರಜ್ಞಾನ ಗೌಣ; ಸಾಧನೆಯ ಅನುಭವ ಮುಖ್ಯ, ಸಿದ್ಧಾಂತ ಗೌಣ. ದಾಸರು ವಾದವಿವಾದಗಳಿಗೆ ಮನಸೋತವರಲ್ಲ; ವ್ಯಾಸಂಗ–ಪ್ರವಚನಗಳಲ್ಲಿ ಬಾಳನ್ನು ಕಳೆದವರಲ್ಲ. ಅವರ ಬಾಳಿನಲ್ಲಿ ಸಾಧನೆಗೆ ಹಿರಿಯ ಪಟ್ಟ. ಸಾಧನೆಯೆಂದರೆ ಭಗವತ್ತತ್ತ್ವ, ಸಾಕ್ಷಾತ್ಕಾರ, ಭಕ್ತಿ ಇವು. ಇವಕ್ಕೆ ಯಾವುದೇ ಮತನಿಷ್ಠವಾದ ಸಿದ್ಧಾಂತವೊಂದರ ಕಟ್ಟುಪಾಡನ್ನು ತೊಡಿಸುವುದು ಸರಿಯಲ್ಲ. ಎಲ್ಲ ಸಂತರಿಗೂ ಸಮಾನವಾದ ಗುಣವನ್ನು ನಾವು ಪುರಂದರದಾಸರಲ್ಲಿ ಗುರುತಿಸಬೇಕು ಅವರು ಕೇವಲ ಮಾಧ್ವಸಂಪ್ರದಾಯದ ಪ್ರಚಾರಕರು ಎಂದು ಕಾಣಿಸಿದರೆ ತಪ್ಪಾಗುತ್ತದೆ; ಅವರ ಎತ್ತರವನ್ನು ಮುಟ್ಟಿದಂತೆ ಆಗುವುದಿಲ್ಲ.

ಆದರೆ ಹರಿದಾಸಪಂಥದಲ್ಲಿ ಬರುಬರುತ್ತ ಮಾಧ್ವಮತನಿಷ್ಠೆ ಹೆಚ್ಚಿದುದು ದಿಟ. ಪುರಂದರದಾಸರನಂತರ ಹೆಸರಾದ ಹರಿದಾಸರೆಂದರೆ ವಿಜಯದಾಸರಷ್ಟೆ? ಅವರ ಕೃತಿಗಳಲ್ಲಾಗಲೇ ಈ ಬಗೆಯ ಏಕದೇಶೀಯವಾದ ನಿಷ್ಠೆಯನ್ನು ನಾವು ಕಾಣಬಹುದು. ಅವರ ಶಿಷ್ಯವರ್ಗಕ್ಕೆ ಸೇರಿದ ಜಗನ್ನಾಥದಾಸರಂತೂ ಈ ನಿಷ್ಠೆಯ ಪರಾಕಾಷ್ಠೆಯನ್ನು ಮುಟ್ಟಿದವರು! ವ್ಯಾಸಕೂಟದ ಪಂಡಿತರು ತಮ್ಮನ್ನು ಕೀಳಾಗಿ ಕಾಣುವರೆಂದು ಬಗೆದು (–ಇದು ದಿಟವೂ ಇದ್ದೀತು–) ಹರಿದಾಸರು ಆ ಪಂಡಿತರಿಗಿಂತ ಹೆಚ್ಚಾಗಿ ಹಟಹಿಡಿದು ಮಾಧ್ವಸಿದ್ಧಾಂತದ ಪ್ರಚಾರವನ್ನು ಕೈಗೊಂಡಂತೆ ಕಾಣುತ್ತದೆ. ವಿಜಯದಾಸರನಂತರ ಬೆಳೆದುಬಂದ ಹರಿದಾಸಪಂಥ ಶುದ್ಧಾಂಗವಾಗಿ ಮಾಧ್ವಸಂಪ್ರದಾಯದ ಚೌಕಟ್ಟಿನಲ್ಲೇ ಉಳಿದುಕೊಂಡು ಬಂದಿತು. ಸಾಧನೆಯ ಕಡೆ ಗಮನ ಇಳಿಮುಖವಾಗಿ ಸಿದ್ಧಾಂತ ಪ್ರಮೇಯಗಳ ಮೇಲೆ ಒತ್ತು ಹೆಚ್ಚಾಯಿತು. ಮುಂದಿನ ದಾಸರ ಸುಳಾದಿಗಳೂ ಪದಗಳೂ ದ್ವೈತಶಾಸ್ತ್ರದ ನಿರೂಪಣೆಗಾಗಿಯೇ ಸಿದ್ಧವಾದುವು. ಹರಿದಾಸಪಂಥದ ಅವನತಿಗೂ ಈ ಅತಿರೇಕದ ಮತನಿಷ್ಠೆ ಕಾರಣವಾಯಿತೋ ಏನೋ.

ಈ ಮನೋಧರ್ಮ ಬೆಳೆದು ಬೇರೂರಲು ನೂರಾರು ವರ್ಷಗಳ ಮೊದಲೇ ಇದ್ದವರು ಪುರಂದರದಾಸರು. ಅವರ ಕಾಲಕ್ಕೆ ಮಾಧ್ವಸಂಪ್ರದಾಯದಲ್ಲಿ ಇನ್ನೂ ಭಗವದ್ಭಕ್ತಿಯೇ ಮುಖ್ಯವಾದ ವಿಚಾರವಾಗಿದ್ದಿತು. ಸಿದ್ಧಾಂತಪ್ರಮೇಯಗಳನ್ನು ಕುರಿತ ವಾದವಿವಾದಗಳನ್ನೂ ವಾಕ್ಯಾರ್ಥಗಳನ್ನೂ ಪಂಡಿತರ ಪಾಲಿಗೆ ಬಿಟ್ಟು, ನಿತ್ಯಜೀವನದಲ್ಲಿ ಭಗವನ್ಮಾಹಾತ್ಮ್ಯಜ್ಞಾನ, ಭಗವದ್ಭಕ್ತಿ, ಸದಾಚಾರ, ಸಾಧುವೃತ್ತಿ ಇವುಗಳನ್ನು ಜನರ ನಡುವೆ ಹರಡಬೇಕೆಂದೇ ಶ್ರೀಪಾದರಾಜರೂ ಅವರ ಶಿಷ್ಯರಾದ ವ್ಯಾಸರಾಯಸ್ವಾಮಿಗಳೂ ಹರಿದಾಸರ ಸಂಪ್ರದಾಯವನ್ನು ಎತ್ತಿನಿಲ್ಲಿಸಿದುದು. ಅವರಿಬ್ಬರೂ ಮಾಧ್ವಸಂಪ್ರದಾಯದ ಸ್ವಾಮಿಗಳೇ, ಶಾಸ್ತ್ರಸಂಪನ್ನರೇ, ವಾದಗ್ರಂಥಗಳನ್ನು ರಚಿಸಿದ್ದವರೇ. ಅವರ ಕನ್ನಡ ಕೃತಿಗಳಲ್ಲಿ ಮಾಧ್ವಸಿದ್ಧಾಂತದ ಪ್ರಮೇಯಗಳ ಕಡೆ ಗಮನ ಕಡಮೆ; ಇಲ್ಲವೇ ಇಲ್ಲವೆಂದರೂ ತಡೆದೀತು.

ಶ್ರೀಪಾದರಾಜರ ಕೃತಿಗಳು ನೂರನ್ನು ಮೀರಿ ದೊರೆತಿವೆ ಇವುಗಳಲ್ಲಿ, ನಾನು ಗಮನಿಸಿದಂತೆ, ಎರಡು ಮಾತ್ರ ಮಾಧ್ವಮತದ ಮೇಲ್ಮೆಯನ್ನು ಹೇಳುವಂಥವು— 'ಮರುದಂಶರ ಮತ ಹಿಡಿಯದೆ' ಎಂದು ಆರಂಭವಾಗುವುದು ಒಂದು, 'ಜಯ ಜಯ ಜಗತ್ಪ್ರಾಣ ಜಗದೊಳಗೆ ಸುತ್ರಾಣ' ಎಂಬುದಿನ್ನೊಂದು. ಉಳಿದ ಎಲ್ಲ ಕೃತಿಗಳಲ್ಲೂ ನಮಗೆ ಕೇಳಿಬರುವುದು ಕವಿವಾಣಿ, ಸಂತವಾಣಿ: ನಮಗೆ ಮನವರಿಕೆಯಾಗುವುದು ಅವರ ಭಕ್ತಿ, ಭಾವುಕತೆ, ಪಾರವಶ್ಯತೆ. ಎರಡು ಕೃತಿಗಳಲ್ಲೂ ಶಾಸ್ತ್ರಪ್ರಕ್ರಿಯೆಗಳನ್ನೇನು ಅವರು ಅಟ್ಟಕ್ಕೆ ಏರಿಸಿಲ್ಲ ಮೊದಲನೆಯ ಕೃತಿಯಲ್ಲಿ 'ತಾರತಮ್ಯಜ್ಞಾನ'ವೆಂಬ ಮಾತೊಂದೋ ಇದೆ. ಆದರೆ 'ಮರುದಂಶರ' (ಎಂದರೆ ಮಧ್ವಾಚಾರ್ಯರ) ಮತ ಇರುವುದು ಇಹದಲ್ಲಿ ಮತ್ತು ಪರದಲ್ಲಿ ಸುಖಕ್ಕಾಗಿ ಎಂದು ಹೇಳುವಾಗ ಅದರ ಮುಖ್ಯಾಂಶಗಳಾಗಿ 'ಸೂರಿಜನಸಂಗ', 'ಸಾರವೈರಾಗ್ಯ', 'ಅರಿವು', 'ವಿವೇಕ' ಇಷ್ಟನ್ನೇ ಎತ್ತಿ ತೋರಿಸಿದ್ದಾರೆ. ಎರಡನೆಯದು ಮಾಧ್ವಪಂಗಡದಲ್ಲಿ 'ಮಧ್ವನಾಮ'ವೆಂದೇ ಪ್ರಸಿದ್ಧವಾಗಿರುವ ಕೃತಿ ಇದರಲ್ಲಿ ಹನುಮ–ಭೀಮ–ಮಧ್ವ ಎಂಬ ಅವತಾರತ್ರಯದ ವರ್ಣನೆಯಿದೆಯಷ್ಟೇ ವಿನಾ ಸಿದ್ಧಾಂತದ ವಿವರಗಳನ್ನಾಗಲಿ ಪರಮತನಿಂದೆಯನ್ನಾಗಲಿ ಕಾಣಲಾರೆವು. ಆದರೆ ಜಗನ್ನಾಥದಾಸರು (ವಿಜಯದಾಸರ ಶಿಷ್ಯರು) ಶ್ರೀಪಾದರಾಜರ ಉಳಿದೆಲ್ಲ ಕೃತಿಗಳನ್ನೂ ಬಿಟ್ಟು 'ಶ್ರೀಪಾದರಾಯ ಪೇಳಿದ ಮಧ್ವನಾಮ ನಂ, ತಾಪ ಕಳೆದಖಿಳ ಸೌಖ್ಯವನೀವುದು' ಎಂದು ಹೇಳುವ ವೇಳೆಗಾಗಲೇ ಹರಿದಾಸರ ಕೂಟದಲ್ಲಿ ಮಾಧ್ವಛಲ ಬೇರೂರಿದ್ದಿತ್ತು !

ವ್ಯಾಸತೀರ್ಥರ ಕೃತಿಗಳಲ್ಲಿಯೂ ಶ್ರೀಪಾದರಾಜರ ಮನೋಧರ್ಮವೇ ಎದ್ದು ಕಾಣುತ್ತದೆ. ಅವರಿಗೆ ಮುಖ್ಯವಾಗಿದ್ದುದು ಭಕ್ತಿ, ಅದನ್ನು ಬೆಳೆಸುವ ಬಗೆ. ಯಾವ ಸಂಪ್ರದಾಯದವರಾದರೂ ಶ್ರೀಪಾದರಾಯರ ಮತ್ತು ವ್ಯಾಸರಾಯಸ್ವಾಮಿಗಳ ಕೃತಿಗಳನ್ನು ಓದಿ, ಮನಗಂಡು ಮೆಚ್ಚಿಕೊಳ್ಳಬಹುದು. ಪುರಂದರದಾಸರೂ ಬಹುಮಟ್ಟಿಗೆ ಈ ಹಾದಿಯನ್ನೇ ತುಳಿದವರು. ಆದರೆ ಈ ಮಾತನ್ನು ನಾವು ವಿಜಯದಾಸರ ಅಥವಾ ಜಗನ್ನಾಥದಾಸರ ವಿಚಾರವಾಗಿ ಹೇಳುವಂತಿಲ್ಲ. ಅವರ ಕೃತಿಗಳು ಮಾಧ್ವಮತದಲ್ಲಿ ನಿಷ್ಠೆಯುಳ್ಳವರಿಗೆ ಮಾತ್ರ ರುಚಿಸುತ್ತವೆ. ಮುಂದಿನ ಹರಿದಾಸರ ವಿಚಾರ ಹೇಳುವುದೇನು ?

ಪುರಂದರದಾಸರ ಪದಗಳಲ್ಲಿ ಮಾಧ್ವಮತನಿಷ್ಠೆ ಅವರ ಗುರುಗಳ ಮತ್ತು ಪರಮಗುರುಗಳ ಪದಗಳಲ್ಲಿರುವುದಕ್ಕಿಂತ ಹೆಚ್ಚೆಂದು ತೋರಬಹುದು ಆದರೆ ಅವರ ರಚನೆಗಳ ಬಾಹುಳ್ಯವನ್ನು ಗಮನಿಸಿದರೆ ಮಾಧ್ವಮತದ ಪ್ರಮೇಯಗಳನ್ನು ಪ್ರಕಟವಾಗಿ ಹೇಳುವುವು ತೀರ ಕಡಮೆ. ದೊರೆತಿರುವ ಸುಮಾರು ಒಂದು ಸಾವಿರ ಕೃತಿಗಳಲ್ಲಿ ನಲವತ್ತಕ್ಕಿಂತ ಹೆಚ್ಚಾಗಿ ಇಲ್ಲ. ಇನ್ನು ಮಾಧ್ವಮತದ ಮೇಲ್ಮೆಯನ್ನು ಯಾವ ಸಂಕೋಚವೂ ಇಲ್ಲದೆ ಹಾಡಿ ಹೊಗಳುವಂಥವು ಇನ್ನೂ ಕಡಮೆ, ಹತ್ತಕ್ಕಿಂತ ಹೆಚ್ಚಿಲ್ಲ. ಇವುಗಳಲ್ಲಿ ಅವರವೇ ಎಂದು ಖಚಿತವಾಗಿ ಹೇಳಬಹುದಾದುವು ಎಷ್ಟೋ,

ಬೇರೆಯವರು ರಚಿಸಿ ಅವರ ಅಂಕಿತವನ್ನು ಹಾಕಿರುವುವು ಎಷ್ಟೋ ! ಅವರ ಕಾಲಕ್ಕೆ ಹತ್ತಿರದಲ್ಲೇ ಇದ್ದಿರಬಹುದಾದ 'ಗುರುಪುರಂದರವಿಠಲ', 'ಮಧ್ವಪತಿ ಪುರಂದರ ವಿಠಲ' ಎಂಬಂಕಿತದ ದಾಸರು ಮತನಿಷ್ಠೆಯನ್ನು ಮೇಲೇರಿಸಿಕೊಂಡವರು ; ಅವರ ವೆಂಬ ರಚನೆಗಳಲ್ಲಿ ಇದು ಸ್ಪಷ್ಟವಾಗಿ ಕಾಣುತ್ತದೆ. ಅವರಿಬ್ಬರೂ ಪುರಂದರದಾಸರ ಮಕ್ಕಳೇ ಎಂಬ ನಂಬಿಕೆಯೂ ದಾಸಕೂಟದವರಲ್ಲಿದೆ ; ಈ ನಂಬಿಕೆ ವಿಜಯದಾಸರ ಕಾಲದಿಂದೀಚೆಗೆ ಕಾಣಬರುತ್ತದೆ. ಪುರಂದರದಾಸರ ಹೆಸರಿನಲ್ಲಿರುವ ಮಾಧ್ವಮತ ನಿಷ್ಠೆಯ ಪದಗಳಲ್ಲಿ ಇವರಿಬ್ಬರ ಕೈವಾಡ ಇದ್ದೀತೆಂದು ತೋರುತ್ತದೆ.

ಸಂಪ್ರದಾಯಶರಣನಾದ ಯಾವುದೇ ವ್ಯಕ್ತಿಯಾಗಲಿ ತನ್ನ ಸಂಪ್ರದಾಯದ ಬಗ್ಗೆ ಶ್ರದ್ಧೆಯನ್ನು ತಾಳುವುದು ಸಹಜವೇ ; ಅದರಲ್ಲಿ ತಪ್ಪೇನಿಲ್ಲ ಆದರೆ ಲೋಕೋಪಕಾರಕ್ಕೆಂದು ಹೊರಟಾಗ (—ಹರಿದಾಸರು ಹೊರಟದ್ದು ಇದಕ್ಕೇ—) ತಮ್ಮ ಸಂಪ್ರದಾಯವನ್ನೇ ಎತ್ತಿ ಹಿಡಿದು, ಎಲ್ಲ ಜನರೂ ಅದನ್ನೇ ಹಿಡಿಯಬೇಕೆಂದು ಹಟಮಾಡುವುದು ಪ್ರಶಸ್ತವಾದ ಮನೋಧರ್ಮವಲ್ಲ. 'ಮಾನವಜನ್ಮ ದೊಡ್ಡದು' ಎಂದು ಜನರನ್ನು ಎಚ್ಚರಿಸಿದ ಪುರಂದರದಾಸರು 'ಮಾಧ್ವಜನ್ಮ ದೊಡ್ಡದು' ಎಂದು ಹೇಳಿಯಾರೆಂದು ಯಾರು ನಂಬಿಯಾರು ? ತಮ್ಮ ಸಂದೇಶ ಇಡೀ ಮಾನವಕುಲ ಕ್ಕೆಂದು ಅವರ ಭಾವನೆ ; ಅದು ಎಲ್ಲ ದೇಶಗಳಲ್ಲಿ ಎಲ್ಲ ಕಾಲಕ್ಕೂ ಎಲ್ಲರಿಗೂ ಅನ್ವಯವಾಗಬೇಕೆಂದು ಅವರ ಆಶಯ. 'ಕುಲವು ಪ್ರಾಧಾನ್ಯವಲ್ಲ ಜಲಜನಾಭನ ಭಜಿಸೆ' ಎಂದು ಹೇಳಿದವರು ಒಂದು ನಿರ್ದಿಷ್ಟಮತದ ಚೌಕಟ್ಟಿನಲ್ಲಿ ಅಡಗಿಕೊಂಡು ಕೂತರೆಂದು ಹೇಳುವುದು ಹೇಗೆ ? ಪುರಂದರದಾಸರ ನೂರಾರು ಕೃತಿಗಳಲ್ಲಿ ಕಾಣುವ ಮನೋಧರ್ಮ ಅವರ ಕೆಲವು ಪದಗಳಲ್ಲಿ ಕಾಣುವುದಿಲ್ಲವೆಂದರೆ ಈ ಪದಗಳ ಪ್ರಾಮಾಣಿಕತೆಯನ್ನು ಕುರಿತು ಸಂಶಯ ಏಳುವುದು ಸರಿಯೇ.

ಈ ಗೋತ್ರಕ್ಕೆ ಸೇರಿದ ರಚನೆಗಳು ಕೆಲವೇ ಎಂದಾದರೂ ಅವು ಅವರವೇ ಎಂದು ದಾಸಕೂಟದವರಲ್ಲಿ ಶ್ರದ್ಧೆ. ಈ ಶ್ರದ್ಧೆಯನ್ನು ಅಲ್ಲಗಳೆಯುವಂಥ ಪುರಾವೆ ಗಳು ಸದ್ಯಕ್ಕೆ ನಮ್ಮ ಬತ್ತಳಿಕೆಯಲ್ಲಿಲ್ಲ ! ಹಾಗೆಂದೇ ಅವನ್ನೆಲ್ಲ ಈ ಸಂಕಲನದಲ್ಲಿ ಸೇರಿಸಿದೆ. ಸಹೃದಯರು ಅವನ್ನು ಓದುವಾಗ ಅವುಗಳ ಪ್ರಾಮಾಣಿಕತೆ ಸಂದಿಗ್ಧ ವಾದುದು ಎಂಬುದನ್ನು ಗಮನಿಸಬೇಕು. ಒಂದು ವೇಳೆ ಅವೆಲ್ಲ ಪುರಂದರದಾಸರವೇ ಎಂಬುದು ದಿಟವಾದರೆ, ಪುರಂದರದಾಸರನ್ನು ಮೆಚ್ಚಿಕೊಳ್ಳುವವರು ಅವನ್ನೂ ಮೆಚ್ಚಿಕೊಳ್ಳಬೇಕಾದುದಿಲ್ಲ. ಅಥವಾ ಈ ಕೆಲವು ಪದಗಳನ್ನು ರಚಿಸಿದರೆಂದು ಪುರಂದರದಾಸರ ಸಾಹಿತ್ಯವನ್ನೆಲ್ಲ ಕಸವೆಂದು ಹೊರದೂಡುವ ಕಾರಣವೂ ಇಲ್ಲ. ಈ ಪದಗಳಲ್ಲಿ ಮಧ್ವಾಚಾರ್ಯರ ಗುಣಗಾನವಿರುವುದೇನು ದೋಷವಲ್ಲ ! ಮಧ್ವಾ ಚಾರ್ಯರು ಅವರ ಗುರುಪರಂಪರೆಗೆ ಮೂಲ ; ಗುರುಸ್ತುತಿ ಯಾರಿಗಾದರೂ ಉಚಿತವಾದುದೇ, ಅಗತ್ಯವಾದುದೇ. ಆದರೆ ಪರಮತದ ನಿಂದನೆ, ಅವಹೇಳನೆ, ಖಂಡನೆ, ಇವನ್ನು ಮಾಡಲೇಬೇಕಾದ ಅಗತ್ಯವೇನು ? ಅದ್ವೈತಿಗಳನ್ನು ಪರಾಭವ

ಗೊಳಿಸಿದರೆಂದೇ ಮಧ್ವಾಚಾರ್ಯರ ಹಿರಿಮೆಯೆ ? ಅದನ್ನು ಮತನಿಷ್ಠೆಯುಳ್ಳ ಪಂಡಿತರು ಬೇಕಿದ್ದರೆ ಎತ್ತಿ ಆಡಲಿ, ಕವಿಹೃದಯದ ಸಂತರಾದ ಹರಿದಾಸರು ಅದನ್ನು ಆಡುವುದು ಏನು ಚೆನ್ನು ? ಪರಮತಖಂಡನೆ, ದೂಷಣೆಗಳಿರುವ ಪದಗಳು ಪುರಂದರದಾಸರವೇ ಆಗಿದ್ದರೆ (–ಆಗಿರಲಾರದೆಂದು ನನ್ನ ಊಹೆ–) ಪುರಂದರದಾಸರ ಹಿರಿಮೆಗೆ ಅದೊಂದು ಕುಂದು ಎಂದು ಹೇಳಬೇಕು.

ಪ್ರಸ್ತಾವನೆಯ ಮೊದಲಲ್ಲೇ ಈ ವಿಚಾರವನ್ನು ಇಷ್ಟು ವಿಸ್ತಾರವಾಗಿ ಎತ್ತಿ ಕೊಂಡುದು ನಾಡಿನ ಆಧ್ಯಾತ್ಮಿಕವಿಕಾಸಕ್ಕೆ ಪುರಂದರದಾಸರ ಕೊಡುಗೆ ಏನು ಎಂಬು ದನ್ನು ನಿರ್ಧರಿಸಲು ಇದು ನೆರವಾಗಲೆಂದು. ಪುರಂದರದಾಸರು ಇಡೀ ನಾಡಿನ (ಎಂದರೆ ಎಲ್ಲ ಮತಧರ್ಮಗಳಿಗೆ ಸಾಮಾನ್ಯವಾದ), ಎಲ್ಲ ಕಾಲದ, ಆಧ್ಯಾತ್ಮಿಕ ನೆಲೆಯಲ್ಲಿ ನಿಂತವರು ; ನಮ್ಮ ಇಡೀ ಸಂಸ್ಕೃತಿಗೆ ಸಹಜವಾದ ಹಂಬಲವನ್ನು ಅವರ ಕೃತಿಗಳು ಪ್ರತಿನಿಧಿಸುತ್ತವೆ ಎಂಬುದು ಸುಳ್ಳಾದರೆ ಅವರನ್ನು ನಾಡು ನೆನೆಸಿಕೊಳ್ಳ ಬೇಕಾದ ಅಗತ್ಯವಿರದು ! ಜನರ ನಡುವೆ ಪುರಂದರದಾಸರ ಹಿರಿಮೆ ಹರಡಿರುವುದು ಅವರ ಭಾವನೆಗಳು, ಅವರ ಬೋಧನೆ ಎಲ್ಲರ ನಿತ್ಯಜೀವನದಲ್ಲಿ ಬೆಳಕನ್ನು ನೀಡ ಬಲ್ಲುವು ಎಂಬ ಕಾರಣದಿಂದ. ಇದನ್ನು ಒತ್ತಿಹೇಳಲು ಮೇಲಿನ ಪ್ರಸ್ತಾಪ ಬೇಕಾಯಿತು.

## 2

ಪುರಂದರದಾಸರು ಮಾಧ್ವಸಂಪ್ರದಾಯದ ಮಡಿಲಿಂದ ಎದ್ದವರು ಎಂಬು ದೇನೋ ದಿಟವೇ. ಮಾಧ್ವಸಿದ್ಧಾಂತದ ಪ್ರಮೇಯಗಳು ಅವರ ಆಧ್ಯಾತ್ಮಿಕ ಜೀವನದ ದಾರಿದೀಪಗಳಾದುವು ಎಂಬುದೂ ಸರಿಯೇ. ಒಬ್ಬೊಬ್ಬರೂ ಒಂದೊಂದು ದಾರಿ ಹಿಡಿಯುವಂತೆ ಪುರಂದರದಾಸರು ಮಧ್ವಾಚಾರ್ಯರು ತೋರಿಸಿದ ದಾರಿ ಹಿಡಿದರು ; ಅದಕ್ಕೆ ಕಾರಣ ಅವರು ವ್ಯಾಸರಾಯಸ್ವಾಮಿಗಳ ಬಳಿ ದೀಕ್ಷೆಯನ್ನು ತಳೆದದ್ದು. ಇದೊಂದು ಐತಿಹಾಸಿಕ ಸಂದರ್ಭವಷ್ಟೆ. ಅವರು ಕನ್ನಡಿಗರಾಗಿದ್ದುದು ಹೇಗೋ ಹಾಗೆ ; ಅವರ ಮಾತು ತಮಿಳಾಗಿದ್ದಿದ್ದರೆ ಅವರ ರಚನೆಗಳು ತಮಿಳಿನಲ್ಲಿರು ತ್ತಿದ್ದುವು. ಅದರಿಂದ ಅವರ ಪ್ರತಿಭೆಗೇನು ಕೊರತೆಯೂ ಇರುತ್ತಿರಲಿಲ್ಲ ಹೆಗ್ಗಳಿಕೆಯೂ ಇರುತ್ತಿರಲಿಲ್ಲ. ಪುರಂದರದಾಸರು ಶಾಂಕರಸಂಪ್ರದಾಯದ ಅಥವಾ ರಾಮಾನುಜ ಸಂಪ್ರದಾಯದ ದೀಕ್ಷೆಯನ್ನು ಪಡೆದಿದ್ದರೆ ಅವರ ಸಿದ್ಧಾಂತಪ್ರಮೇಯ ಗಳು ಬೇರೆಯಾಗಿರುತ್ತಿದ್ದುವು. ಸಂಪ್ರದಾಯ ಯಾವುದಿದ್ದರೂ ಅದು ತೋರಿಸು ವುದು ದಾರಿಯನ್ನು, ಸಾಧನಾಮಾರ್ಗವನ್ನು. ಆಧ್ಯಾತ್ಮಿಕಚೌಕಟ್ಟು ಇಷ್ಟರಲ್ಲಿ ಮುಗಿಯುವುದಿಲ್ಲ. ಶಂಕರಾಚಾರ್ಯರ ಪ್ರಕ್ರಿಯೆಯನ್ನು ಹಿಡಿದವರಿಗೆ ಶಾಂಕರಮೋಕ್ಷ,

ಮಧ್ವಾಚಾರ್ಯರ ಪ್ರಕ್ರಿಯೆಯನ್ನು ಹಿಡಿದವರಿಗೆ ಮಾಧ್ವಮೋಕ್ಷ ಎಂದೇನು ಇದೆಯೆ ? ಒಂದು ಊರಿಗೆ ಹಲವಾರು ದಾರಿಗಳು ; ದಾರಿಗೊಂದು ಊರು ಎನ್ನಲಾದೀತೆ ?

ಪುರಂದರದಾಸರ ಆಧ್ಯಾತ್ಮಿಕ ನಿಲುವನ್ನು ಅರಿತುಕೊಳ್ಳುವಾಗ ಮಾಧ್ವಸಿದ್ಧಾಂತದ ಪ್ರಮೇಯಗಳ ಪಾತ್ರ ಇಲ್ಲದಿಲ್ಲ, ಆದರೆ ಅದರ ಹರವು ಹೆಚ್ಚಿನದಲ್ಲ. ಯಾವುದೇ ಮತಧರ್ಮವಾಗಲಿ, ಅದರಲ್ಲಿ ಸಿದ್ಧಾಂತದ ಭಾಗ ಒಂದಿದೆ, ಸಾಧನೆಯ ಭಾಗ ಇನ್ನೊಂದಿದೆ. ಹಲವಾರು ಮತಧರ್ಮಗಳಲ್ಲಿ ಸಿದ್ಧಾಂತ ಪ್ರಮೇಯಗಳು ಬೇರೆ ಬೇರೆಯಾಗಿದ್ದ ಮಾತ್ರಕ್ಕೆ ಸಾಧನೆಗಳೂ ಬೇರೆ ಬೇರೆಯಾಗಿರಬೇಕು ಎಂಬ ನಿಯಮವೇನಿಲ್ಲ. ಸಿದ್ಧಾಂತಕ್ಕೆ ಅಂಟಿಕೊಂಡದ್ದು ವ್ಯಾಸ ಕೂಟ, ಸಾಧನೆಗೆ ಮನಸೋತದ್ದು ದಾಸಕೂಟ ಎಂದು ಮೇಲೆ ಹೇಳಿದೆ. ಸಿದ್ಧಾಂತವು ಸಾಧನೆಗೆ ಹಿನ್ನೆಲೆ ಎಂಬುದನ್ನು ವ್ಯಾಸಕೂಟದವರು ಮರೆತರು. ದಾಸಕೂಟ ತಲೆಯೆತ್ತಿಕೊಂಡುದು ಈ ತಪ್ಪನ್ನು ತಿದ್ದಲೆಂದೇ. ಶ್ರೀಪಾದರಾಜರೂ ವ್ಯಾಸರಾಯ ಸ್ವಾಮಿಗಳೂ ಸಿದ್ಧಾಂತ–ಸಾಧನೆ, ಪ್ರಮೇಯ–ಉಪಾಸನೆ ಎರಡನ್ನೂ ಸಮಪ್ರಧಾನವಾಗಿ ಆದರಿಸಿದವರು. ಹಾಗೆಂದೇ ವ್ಯಾಸಕೂಟದ ಕೊರತೆಯನ್ನು ದಾಸಕೂಟದಿಂದ ತುಂಬಲು ಯತ್ನಿಸಿದರು. ಹಾಗೆ ಮಾಡುವಾಗ ವ್ಯಾಸಕೂಟದಲ್ಲಿ ಮೂಡಿಕೊಂಡಿದ್ದ ಸಿದ್ಧಾಂತದ ನಿಲುವನ್ನೇ ಕೊಂಚಮಟ್ಟಿಗೆ ಮಾರ್ಪಡಿಸಿದರು. ಈ ಮಾರ್ಪಾಟನ್ನು ಅರಿತುಕೊಳ್ಳಬೇಕಾದ ಆಗತ್ಯವಿದೆ, ಏಕೆಂದರೆ ಈ ಮಾರ್ಪಾಟಿನ ಮೊದಲ ಫಲವೇ ಪುರಂದರದಾಸರು.

ಮಧ್ವಾಚಾರ್ಯರು (1238–1317) ತಾವು ಮನಗಂಡ ವೇದಾಂತಸಿದ್ಧಾಂತವನ್ನು ಪ್ರತಿಪಾದಿಸಲು ಭಾಷ್ಯ, ನಿರ್ಣಯ, ಪ್ರಕರಣ ಗ್ರಂಥಗಳನ್ನು ರಚಿಸಿದರಷ್ಟೇ. ಅವರೇನು ಈ ಸಿದ್ಧಾಂತದ ಪ್ರವರ್ತಕರಲ್ಲ ; ಪ್ರಾಚೀನವಾಗಿದ್ದ ಸಿದ್ಧಾಂತವನ್ನು ಪುನರುಜ್ಜೀವನಗೊಳಿಸಿದವರು. ಅವರ ನೇರವಾದ ಶಿಷ್ಯರೇ ಕೆಲವರು (ತ್ರಿವಿಕ್ರಮ ಪಂಡಿತಾಚಾರ್ಯರು, ಪದ್ಮನಾಭತೀರ್ಥರು, ನರಹರಿತೀರ್ಥರು) ಅವರ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಸಿದ್ಧಪಡಿಸಿದರು. ಆದರೆ ಮಾಧ್ವ ಸಿದ್ಧಾಂತವನ್ನು ನಿರ್ದಿಷ್ಟವಾಗಿ, ಇತರ ಸಿದ್ಧಾಂತಗಳಿಂದ ಬೇರೆಯಾಗಿ, ತೋರುವಂತೆ ವ್ಯಾಖ್ಯಾನಗಳನ್ನು ಬರೆದವರು ಜಯತೀರ್ಥರು (ಪೀಠಾಧಿಪತ್ಯ 1365–1388). ಮಧ್ವಾಚಾರ್ಯರು ಕಣ್ಮರೆಯಾಗಿ ಸುಮಾರು ಅರ್ಧ ಶತಮಾನದ ವರೆಗೆ, ಜಯತೀರ್ಥರು ಕಾಣಿಸಿಕೊಳ್ಳುವ ವರೆಗೆ, ಪ್ರತ್ಯೇಕವಾದ ಮಾಧ್ವಪಂಥ ಎಂಬುದಿರಲಿಲ್ಲ. ಜಯತೀರ್ಥರ ಪೂರ್ವ ಪ್ರಸ್ಥಾನವಾದ 'ತತ್ತ್ವಪ್ರಕಾಶಿಕಾ' ಮತ್ತು ಉತ್ತರ ಪ್ರಸ್ಥಾನವಾದ 'ನ್ಯಾಯಸುಧಾ' ಇವೆರಡೂ ಗ್ರಂಥಗಳು ಕ್ರಾಂತಿಕಾರಕವಾದುವು. ಇವುಗಳಿಂದ ಮಾಧ್ವ ಸಿದ್ಧಾಂತದ ದೃಷ್ಟಿಕೋಣ ಖಚಿತವಾಯಿತೆಂದರೆ ತಪ್ಪಲ್ಲ. ಈ ಗ್ರಂಥಗಳಲ್ಲಿ ವಿಚಾರಕ್ಕೆ ಹೆಚ್ಚಿನ ಬೆಲೆ ; ಉಪಾಸನೆಯ ಕಡೆ ಗಮನ ಕಡಮೆ. ಮುಂದಿನ ಮಾಧ್ವ ವೇದಾಂತದ

ವಾಙ್ಮಯವೆಲ್ಲ ಜಯತೀರ್ಥರ ಜಾಡನ್ನೇ ಹಿಡಿಯಿತು ಆದರೆ ಈ ವೇದಾಂತ ದಲ್ಲಿಯೂ ಬರುಬರುತ್ತ ಹಲವಾರು ಬೇರೆ ಬೇರೆ ನಿಲುವುಗಳು ಮೂಡಿಕೊಂಡುವು ಎಂಬುದು ರಾಘವೇಂದ್ರಸ್ವಾಮಿಗಳ (1623–1671)"ಪ್ರಸ್ಥಾನಭೇದ ಪ್ರೋಕ್ತಾರ್ಥ ಸಂಗ್ರಹ"ವೆಂಬ ಒಕ್ಕಣೆಯಿಂದ ('ತಂತ್ರದೀಪಿಕಾ', ಇದಕ್ಕೆ ಸೂತ್ರಾರ್ಥಸಂಗ್ರಹವೆಂಬ ಹೆಸರೂ ಇದೆ) ಸೂಚಿತವಾಗುತ್ತದೆ

ಜಯತೀರ್ಥರ ಗ್ರಂಥಗಳಲ್ಲಿರುವ ಆಶಯವನ್ನು ಸ್ಪಷ್ಟಪಡಿಸಲು ಯತ್ನಿಸಿದವ ರಲ್ಲಿ ವ್ಯಾಸರಾಯಸ್ವಾಮಿಗಳು ಮುಖ್ಯರು ಹಾಗೆಂದೇ 'ಶ್ರೀಮುಷ್ಣಮಾಹಾತ್ಮ್ಯ' ಯಲ್ಲಿ ಮಧ್ವರು, ಜಯತೀರ್ಥರು, ವ್ಯಾಸಾರ್ಯರು ಇವರನ್ನು 'ಮುನಿತ್ರಯ' ವೆಂದು ಕರೆಯಲಾಗಿದೆ ಜಯತೀರ್ಥರ ಕಾಲಕ್ಕೂ ವ್ಯಾಸರಾಯಸ್ವಾಮಿಗಳ ಕಾಲಕ್ಕೂ ಮತ್ತೆ ಸುಮಾರು ಒಂದು ಶತಮಾನದ ಅಂತರ ಈ ನಡುವೆ ವಿಷ್ಣುದಾಸಾಚಾರ್ಯ (1390–1440)ರೆಂಬ ಗ್ರಂಥಕಾರರು ಖಂಡನ–ಮಂಡನಗಳ ಕಾವನ್ನು ಏರಿಸಿದ್ದರು. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಈ ಸಿದ್ಧಾಂತಗಳು ಪರಸ್ಪರ ವಿರೋಧಿಬಣ ಗಳಾಗಿ, ಕದನಕುತೂಹಲಿಗಳಾಗಿ ಕಾಣಿಸಿಕೊಂಡುವು ವಾದರತ್ನಾವಳಿ (ಉಪಲಬ್ಧ), ಖಂಡನಖಂಡನ, ವಿವರಣಖಂಡನ (ಎರಡೂ ಅನುಪಲಬ್ಧ) ಎಂಬ ಗ್ರಂಥಗಳನ್ನು ಬರೆದು ಖಂಡನಮಂಡನಗಳಿಗೆ ಭೂಮಿಕೆಯನ್ನು ಸಿದ್ಧಪಡಿಸಿದ ಈ ವಿಷ್ಣುದಾಸಾ ಚಾರ್ಯರು ಕಾಲವಾಗಿ ನಲವತ್ತು ವರ್ಷಗಳ ಮೇಲೆ ಬಂದ ವ್ಯಾಸರಾಯಸ್ವಾಮಿಗಳು ಈ ವಾದ ಪ್ರಸಕ್ತಿಯಿಂದ ಮುಕ್ತರಾಗಿರುವಂತೆ ಇರಲಿಲ್ಲ ಅವರ 'ತಾತ್ಪರ್ಯ ಚಂದ್ರಿಕಾ' ಮತ್ತು 'ನ್ಯಾಯಾಮೃತ'ಗಳು ವಾದಗ್ರಂಥಗಳೇ , ಅವುಗಳಲ್ಲಿ ಖಂಡನ– ಮಂಡನದ ಪ್ರಕ್ರಿಯೆ ಇದೆ ಆದರೆ ಅವರ ಮನೋವೃತ್ತಿ ಇದಕ್ಕೆ ಅನುಕೂಲ ವಾಗಿರಲಿಲ್ಲ ಈ ಗೀಳಿನಿಂದ ಬೇಗ ಪಾರಾದರು ಸಾಧನೆಯ ಕಡೆಗೇ ಅವರ ಒಲವು ಇದ್ದುದರಿಂದ ವಾದವಿವಾದಗಳ ಹವ್ಯಾಸ ಅವರಿಗೆ ಅಷ್ಟಾಗಿ ಹಿಡಿಸಲಿಲ್ಲ ತಮ್ಮ ಬದುಕಿನ ಕಡೆಯ ಭಾಗದಲ್ಲಿ ಅವರಿಗೆ ಸಿದ್ಧಾಂತ ಪ್ರಮೇಯಗಳ ಪ್ರತಿಪಾದನೆ ಗಿಂತ ಉಪಾಸನೆಯೇ ದಿಟವಾಗಿ ಮಧ್ವಾಚಾರ್ಯರ ಆಶಯ ಎಂಬುದು ಮನದಟ್ಟಾಯಿತು.

ಈ ಪರಿಸ್ಥಿತಿಯಲ್ಲೇ ಅವರು ಹರಿದಾಸರನ್ನು ಪ್ರೋತ್ಸಾಹಿಸಿದುದು , ಪುರಂದರದಾಸರನ್ನು ಮನಸಾರೆ ಮೆಚ್ಚಿಕೊಂಡುದು ಪುರಂದರದಾಸರು ಧನ್ಯಾಸಿ ರಾಗದ ಕೀರ್ತನೆಯೊಂದರಲ್ಲಿ ತಮ್ಮ ಕಾಲದಲ್ಲಿ ವಾದವಿವಾದಗಳಲ್ಲೇ ತೊಡಗಿರುತ್ತ ತಮ್ಮ ಸಾಧನೆಯ ಕಡೆಗೆ ಏನೇನೂ ಗಮನವನ್ನು ಹರಿಸದ ಮಾಧ್ವ ಸಂಪ್ರದಾಯದ ಗೊಡ್ಡುಪಂಡಿತರನ್ನು ಕುರಿತು ಆಡಿರುವ ಆಕ್ರೋಶದ ಮಾತುಗಳನ್ನು ಗಮನಿಸಿ—

ಇಂಥ ತುಡುಗಮುಂಡೇಗಂಡರಿಗಿನ್ನು ವೈಷ್ಣವ ಸಲ್ಲುವುದೆ ?

ಗಡ್ಡ ಮೀಸೆ ಬೋಳಿಸಿಕೊಂಡು ಗೊಡ್ಡುನಾಮವ ತೀಡಿಕೊಂಡು
ಅಡ್ಡಾದಿಡ್ಡಿ ಮುದ್ರೆಗಳ ಬಡಿದುಕೊಂಡಿನ್ನು
ದೊಡ್ಡ ದೊಡ್ಡ ಮಾತುಗಳಾಡಿ ದೊಡ್ಡವರೆಂದ್ಹೇಳಿಕೊಂಬ
ಬಡ್ಡೀಧಗಡೀ ಮಕ್ಕಳಿಗಿನ್ನು ವೈಷ್ಣವ ಸಲ್ಲುವುದೆ ?

ಭಾಗವತರನ್ನೆ ಕಂಡು ಕಂಡ್ಹಾಂಗೆ ನಿಂದೆ ಮಾಡುತ
ಸೋಗಿಲಿರುವ ಜೋಗೀ ತೊತ್ತಿನ ಮಕ್ಕಳಾದವರು
ನಾವೆ ಶ್ರೇಷ್ಠರೆಂದು ಹೇಳಿಕೊಂಡು ತಿರುಗುವಂಥ
ಗೂಗೆ ಮೋರೆ ನೀಚರಿಗಿನ್ನು ವೈಷ್ಣವ ಸಲ್ಲುವುದೆ ?

ದಾಸರನ್ನು ಇಷ್ಟು ಸಿಟ್ಟಿಗೆಬ್ಬಿಸಿರುವ ಹಿನ್ನೆಲೆಯ ಸಂದರ್ಭವೇನೋ ತಿಳಿಯದು ! ಆದರೆ ಹೀಗೆ ಗ್ರಾಮ್ಯವಾದ ಬೈಗಳನ್ನೂ ಬೀರಲು ಹಿಂದೆ ಮುಂದೆ ನೋಡದ ಧೈರ್ಯ ವ್ಯಾಸರಾಯಸ್ವಾಮಿಗಳ ಪ್ರೋತ್ಸಾಹದಿಂದಲೇ ಬಂದಿರಬೇಕು. ದುರಾಸೆಯಿಂದ ಮರಕ್ಕೆ ಅಂಟಿಕೊಂಡು, ತಮ್ಮ ಪಾಂಡಿತ್ಯದಿಂದ ಹೊಟ್ಟೆ ಹೊರೆದುಕೊಂಡು, ಹೃದಯಸಂಸ್ಕಾರವಿಲ್ಲದೆ ಆಚಾರಶೀಲರೆಂದೂ ಕರ್ಮಠರರೆಂದೂ ಮೆರೆಯುತ್ತ ಇದ್ದ ಪಂಡಿತರೇ ದಾಸರ ಕಣ್ಣನ್ನು ಕುಕ್ಕಿದವರು. ಇಂಥವರನ್ನು ನೋಡಿಯೇ ದಾಸರ ಕುರುಗಳಾದ ವ್ಯಾಸರಾಯಸ್ವಾಮಿಗಳೂ "ಅಂತರಂಗದಲಿ ಹರಿಯ ಕಾಣದವ ಹುಟ್ಟು ಗುರುಡನೋ" ಎಂದು ಮರುಗಿದರು. ಅವರು ಕಂಠಚಾಮೀಕರನ್ಯಾಯದಿಂದ

ನಿಧಿಯ ಮೇಲಿದ್ದು ನಿಧಿಯನರಿಯದಂತೆ
ತನ್ನ ಕಂಠಮಣಿಯ ತಾ ಮರೆತಂತೆ
ಕಣ್ದೆರೆಯದ ಹಸುಳೆ ತಾಯನರಿಯದಂತೆ
ಎನ್ನಲ್ಲಿ ಹೊಂದಿಪ್ಪ ನಿನ್ನನರಿಯದಂತೆ
ನಿನ್ನ ತೋರಿದರೆನಗೆ ನಿನ್ನ ದಾಸರು ಸಿರಿಕೃಷ್ಣ

ಎಂದು ನುಡಿದದ್ದು ಮಧ್ವಶಾಸ್ತ್ರಸಂಪನ್ನರಾದ ಗೊಡ್ಡುಪಂಡಿತರು ಶಾಸ್ತ್ರದ ಸಾರವಾದ ಅಧ್ಯಾತ್ಮಸಾಧನೆಗೆ ಒಂದಿಷ್ಟೂ ಗಮನ ಕೊಡದಿದ್ದುದನ್ನು ಕಂಡೇ. ಗ್ರಂಥಸ್ಥವಾದ ಶಾಸ್ತ್ರಕ್ಕೂ ಬದುಕಿಗೆ ತಕ್ಕ ಸಾಧನೆಗೂ ಇದ್ದ ಅಂತರ ಅವರ ಮನಸ್ಸಿಗೆ ನಾಟಿರಬೇಕು. ಸಾಧನೆಗೆ ಒಲಿದ ಹರಿದಾಸರ ಜೊತೆಯಲ್ಲೇ ಹೆಚ್ಚು ಹೆಚ್ಚು ಕಾಲವನ್ನು ಕಳೆಯತೊಡಗಿದರೆಂದು ಈ ಪದ ಸೂಚಿಸುತ್ತದೆ :

ಹರಿದಾಸರೆಂಬ ನೆರವಿಲ್ಲದೆ ಹರಿಸೇವೆಯೆಂಬ ಪಥ ಕಾಣದೆ
ಹರಿಪದವೆಂಬ ಜನುಮ ಭೂಮಿಯ ಪರಿದು
ದೂರದಲಿ ತಪ್ಪೀಗ ಕಾಣದೆಲೆ
ಮರುಳಾದೆ ಭವಾಟವಿಯಲಿ
ಸಿರಿಪತಿ ನಿನ್ನ ನೇರಿಸೋ ಸಿರಿಕೃಷ್ಣ

"ಹರಿದಾಸರ ಸಂಗ, ಗುರುಕರುಣೆಗಳಿಗೆ ಪ್ರತಿಯಿಲ್ಲ" ಎಂದು ಅವರು ಮನಸ್ಸಿನಲ್ಲಿ ದೃಢಮಾಡಿಕೊಂಡರು ; "ಹರಿಯ ಹೆಸರಿಂದ ಬದುಕುವ ದಾಸ ನಾನು, ಸಿರಿಕೃಷ್ಣ ದಾಸರ ದಾಸ ನಾನು" ಎಂದು ಸಮಾಧಾನ ತಂದುಕೊಂಡರು. ಅವರು ತಮ್ಮ ಶಿಷ್ಯರಿಗೆ ಮಾಡಿದ ಬೋಧೆಯಲ್ಲಿ ಶಾಸ್ತ್ರಾಭ್ಯಾಸಂಗ, ಮತಾಚಾರ ಮೊದಲಾದ ವಿವರಗಳಿಗೆ ಎಡೆಯಿಲ್ಲ :

ನಾಲಗೆಯ ಮೇಲೆ ಹರಿನಾಮ
ಎಲ್ಲರ ಮೇಲೆ ದಯಮಾಡುತಿರಬೇಕು
ಪಾಪರಹಿತನಾಗಿರಬೇಕು
ಕಾಮಲೋಭಗಳನ್ನು ತ್ಯಜಿಸಬೇಕು
ಮಧ್ವರಾಯರನ್ನು ಯಾವಾಗಲೂ ಸ್ಮರಿಸಬೇಕು
ದೊರೆತದ್ದರೊಳಗೆ ತೃಪ್ತನಾಗಿರಬೇಕು
ಪ್ರಪಂಚದಲ್ಲಿ ತೃಪ್ತಿಯಿಂದಿರಬೇಕು

ಇದು ಎಲ್ಲ ಸಾಧಕರಿಗೂ ಸಾಮಾನ್ಯ ಧರ್ಮ. ಮಧ್ವರಾಯರನ್ನು ಸ್ಮರಿಸಬೇಕೆಂಬ ಒಂದು ವಿವರವನ್ನು ಬಿಟ್ಟರೆ ಉಳಿದವು ಯಾರಿಂದಲಾದರೂ ಯಾವ ಕಾಲದಲ್ಲಾದರೂ ಗ್ರಾಹ್ಯವೇ. ತಮ್ಮ ಗುರುಪರಂಪರೆಗೆ ಮೂಲರಾದ ಮಧ್ವಾಚಾರ್ಯರನ್ನು ಸ್ಮರಿಸದೆ ಅವರು ಏನನ್ನೂ ಮಾಡುವಂತಿರಲಿಲ್ಲ. ಮಧ್ವರಾಯರನ್ನು ಸ್ಮರಿಸುತ್ತಲೇ ಇದ್ದ ಗೊಡ್ಡುಪಂಡಿತರು ನಡೆದುಕೊಳ್ಳುತ್ತಿದ್ದ ರೀತಿಯನ್ನು ನೋಡಿ ಬೇಸತ್ತಿದ್ದ ಅವರು ಬೆಳಕಿಗಾಗಿ ಮತ್ತೊಮ್ಮೆ ಮಧ್ವಾಚಾರ್ಯರ ಗ್ರಂಥಗಳನ್ನು ನೋಡಿದ್ದರೆ ಸೋಜಿಗವಲ್ಲ. ಆಚಾರ್ಯರ ಉಪದೇಶಕ್ಕೂ ಗೊಡ್ಡು ಪಂಡಿತರ ಆಚಾರಕ್ಕೂ ಅಂತರ ಒದಗಿಬರುವುದು ಹೇಗೆಂದು ಅವರ ಕುತೂಹಲ ಕೆರಳಿರಬೇಕು.

ಸಿದ್ಧಾಂತ ಪ್ರಮೇಯಗಳಲ್ಲಿ ಪ್ರಕಟವಾಗಿ ನಿರೂಪಣೆಗೆ ಬಂದಂಥವುಗಳನ್ನು ಶಾಸ್ತ್ರಗ್ರಂಥಗಳು ಯುಕ್ತಿಯಿಂದ, ಆಗಮಪ್ರಮಾಣಗಳಿಂದ ಸಮರ್ಥಿಸುತ್ತವೆ, ವಿವರಿಸುತ್ತವೆ. ಆದರೆ ಈ ಪ್ರಮೇಯಗಳ ಹಿಂದೆ ಅಡಗಿದ್ದು, ಆದರೆ ಪ್ರಮೇಯಗಳ ಪ್ರಯೋಜನವೇ ಆದ ಸಾಧನಾಭಾಗ ಅನುಭವದಿಂದ ಸಿದ್ಧವಾಗಬೇಕೇ ವಿನಾ ಯುಕ್ತಿಯಿಂದ ಅಲ್ಲ. ತಾವು ಯುಕ್ತಿಯಿಂದ ತತ್ತ್ವವನ್ನು ನಿರ್ಧರಿಸುತ್ತೇವೆ ಎಂದು

ಪಂಡಿತರು ಬಗೆಯುವುದೂ 'ಸ್ವಾತಂತ್ರ್ಯ ಭ್ರಮ'ವೇ ! ಅದು ಅಪರಾಧವೇ ಆಗುತ್ತದೆ. ಅದಕ್ಕಾಗಿಯೇ ಶ್ರೀಪಾದರಾಜರು "ಹರಿಯೇ ದಯೆಯಿಂದ ದಾಸ್ಯ ಭಾವವನ್ನು ಕೊಡಬೇಕೆ"ಂದು ಸೂಚಿಸಿರುವುದು. ಬುದ್ಧಿಯ ಪ್ರಖರತೆಯಿಂದ, ಪಾಂಡಿತ್ಯದಿಂದ, ವಾಕ್ಯಾರ್ಥಕೌಶಲದಿಂದ ಮುಕ್ತಿಯನ್ನು ಯಾರೂ ಪಡೆದುಕೊಳ್ಳ ಲಾರರು. ಶ್ರೀಪಾದರಾಜರ

'ಭಕ್ತಿ ಬೇಕು ವಿರಕ್ತಿ ಬೇಕು ಸರ್ವ ಶಕ್ತಿಬೇಕು
ಮುಕ್ತಿಯು ಮುಂದೆ ಬಯಸುವಗೆ'

ಎಂಬ ಮಾತು ವ್ಯಾಸರಾಯಸ್ವಾಮಿಗಳ ಮೇಲೆ ಪ್ರಭಾವವನ್ನು ಬೀರಿರಬೇಕು. ಶ್ರೀಪಾದರಾಜರಂತೆ ಅವರ ಶಿಷ್ಯ ವ್ಯಾಸರಾಯಸ್ವಾಮಿಗಳೂ ಅಂತರಂಗಸಾಧನೆಗೆ ಒಲಿದರು ; ಇದೇ ಹರಿದಾಸರಿಗೆ ಹಿರಿಯರಿಂದ ಬಂದ ಬಳುವಳಿಯಾದದ್ದು. ಅನುಭವವೇ ಗುರಿಯಾಗಿ ಅದಕ್ಕೆ ಅನುಗುಣವಾದ ಹಂದರವನ್ನು ವ್ಯಾಸರಾಯ ಸ್ವಾಮಿಗಳು ಸಿದ್ಧಪಡಿಸಿದರು ; ಹಾಗೆ ಮಾಡುವಾಗ ಸಿದ್ಧಾಂತಕ್ಕೊಂದು ಹೊಸ ತಿರುವನ್ನು ಕೊಡಬೇಕಾಯಿತು. ಅವರು ಕೊಟ್ಟ ತಿರುವು ಮುಂದೆ ಹರಿದಾಸರಿಗೆ ಪಾಥೇಯವಾಯಿತು ; ಪ್ರಕೃತ, ಪುರಂದರದಾಸರ ಆಧ್ಯಾತ್ಮಿಕನಿಲುವಿಗೆ ಅದೇ ಒಂದು ಚೌಕಟ್ಟಾಯಿತು. ದಾಸಕೂಟದ ವೈಶಿಷ್ಟ್ಯವನ್ನೂ, ವಿಶಿಷ್ಟಸಾಧನೆಯನ್ನೂ ಅರಿತುಕೊಳ್ಳಬೇಕಾದರೆ ಇದನ್ನು ಗಮನಕ್ಕೆ ತಂದುಕೊಳ್ಳಬೇಕು. ದಾಸಕೂಟದ 'ಮಾಧ್ವನಿಷ್ಠೆ'ಗೂ ವ್ಯಾಸಕೂಟದ 'ಮಾಧ್ವನಿಷ್ಠೆ'ಗೂ ಇರುವ ಅಂತರವೇ ಅವೆರಡರ ನಡುವೆ ಸೆಣಸಾಟವನ್ನು ತಂದೊಡ್ಡಿತು. ಎರಡೂ ನಿಷ್ಠೆಗಳಿಗೆ ಮೂಲ ಪ್ರಮೇಯ ಗಳು ಸಮನಾದರೂ ಅವುಗಳ ಅನ್ವಯದಲ್ಲಿ, ಒತ್ತಿನಲ್ಲಿ, ವಿವರಣೆಯಲ್ಲಿ ಗಮನಾರ್ಹವಾದ ವ್ಯತ್ಯಾಸವಿದೆ.

## 3

ಇದಕ್ಕೆ ಐತಿಹಾಸಿಕ ಸಂದರ್ಭವೂ ನೆರವಾಯಿತು. ಶ್ರೀಪಾದರಾಜರೂ ವ್ಯಾಸ ರಾಯಸ್ವಾಮಿಗಳೂ ಪುರಂದರದಾಸರೂ ಬದುಕಿ ಬಾಳಿದ ಕಾಲದಲ್ಲಿ ದೇಶದಲ್ಲೆಲ್ಲ ಭಕ್ತಿಯ ಹೆಗ್ಗಳಿಕೆ ಒದಗಿದ್ದಿತು. ಈ ಮೂವರು ಇದ್ದ ದೇಶ ಕನ್ನಡ–ಮರಾಠೀ ಪ್ರಾಂತ್ಯಗಳು. ಈ ಪ್ರಾಂತ್ಯಗಳಲ್ಲಿ ನಾಥಪಂಥ, ಮಹಾನುಭಾವಪಂಥ, ವಾರಕರೀ ಪಂಥಗಳು ಜಯಪ್ರಿಯವಾಗಿದ್ದುವು. ನಾಥಪಂಥಕ್ಕೆ ಸೇರಿದ ಮುಕುಂದರಾಜನ 'ವಿವೇಕಸಿಂಧು', 'ಪರಮಾಮೃತ'ಗಳು ಬಳಕೆಯಲ್ಲಿದ್ದುವು. ಮಹಾನುಭಾವಪಂಥದ ಪ್ರವರ್ತಕನಾದ ಚಕ್ರಧರ (1263ರಿಂದ ಮುಂದೆ) ಕೃಷ್ಣಭಕ್ತಿಯನ್ನು ಅಲ್ಲೆಲ್ಲ

ಹರಡಿದ್ದ. ಈ ಪರಂಪರೆಯ ಕೇಶವಾನಂದ ಸೂರಿಯ ವಚನಸಾಹಿತ್ಯ ಜನರ ಬಾಯಲ್ಲಿ ನಿಂತಿತು. ಚಕ್ರಧರನ ಸೇವಿಕೆಯಾಗಿದ್ದ ಮಹದಂಬೆ ಕೃಷ್ಣನ ವಿವಾಹ ವನ್ನು ಕುರಿತು ಬರೆದ ಶೃಂಗಾರರಚನೆಗಳನ್ನು ಜನ ಮೆಚ್ಚಿಕೊಂಡರು. ಸಂತ ಜ್ಞಾನೇಶ್ವರನ ಕಾಲದಲ್ಲಿ ಬಲಗೊಂಡ ವಾರಕರೀ ಸಂಪ್ರದಾಯ (ಪಂಢರಪುರದ ಯಾತ್ರೆಗೆ 'ವಾರೀ' ಎಂದು ಹೆಸರು ; ಅದನ್ನು ಕೈಗೊಳ್ಳುವವರು ವಾರೀಕರಿಗಳು, ವಾರಕರಿಗಳು) ಪಂಢರಪುರದ ಪಾಂಡುರಂಗವಿಟ್ಠಲನನ್ನು ಕೃಷ್ಣಭಕ್ತಿಯ ಕೇಂದ್ರ ವನ್ನಾಗಿ ಮಾಡಿಕೊಂಡಿತು. ಜ್ಞಾನೇಶ್ವರನ ಶಿಷ್ಯ ನಾಮದೇವ-ಸಿಂಪಿ (1270-1350) ಅಧ್ಯಾತ್ಮ ಸಾಧಕರಲ್ಲಿ ಅಗ್ರಗಣ್ಯನೆನಿಸಿದ ; ಅವನ ಪ್ರಭಾವ ನಾಲ್ಕೂ ಕಡೆ ಹರಡಿತು. ಅವನು ಕಾಲವಾಗಿ ಇನ್ನೂರು ವರ್ಷಗಳು ಕಳೆಯಲು ಕಾಣಿಸಿಕೊಂಡ ಏಕನಾಥನೆಂಬ ಸಂತನೂ ಪ್ರಭಾವಶಾಲಿಯೇ. ಇವರಿಂದ ಏಕಾದಶಿಯ ಹಿರಿಮೆ, ಚಕ್ರಾದಿಮುದ್ರೆಗಳ ಅಗತ್ಯ, ಚಂದನ-ತುಳಸೀಮಾಲೆಗಳ ಸ್ವಾರಸ್ಯ ಇವೆಲ್ಲ ವೈಷ್ಣವ ಜನರಲ್ಲೆಲ್ಲ ವಾಡಿಕೆಗೆ ಬಂದವು. ನಾಮದೇವನ ಸಮಕಾಲಿಕರಾದ ಮಧ್ವಾಚಾರ್ಯರು (1238-1317) ವಿಷ್ಣುಭಕ್ತಿಯ ಹೆಗ್ಗಳಿಕೆಯನ್ನು ಶ್ರುತಿಸ್ಮೃತೀತಿಹಾಸ ಪುರಾಣ ಗಳಿಂದ ಸಿದ್ಧಪಡಿಸಿದರು.

ಇವೆಲ್ಲ ಒಂದೇ ನದಿಯ ಹಲವು ಸೀಳುಗಳು. ಈ ಕಾಲದಲ್ಲಿ ಜನರ ಆಸಕ್ತಿ ಯನ್ನು ಸೂರೆಗೊಂಡದ್ದು ಭಕ್ತಿಯ ಸಾಧನೆ ; ಅದರಲ್ಲೂ ನಾಮಸಂಕೀರ್ತನವೆಂಬ ಸರಳಮಾರ್ಗ, ಹರಿಪಾದಸ್ಮರಣೆಯ ಸೌಲಭ್ಯ. 'ನ್ಯಾಯಸುಧಾವಾಗ್ವಜ್ರ'ವೆಂಬ ಶಾಸ್ತ್ರಪ್ರಕರಣಗ್ರಂಥವನ್ನು ಬರೆದು ಪಾಂಡಿತ್ಯಪ್ರೌಢಿಮೆಯ ಯಶಸ್ಸನ್ನು ಪಡೆದು ಮಠಾಧಿಪತಿಗಳೂ ಆಗಿದ್ದ ಶ್ರೀಪಾದರಾಜರು "ನೆನಹಿನಾತುರ ಕೊಟ್ಟು ದಾಸನೆಂದೆ ನಿಸಯ್ಯ" ಎಂಬ ಭಾವವನ್ನು ಹೊರಹೊಮ್ಮಿಸಿದರೆ ಆ ಯುಗಧರ್ಮದ ಪ್ರಭಾವವನ್ನು ಸೂಚಿಸುತ್ತದೆ ; ಇದು ಕೇವಲ ವ್ಯಾಸಕೂಟದ ಪ್ರಕಾರಕ್ಕೆ ಸೇರಿದ 'ಮಾಧ್ವನಿಷ್ಠೆ' ಯಿಂದ ಹೊರಬಂದದ್ದಲ್ಲ. ಅವರಿಗಿಂತ ಪ್ರಭಾವಶಾಲಿಗಳೂ, ಉದ್ದಾಮ ಪಂಡಿತರೂ, ಗ್ರಂಥಕಾರರೂ, ವಿಜಯನಗರದ ಅರಸನ ಗುರುಗಳೂ ಮಠಾಧಿಪತಿಗಳೂ ಆಗಿದ್ದ ವ್ಯಾಸರಾಯಸ್ವಾಮಿಗಳು "ಸಿರಿಕೃಷ್ಣದಾಸರ ದಾಸ ನಾನು" ಎಂದು ಹೇಳಿದಾಗ ಮತ್ತೆ ಈ ಯುಗಧರ್ಮದ ಪ್ರಭಾವವನ್ನೇ ನಾವು ಗುರುತಿಸಬೇಕು. ಯುಗಧರ್ಮದ ಈ ಪ್ರಭಾವವನ್ನು ಅಳವಡಿಸಿಕೊಂಡು ವ್ಯಾಸರಾಯಸ್ವಾಮಿಗಳು ಮಾಧ್ವಸಿದ್ಧಾಂತದ ಮೂಲಪ್ರಮೇಯಗಳಿಗೆ ಹೊಸದೊಂದು ರೂಪವನ್ನು ಒದಗಿಸಿದರು. ಇದು ದಾಸ ಕೂಟದ 'ಮಾಧ್ವನಿಷ್ಠೆ'ಗೆ ಮೂಲಸಾಮಗ್ರಿಯಾಯಿತು.

ಈ ಘಟ್ಟದಲ್ಲಿ, ಮಧ್ವಾಚಾರ್ಯರ 'ತಂತ್ರಸಾರಸಂಗ್ರಹ'ವೆಂಬ ಗ್ರಂಥ ಮುಖ್ಯ ವಾಯಿತು. ಅಲ್ಲಿಯವರೆಗೆ ಇದು 'ಸರ್ವಮೂಲ' ಗ್ರಂಥಗಳಲ್ಲಿ ಸೇರಿದ್ದರೂ, ಪಂಡಿತರ ಗಮನವನ್ನು ಅಷ್ಟಾಗಿ ಸೆಳೆದಿರಲಿಲ್ಲ ; ಈಗಲೂ ಮಾಧ್ವ ಪಂಡಿತಮಂಡಲ ದಲ್ಲಿ ಇದಕ್ಕಿರುವ ಪ್ರಾಶಸ್ತ್ಯ ಅಷ್ಟಕ್ಕಷ್ಟೇ. ಬ್ರಹ್ಮಸೂತ್ರಗಳ ಮೇಲೆ ಮಧ್ವಾ

ಚಾರ್ಯರು ಬರೆದ ನಾಲ್ಕು ಗ್ರಂಥಗಳಿಗೇ (ಅದರಲ್ಲಿಯೂ ಅನುವ್ಯಾಖ್ಯಾನಕ್ಕೆ) ವ್ಯಾಸಕೂಟದಲ್ಲಿ ಅಗ್ರಪಟ್ಟ. ಅವರ 'ಮಾಧ್ವನಿಷ್ಠೆ'ಯೆಲ್ಲ ಹೆಚ್ಚೂ ಕಡಮೆ ಇಷ್ಟಕ್ಕೇ ಸೀಮಿತ ಆದರೆ ಸಾಧನೆಯ ನಿರ್ದಿಷ್ಟ ವಿವರಗಳು ಬಂದಿರುವುದು ಆಚಾರ್ಯರ 'ತಂತ್ರಸಾರ ಸಂಗ್ರಹ'ದಲ್ಲಿಯೇ. ಅದರ ಕಡೆಗೆ ಮಧ್ವಾಚಾರ್ಯರ ಕಾಲದಲ್ಲೇ ಇದ್ದ ತ್ರಿವಿಕ್ರಮಪಂಡಿತಾಚಾರ್ಯರಾಗಲಿ, ನಾರಾಯಣ ಪಂಡಿತಾ ಚಾರ್ಯರಾಗಲಿ, ಪದ್ಮನಾಭತೀರ್ಥರಾಗಲಿ, ನರಹರಿತೀರ್ಥರಾಗಲಿ ಗಮನವನ್ನು ಹರಿಸಲಿಲ್ಲ ಮುಂದೆ ಮಧ್ವಾಚಾರ್ಯರ ತತ್ತ್ವವಾದವನ್ನು ಸಿದ್ಧಾಂತದ ನೆಲೆಗೇರಿ ಸಿದ, ಮತ್ತು ಮಧ್ವಾಚಾರ್ಯರ ಹಲವಾರು ಗ್ರಂಥಗಳ ಮೇಲೆ ಟೀಕೆಗಳನ್ನು ಬರೆದು ಟೀಕಾಚಾರ್ಯರೆಂದು ಹೆಸರಾದ ಜಯತೀರ್ಥರೂ ಈ ಗ್ರಂಥವನ್ನು ಎತ್ತಿಕೊಳ್ಳಲಿಲ್ಲ ಇದಕ್ಕೆ ಸುಮಾರು ವಿಸ್ತಾರವಾದ ವ್ಯಾಖ್ಯಾನ ಮೊಟ್ಟಮೊದಲು, ಅದೇ ಕಟ್ಟಕಡೆಗೆ, ಸಿದ್ಧವಾದದ್ದು ಶೇಷಚಂದ್ರಿಕಾಚಾರ್ಯರೆಂದು ಹೆಸರಾದ ರಘುನಾಥತೀರ್ಥರಿಂದ (1695–1742). ಇವರು ವ್ಯಾಸರಾಯಸ್ವಾಮಿಗಳ ಪರಂಪರೆಯಲ್ಲೇ ಬಂದವರು ಈ ಗ್ರಂಥಕ್ಕೆ ಇತರ ಹತ್ತು ಟೀಕಾಗ್ರಂಥಗಳಿದ್ದರೂ, ಅವೆಲ್ಲ ಅಪ್ರಖ್ಯಾತಪಂಡಿತರಿಂದ. ವ್ಯಾಸರಾಯಸ್ವಾಮಿಗಳ ಸಂಸ್ಕೃತಗ್ರಂಥಗಳು ಜಯತೀರ್ಥರು ತೋರಿಸಿದ ದಾರಿಯನ್ನೇ ಹಿಡಿದವು. ಅವರ ಗಮನ 'ತಂತ್ರಸಾರಸಂಗ್ರಹ'ದ ಕಡೆಗೆ ಹೋದದ್ದು ಅವರು ಸಂಸ್ಕೃತಗ್ರಂಥರಚನೆಯನ್ನು ಬಿಟ್ಟಮೇಲೆ ಎಂದು ತೋರುತ್ತದೆ ಈ ಗ್ರಂಥದ ಪ್ರಭಾವವನ್ನು ಅವರ ಕನ್ನಡ ಪದಗಳಲ್ಲೂ, ಪುರಂದರದಾಸರ ಕೃತಿಗಳಲ್ಲೂ ನಾವು ಗುರುತಿಸಬಹುದು.

'ತಂತ್ರಸಾರಸಂಗ್ರಹ'ವು ದಾಸಕೂಟದಲ್ಲಿ ಹೆಚ್ಚಾಗಿ ಮಾನ್ಯವಾಯಿತು ಎಂಬು ದಕ್ಕೆ ಇನ್ನೂ ನಿದರ್ಶನ ಬೇಕಿದ್ದರೆ ವಿಜಯದಾಸರ 'ಕಂಕಣಾಕಾರ' ಸುಳಾದಿಯನ್ನು ನೋಡಬೇಕು. ಮಧ್ವಾಚಾರ್ಯರು 'ತಂತ್ರಸಾರಸಂಗ್ರಹ'ದಲ್ಲಿ ಚಕ್ರಾಬ್ಜಮಂಡಲದ ಉಪಾಸನೆಯನ್ನು ಉಲ್ಲೇಖಿಸಿದ್ದಾರೆ ; ಅದನ್ನು ಮೊಟ್ಟಮೊದಲು ಗಮನಿಸಿ, ಅದರ ವಿಸ್ತೃತವಾದ ವಿವರಣೆಯನ್ನು ಒದಗಿಸಿದವರು ವಿಜಯದಾಸರು ಮತ್ತು ಅವರ ಶಿಷ್ಯ ಗೋಪಾಲದಾಸರು. ಈ ಉಪಾಸನೆಯಲ್ಲಿ ತಾಂತ್ರಿಕ ಪ್ರಕ್ರಿಯೆಗಳೂ, ಯೋಗ ವಿಧಾನಗಳೂ ವಿಶೇಷವಾಗಿ ಬರುತ್ತವೆ ಹರಿದಾಸರ, ಆಧ್ಯಾತ್ಮಿಕ ನಿಲುವು, ಸಾಧನಾ ಭಾಗ ಸ್ಪಷ್ಟವಾಗುವುದು ಇಲ್ಲಿಯೇ ವ್ಯಾಸಕೂಟದ 'ಮಾಧ್ವನಿಷ್ಠೆ'ಯು ಸೂತ್ರ ಭಾಷ್ಯಗ್ರಂಥಗಳ ಜಾಡನ್ನು ಹಿಡಿದರೆ ದಾಸಕೂಟದ 'ಮಾಧ್ವನಿಷ್ಠೆ'ಯು ತಂತ್ರಸಾರ ಸಂಗ್ರಹದ ಜಾಡನ್ನು ಹಿಡಿಯುತ್ತದೆ ಎಂದು ಹೇಳಿದರೆ ತಪ್ಪಾಗದು. 'ತಂತ್ರಸಾರ ಸಂಗ್ರಹ'ವು ಉಪಾಸನೆಗಾಗಿಯೇ ಸಿದ್ಧವಾದ ಗ್ರಂಥ , ಇದರಲ್ಲಿ ಪಾಂಚರಾತ್ರಾಗಮದ ಪ್ರಭಾವವಿದ್ದು ಮಂಡಲ, ಯೋಗ ವಿಧಿ, ಅರ್ಚನೆ, ಪ್ರತಿಮೆ, ಕ್ಷೇತ್ರ, ಧ್ಯಾನ, ಜಪ ಮೊದಲಾದ ಸಾಮಾನ್ಯ ವಿವರಗಳು ಇರುವುದರಿಂದ, ಮೂಲಭೂತವಾದ ಮತ್ತು ವಿಶಿಷ್ಟವಾದ ಪ್ರಮೇಯಗಳ ಕಟ್ಟುಪಾಡು ಕಡಮೆ ಇದು ಯಾವ ಸಂಪ್ರದಾಯದ

ಸಾಧಕನಿಗಾದರೂ ಉಪಯುಕ್ತವಾದ ಗ್ರಂಥ. ಹರಿದಾಸರ ಧೋರಣೆ ಉದಾರವಾದುದು ಹೀಗೆ.

## 4

'ತಂತ್ರಸಾರಸಂಗ್ರಹ'ದಲ್ಲಿ ಹಾಸುಹೊಕ್ಕಾಗಿ ಬರುವ ವಿಚಾರವೆಂದರೆ ಉಪಾಸನೆ, ಅದರ ಪ್ರಕಾರಗಳು, ವಿಧಿಗಳು. ಮಾಧ್ವಸಂಪ್ರದಾಯದ ಉಪಾಸನೆಯನ್ನು 'ಬಿಂಬೋಪಾಸನೆ'ಯೆಂದು ಕರೆಯುತ್ತಾರೆ. ಈ ಉಪಾಸನೆಯ ಗೊತ್ತುಗುರಿಗಳನ್ನು, ನೆಲೆಹಿನ್ನೆಲೆಗಳನ್ನು ಪ್ರಕಟಪಡಿಸಿದವರು ಹರಿದಾಸರು. ಶ್ರೀಪಾದರಾಜರ, ವ್ಯಾಸರಾಯಸ್ವಾಮಿಗಳ, ಮತ್ತು ಪುರಂದರದಾಸರ ರಚನೆಗಳಲ್ಲಿ ಇದು ಮಧ್ವಾಚಾರ್ಯರ ಗ್ರಂಥಕ್ಕೆ ಸಂಬಂಧಿಸಿದುದೆಂದು ಪ್ರಕಟವಾಗಿ ತೋರಿಕೊಳ್ಳುವುದಿಲ್ಲ. ವಾದಿರಾಜರು, ವಿಜಯದಾಸರು ಅವರ ನಂತರ ಬಂದ ಹರಿದಾಸರು ತಮ್ಮ ರಚನೆಗಳಲ್ಲಿ ಈ ನೆಂಟನ್ನು ಸ್ಪಷ್ಟವಾಗಿ ಕಾಣಿಸಿದ್ದಾರೆ ; ಶಾಸ್ತ್ರಪ್ರಕ್ರಿಯೆಗಳನ್ನು ಬಳಸಿಕೊಂಡಿದ್ದಾರೆ. ಪಂಡಿತರೊಂದಿಗೆ ಸೇರಿ, ಅವರಿಂದ ಮಾನ್ಯರಾಗಬೇಕೆಂಬ ಚಪಲ ದಾಸಕೂಟದವರಲ್ಲಿ ವಿಜಯದಾಸರನಂತರ ಒದಗಿತೆಂದು ಮೊದಲೇ ಸೂಚಿಸಿದ್ದೇನೆ. ಅದು ಹೇಗಾದರಿರಲಿ, ಬಿಂಬೋಪಾಸನೆಯ ಸ್ವಾರಸ್ಯವನ್ನು ಸ್ವಲ್ಪಮಟ್ಟಿಗೆ ಇಲ್ಲಿ ನಾವು ಪರಿಗಣಿಸಬೇಕಾಗುತ್ತದೆ.

ವ್ಯಾಸರಾಯಸ್ವಾಮಿಗಳು ಮಾಧ್ವಸಿದ್ಧಾಂತದ ಮುಖ್ಯ, ಮೂಲ ಪ್ರಮೇಯಗಳನ್ನು ಒಂದು ಪ್ರಸಿದ್ಧವಾದ ಶ್ಲೋಕದಲ್ಲಿ ಸಂಗ್ರಹಿಸಿದ್ದಾರೆ.

> ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ
> ಭೇದಾ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ ।
> ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
> ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

'ಪ್ರಮೇಯ ರತ್ನಾವಳಿ'ಯ ಈ ಶ್ಲೋಕದ ತಾತ್ಪರ್ಯ ಇದು. ಮಧ್ವಾಚಾರ್ಯರು ಪ್ರತಿಪಾದಿಸಿದ ತತ್ತ್ವವಾದದಲ್ಲಿ ಹರಿಯು (ಪರಮಾತ್ಮ, ಪರಬ್ರಹ್ಮ, ನಾರಾಯಣ) ಸ್ವತಂತ್ರ, ಸರ್ವೋತ್ತಮ, ಸರ್ವನಿಯಾಮಕ, ಸರ್ವಾತ್ಮಕ ; 'ಏಕಮೇವ, ಅದ್ವಿತೀಯ'. ಜೀವರು ಅಸಂಖ್ಯಾತರು, ಅವರೆಲ್ಲ ಹರಿಗೆ ಪರಾಧೀನರೇ ; ಅವರಲ್ಲಿ ಅವರವರ ಸ್ವರೂಪ, ಯೋಗ್ಯತೆಗಳನನ್ನುಸರಿಸಿ, ತರತಮಭಾವವಿದೆ. ಎಲ್ಲ ಜೀವರೂ ಉತ್ತಮ, ಮಧ್ಯಮ, ಅಧಮ ಎಂಬ ಮೂರು ವರ್ಗಕ್ಕೆ ಸೇರಿದವರು (ಜೀವತ್ರೈವಿಧ್ಯ) ; ಈ ವಿಭಾಗ ಸಾತ್ತ್ವಿಕ, ರಾಜಸ, ತಾಮಸ ಗುಣಗಳನ್ನು ಅವಲಂಬಿಸಿದ್ದು ; ಜಾತಿ, ಕುಲ, ಮತ, ಧನ ಮೊದಲಾದುವನ್ನಲ್ಲ. ಜಡ–ಜೀವ

ಗಳಿಂದ ಕೂಡಿರುವ ಜಗತ್ತು ಪ್ರವಾಹ ಸತ್ಯವಾದುದು ; ಆದರೆ ಪರಮಾತ್ಮನಂತೆ ಸ್ವತಂತ್ರವಾದ ಸತ್ಯವಲ್ಲ. ಪರಮಾತ್ಮನಿಂದಲೇ ಅದರ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ. ಜೀವನಂತೆ ಜಗತ್ತೂ ಅಸ್ವತಂತ್ರ ತತ್ತ್ವ. ಜೀವನು ತನ್ನ ಮೂಲ ರೂಪವನ್ನು (ಸತ್, ಚಿತ್, ಆನಂದ) ಮುಚ್ಚುವ ಅಜ್ಞಾನವನ್ನು ಕಳೆದುಕೊಂಡು, ತನ್ನ ದಿಟವಾದ ರೂಪವನ್ನು ಮರಳಿ ಪಡೆದುಕೊಳ್ಳುವುದು ಮುಕ್ತಿ. ಇದಕ್ಕೆ ಸಾಧನ 'ಅಮಲಭಕ್ತಿ' ಪ್ರತ್ಯಕ್ಷ ಅನುಮಾನ ಮತ್ತು ಆಗಮ ಎಂಬ ಮೂರು ಪ್ರಮಾಣಗಳು. ಪರಮಾತ್ಮನನ್ನು ಪ್ರತ್ಯಕ್ಷದಿಂದ ಅಥವಾ ಅನುಮಾನದಿಂದ ಸಿದ್ಧಪಡಿಸಲಾಗದು ; ಈ ವಿಚಾರದಲ್ಲಿ ಆಗಮ (ಎಂದರೆ ವೇದ, ಶ್ರುತಿ) ಒಂದೇ ಪ್ರಮಾಣ.

ಈಗ ಮಾಧ್ವಸಿದ್ಧಾಂತದಲ್ಲಿ ಅತಿಮುಖ್ಯ ವಿಚಾರಗಳೆನಿಸಿದ ದೇವತಾ ತಾರ ತಮ್ಯವಾಗಲಿ, ಪಂಚಭೇದವಾಗಲಿ ಇಲ್ಲಿ ಸ್ಪಷ್ಟ ಉಲ್ಲೇಖಕ್ಕೆ ಬಂದಿಲ್ಲವೆಂಬುದನ್ನು ಗಮನಿಸಬೇಕು. ವ್ಯಾಸರಾಯಸ್ವಾಮಿಗಳಿಗೆ ಅವು ಅಷ್ಟು ಮುಖ್ಯವಾದ ವಿವರಗಳೆಂದು ತೋರಲಿಲ್ಲ. ಅವರ ಕನ್ನಡ ಕೃತಿಗಳಲ್ಲೂ ಇವೆರಡರ ಮೇಲಾಟವಿರದು. ಪುರಂದರ ದಾಸರ ಕೃತಿಗಳಲ್ಲೇನೋ ಕೆಲವೆಡೆ ಇವು ಪ್ರಸ್ತಾಪಕ್ಕೆ ಬಂದಿವೆಯೆನ್ನಿ. ಆದರೆ ಮುಂದೆ ದಾಸಸಾಹಿತ್ಯದಲ್ಲಿ ಇವು ತುಂಬ ಪ್ರಧಾನವಾದ ವಿಚಾರಗಳಾದುವು. ಅದಿರಲಿ, ಈಗ ನಮಗೆ ಪ್ರಸ್ತುತವಾದವು ಪರಮಾತ್ಮನ ಸರ್ವೋತ್ತಮತ್ವ, ಜೀವಾತ್ಮರ ಸ್ವರೂಪ ಮತ್ತು ಮುಕ್ತಿಯ ಸಾಧನೆ ಈ ವಿವರಗಳು. ಇವೆಲ್ಲ ಪ್ರಮೇಯಗಳೂ ಮಾಧ್ವಸಿದ್ಧಾಂತದಲ್ಲಿ ಏನೊಂದು ಭಿನ್ನಾಭಿಪ್ರಾಯವಿಲ್ಲದೆ ಅಂಗೀಕೃತವಾಗಿವೆ. ಆದರೆ ಈ ವಿವರಗಳಲ್ಲಿರುವ ಪರಸ್ಪರ ಸಂಬಂಧವನ್ನು ಕುರಿತಂತೆ ಪ್ರಸ್ಥಾನಭೇದವಿದೆ. ನಾವಿಲ್ಲಿ ವ್ಯಾಸರಾಯಸ್ವಾಮಿಗಳ ಕೃತಿಗಳಲ್ಲಿ ಕಾಣಸಿಗುವ ಧೋರಣೆಯನ್ನು ಮಾತ್ರ ಪರಿಶೀಲಿಸಬೇಕು ; ಏಕೆಂದರೆ ಅದೇ ಪುರಂದರದಾಸರ ನಿಲುವು.

ವ್ಯಾಸರಾಯಸ್ವಾಮಿಗಳ ಸುಳಾದಿಯೊಂದರಲ್ಲಿ ಬರುವ ಈ ಮಾತುಗಳನ್ನು ಮೊದಲು ಎತ್ತಿಕೊಳ್ಳುತ್ತೇನೆ, ಏಕೆಂದರೆ ಇದು ಸಾಧನೆಯ ಅಗತ್ಯವನ್ನು ಹೇಳುವ ಮೊದಲು ಪರಿಶೀಲಿಸಬೇಕಾದ ವಿವರ.

'ಆದ್ಯಪರಾಧ ಮಿಥ್ಯಾಜ್ಞಾನ
ದ್ವಿತೀಯ ಹರಿಯ ವಿಸ್ಮರಣೆ
ತೃತೀಯ ನಿಷಿದ್ಧಾವಿಹಿತಾಚರಣೆ
ಚತುರ್ಥ ಅಯೋಗ್ಯನಲ್ಲುಪದೇಶ.'

ಅಪರಾಧವೆಂದರೆ ಬಂಧನಕ್ಕೆ ಒಳಗಾಗುವ ಕಾರಣ. ಜೀವ ಎಂದರೆ ಚಿತ್ ಮತ್ತು ಅಚಿತ್, ಎಂದರೆ ಚೈತನ್ಯ ಮತ್ತು ಜಡಪದಾರ್ಥ, ಎರಡೂ ಹಾಲು–ನೀರಿನಂತೆ ಕೂಡಿಕೊಂಡಿರುವ ಪ್ರಕಾರ. ಜೀವನಿಗೆ ಜಡವಾದ ಸ್ಥೂಲ ಶರೀರ, ಸೂಕ್ಷ್ಮ ಶರೀರ, ಲಿಂಗದೇಹಗಳಿದ್ದು ಅವುಗಳಲ್ಲಿ ಕೆಲಸಮಾಡಿಸುವ ಚೈತನ್ಯವೂ (ಅರಿವು) ಇದೆ.

ಚೈತನ್ಯವೆಂದರೆ ಅಣುವಾಗಿದ್ದರೂ ದೀಪದಂತೆ ತಾನೇ ತನ್ನನ್ನು ಬೆಳಗಿಸಿ, ಬಳಿಯಲ್ಲಿ ರುವ ವಿಷಯಗಳನ್ನೂ ಬೆಳಗಿಸುವ, ಎಂದರೆ ಸಂಪರ್ಕಕ್ಕೆ ಬಂದ ವಿಷಯಗಳನ್ನು ಅನುಭವಿಸುವ ಶಕ್ತಿ. ಚೇತನಗಳಲ್ಲಿ ಎರಡು ಬಗೆ. ಒಂದು ಪರಮಾತ್ಮ (ಸರ್ವ ನಿಯಾಮಕ, ಈಶ್ವರ ; ಲಕ್ಷ್ಮಿಯೂ ಈ ಬಗೆಯಲ್ಲೇ ಸೇರುವಳು), ಮತ್ತೊಂದು ಅನಂತವಾದ ಜೀವರಾಶಿ. ಜೀವವೆನ್ನುವ ಬಗೆಯಲ್ಲಿ ದೇವತೆಗಳು, ಗಂಧರ್ವರು, ಅಸುರರು, ಋಷಿಗಳು, ಪಿತೃಗಳು ಮನುಷ್ಯೋತ್ತಮರು, ಮನುಷ್ಯರು, ಜಂಗಮ ಪ್ರಾಣಿಗಳು, ಸ್ಥಾವರ ಪ್ರಾಣಿಗಳು (ಮರ–ಗಿಡಗಳು) ತಾರತಮ್ಯಕ್ರಮದಿಂದ ಸೇರುತ್ತಾರೆ (ನೋಡಿ ತಾರತಮ್ಯಸ್ತೋತ್ರ). ಇವರಲ್ಲಿ ವಾಯು (ಮುಖ್ಯಪ್ರಾಣ, ಮಾರುತಿ, ಹನುಮ) ಜೀವೋತ್ತಮ ; ಜೀವಕೋಟಿಯಲ್ಲಿ ಪರಮಾತ್ಮನಿಗೆ ತುಂಬ ಹತ್ತಿರದ ಚೇತನ. ಪರಮಾತ್ಮನೊಬ್ಬ ಸ್ವತಂತ್ರ ; ಜೀವರೆಲ್ಲ ಅಸ್ವತಂತ್ರರು.

ಜೀವರ ಸ್ವರೂಪಗುಣಗಳು ನಿತ್ಯ, ಅಣು, ಅಸ್ವತಂತ್ರ (ಸ್ವರೂಪ ಎಂದರೆ ತನ್ನ ಇರವು, ಪ್ರಮಿತಿ ಎಂದರೆ ಅರಿವು, ಪ್ರವೃತ್ತಿ ಎಂದರೆ ಕೆಲಸ ಮೂರೂ ಪ್ರಕಾರಗಳಲ್ಲಿ ಪರಮಾತ್ಮನಿಗೆ ಅಧೀನ), ಅಲ್ಪಜ್ಞ (ಪರಮಾತ್ಮನೊಬ್ಬ ಸರ್ವಜ್ಞ, ಜೀವರೆಲ್ಲ ತಮ್ಮ ತಮ್ಮ ಯೋಗ್ಯತೆಯನ್ನನುಸರಿಸಿ, ಎಂದರೆ ತಾರತಮ್ಯಕ್ರಮದಲ್ಲಿ, ತಮ್ಮನ್ನೂ ಇತರ ಪದಾರ್ಥಗಳನ್ನೂ ತಿಳಿದುಕೊಳ್ಳುತ್ತಾರೆ ; ಎಲ್ಲವನ್ನೂ ಒಟ್ಟಿಗೆ ತಿಳಿಯುವುದು ಜೀವಕೋಟಿಗೆ ಸಾಧ್ಯವಿಲ್ಲ). ಜೀವರಲ್ಲಿ ಮೂರು ವಿಧ (ತ್ರೈವಿಧ್ಯ) : ಸಾತ್ತ್ವಿಕರು, ರಾಜಸರು, ತಾಮಸರು ಎಂದು. ಸಾತ್ತ್ವಿಕ ಜೀವಗಳಿಗೆ ಮಾತ್ರ ಪರಮಾತ್ಮ, ಜೀವಸ್ವರೂಪ, ಬಂಧ, ದುಃಖ, ಮುಕ್ತಿ, ಸಾಧನೆಗಳ ಕಡೆ ಮನಸ್ಸು ಹೋಗುತ್ತದೆ. ಅವರು ಉತ್ತಮರು : ಅವರಿಗೆ ಸುಖ. ರಾಜಸರು ಸಂಸಾರದಲ್ಲಿಯೇ ತೊಡಗಿರುತ್ತ, ಇಲ್ಲಿನ ಭೋಗಗಳನ್ನು ಅರಸುತ್ತ ಸುಖದುಃಖಾದಿಗಳನ್ನು ಅನುಭವಿಸುವರು ; ಇವರದ್ದು ಮಧ್ಯಮವರ್ಗ (ವ್ಯಾಮಿಶ್ರರು). ಇನ್ನು ತಾಮಸರೆಂದರೆ ವಿಷಯ ಸುಖಗಳಲ್ಲೇ ಲೋಲುಪರಾಗಿ, ಧರ್ಮಾಧರ್ಮ ವಿವೇಚನೆಯಿಲ್ಲದೆ, ಪಾಪ ಕರ್ಮಗಳನ್ನೇ ಮಾಡುತ್ತ ಎಂದೂ ದುಃಖವನ್ನು ಪಡೆಯುವವರು.

ಜೀವನಲ್ಲಿ ಬೀಜರೂಪವಾಗಿರುವ ಸ್ವರೂಪಗುಣಗಳು ಮೊಳೆತು, ಬೆಳೆದು, ತಮ್ಮ ಪರಾಕಾಷ್ಠೆಯನ್ನು ಮುಟ್ಟುವ ಸಲುವಾಗಿ ಜೀವನಿಗೆ ದೇಹ ಒದಗುತ್ತದೆ ; ಇಂದ್ರಿಯಗಳು ಒದಗುತ್ತವೆ, ಮನಸ್ಸು ಸಿದ್ಧವಾಗುತ್ತದೆ. ದೇಹವು ಅನುಭವಕ್ಕೆ ಆಸರೆ, ಇಂದ್ರಿಯಗಳೂ ಮನಸ್ಸೂ ಅನುಭವವನ್ನು ಒದಗಿಸುವ ಸಾಧನಗಳು. ಈ ಜಡಶರೀರದ ಸಂಯೋಗವನ್ನೇ ನಾವು ಹುಟ್ಟು ಎಂದು ಕರೆಯುವುದು. ಈ ಸಂಯೋಗವಾಗುವುದು ಪರಮಾತ್ಮನ ಸಂಕಲ್ಪದಿಂದಲೇ ; ನಿಯತವಾದ ಕರ್ಮಫಲ ಗಳನ್ನು ಅನುಭವಿಸಲೆಂದೇ ಸ್ಥೂಲ ದೇಹವನ್ನು ಹೊಂದಿಸುವನು (ಸಾಧಕ ಪ್ರಯೋಜಕ). ಅನಾದಿಕರ್ಮದ ಕಲ್ಪನೆಯಿರುವುದನ್ನೂ ಗಮನಿಸಬೇಕು. ಅನಾದಿ ಕರ್ಮದಿಂದ ಜೀವನಿಗೆ ದೇಹ ಸಂಯೋಗ, ದೇಹ ಸಂಯೋಗದಿಂದ ತ್ರೈವಿಧ್ಯ.

ಜೀವನು ತನ್ನ ಸ್ವರೂಪಯೋಗ್ಯತೆಗನುಸಾರವಾಗಿ ಲಿಂಗದೇಹದೊಂದಿಗೆ ಕೂಡಿಕೊಂಡು ಅದರಿಂದ ಬದ್ಧನಾಗುವುದನ್ನು ವ್ಯಾಸರಾಯಸ್ವಾಮಿಗಳು ಕೃಷ್ಣನ ಮಾಯೆಯೆಂದು ಕರೆದಿದ್ದಾರೆ. ಇಲ್ಲಿ ಮಾಯೆಯೆಂದರೆ ಬಂಧಕಶಕ್ತಿ ; ಜೀವನು ಪ್ರಕೃತಿಯಿಂದ ಬದ್ಧನಾಗಿ ಸಂಸಾರದಲ್ಲಿ ತೊಳಲುವುದು. ಇದನ್ನೇ ಮೇಲೆ ಉದ್ಧರಿಸಿದ ಸುಳಾದಿಯ ಮಾತಿನಲ್ಲಿ 'ಆದ್ಯಪರಾಧ ಮಿಥ್ಯಾಜ್ಞಾನ'ವೆಂದು ವಿವರಿಸಿರುವುದು.

ಈ ಮಿಥ್ಯಾಜ್ಞಾನದ ಫಲವಾಗಿ 'ನಾನೇ ಸ್ವತಂತ್ರವಾಗಿ ಕೆಲಸ ಮಾಡುತ್ತೇನೆ' (ಸ್ವಗತ ಕರ್ತೃತ್ವ), 'ನಾನೇ ಸ್ವತಂತ್ರವಾಗಿ ಭೋಗಿಸುವವನು' (ಭೋಕ್ತೃತ್ವ ಸ್ವಾತಂತ್ರ್ಯ), 'ನನ್ನ ಶರೀರ, ಇಂದ್ರಿಯ, ಮನಸ್ಸುಗಳನ್ನು ಸ್ವೇಚ್ಛೆಯಿಂದ ನಡೆಸುತ್ತೇನೆ' (ಕಾರಕ ಮುಖ್ಯ ಸ್ವಾಮ್ಯ), 'ನನ್ನ ಕೆಲಸಗಳಿಗೆ ತಕ್ಕಂಥ ಫಲವನ್ನು ನಾನೇ ನನ್ನ ಇಚ್ಛೆಯಿಂದ ಪಡೆದುಕೊಳ್ಳುತ್ತೇನೆ' (ಕ್ರಿಯಾಫಲ ಮುಖ್ಯ ಸ್ವಾಮಿತ್ವ), 'ಲೌಕಿಕವಾದ ವಿಷಯಸುಖವೇ ಸುಖ' (ಪುರುಷಾರ್ಥತ್ವ) ಮತ್ತು 'ಈ ಬಗೆಯ ಲೌಕಿಕವಾದ ವಿಷಯಸುಖಕ್ಕೆ ನೆರವಾಗುವ ಎಲ್ಲವೂ ಹಿತವಾದುದೇ' (ತತ್ಸಾಧನ, ಅಪರ ಪರ್ಯಾಯ, ಶೋಭನತ್ವ) ಹೀಗೆ ಆರು ವಿಧವಾದ ಅಭಿಮಾನಗಳು ಹುಟ್ಟಿಕೊಳ್ಳುತ್ತವೆ. ಆಗ ಹರಿಯ ಸ್ವಾತಂತ್ರ್ಯದಲ್ಲಿ, ತನ್ನ ಪರಾಧೀನತೆಯಲ್ಲಿ ಅರಿವು ಜಾರಿ ಹೋಗುತ್ತದೆ. ಇದು 'ಹರಿಯ ವಿಸ್ಮರಣೆ'ಯೆಂಬ ದ್ವಿತೀಯ ಅಪರಾಧ.

ಹರಿವಿಸ್ಮರಣೆಯ ದೃಷ್ಟಫಲವೆಂದರೆ ಪ್ರಾಪಂಚಿಕ ವಿಷಯಗಳಲ್ಲೇ ತೊಡಗಿ, ಧರ್ಮದಿಂದ ಒದಗುವ ಅಭ್ಯುದಯ—ನಿಃಶ್ರೇಯಸಗಳ ಬಯಕೆಯಿಲ್ಲದೆ ಪಾಪಕಾರ್ಯಗಳಲ್ಲಿ ರತಿ ; ಆದರಿಂದ ತನ್ನ ಹಿತಕ್ಕೇ ಘಾಸಿ, ಪರಮಾತ್ಮನಿಗೆ ಅಪ್ರೀತಿ ಎಂಬ ಅರಿವೂ ಇರದೆ ಶಾಸ್ತ್ರವು ಕೂಡದೆಂದು ಹೇಳುವುದರಲ್ಲಿ ಪ್ರವೃತ್ತಿ (ನಿಷಿದ್ಧಾಚರಣೆ) ಮತ್ತು ಶಾಸ್ತ್ರವು ಮಾಡೆಂದು ಹೇಳುವುದರಲ್ಲಿ ನಿವೃತ್ತಿ (ವಿಹಿತದ ಅನಾಚರಣೆ). ಇದು ಮೂರನೆಯ ಅಪರಾಧ. ನಾಲ್ಕನೆಯ ಅಪರಾಧ ಯೋಗ್ಯನಲ್ಲದ ಗುರುವಿನಿಂದ ಉಪದೇಶ ಪಡೆದು ಇರುವ ಸೌಲಭ್ಯವನ್ನೂ ಕಳೆದುಕೊಂಡು, ದಾರಿ ತಪ್ಪಿ, ಮಾನವ ಜನ್ಮವನ್ನು ಹಾನಿ ಮಾಡಿಕೊಳ್ಳುವುದು. ಇಲ್ಲಿ ನಮಗೆ ಪ್ರಸಕ್ತವಾದುದು ಮೊದಲ ಎರಡು ಅಪರಾಧಗಳು —ಮಿಥ್ಯಾಜ್ಞಾನ ಮತ್ತು ಹರಿಯ ವಿಸ್ಮರಣೆ.

ಮೊದಲನೆಯ ತಪ್ಪನ್ನು ತಿದ್ದಿಕೊಳ್ಳುವುದು ಜ್ಞಾನದಿಂದ. ಮಿಥ್ಯಾಜ್ಞಾನಕ್ಕೆ ವಿರುದ್ಧವಾದುದು ಸಮ್ಯಕ್‌ಜ್ಞಾನ. ಈ ಜ್ಞಾನದಲ್ಲಿ ಜೀವನು ಅಸ್ವತಂತ್ರನೆಂದು ಮನಗಾಣುವುದು ಮೊದಲ ಸಾಧನವೆಂದೂ, ಹರಿಯೇ ಸ್ವತಂತ್ರನೆಂದು ಮನದಟ್ಟು ಮಾಡಿಕೊಳ್ಳುವುದು ಎರಡನೆಯ ಸಾಧನವೆಂದೂ ದಾಸಕೂಟದಲ್ಲಿ ನಂಬಿಕೆ. ಒಟ್ಟಿನಲ್ಲಿ ಇದು ಹರಿಯ ಮಾಹಾತ್ಮ್ಯಜ್ಞಾನ. ಹರಿಯು ಜೀವನಾದ ತನಗೆ, ಎಲ್ಲ ಜೀವರಿಗೆ, ಇಡೀ ಬ್ರಹ್ಮಾಂಡಕ್ಕೆ, ಬ್ರಹ್ಮಾಂಡದಲ್ಲೆಲ್ಲ ವ್ಯಾಪ್ತನಾದ ವಾಯುದೇವರಿಗೆ ಬಿಂಬನೆಂದು ತಿಳಿಯುವುದೇ ಮಾಹಾತ್ಮ್ಯ ಜ್ಞಾನ. ಎರಡನೆಯ ಅಪರಾಧವಾದ ವಿಸ್ಮರಣೆಗೆ ವಿರುದ್ಧವಾಗಿ ಸ್ಮರಣೆ (ನಾಮಸ್ಮರಣೆ, ಧ್ಯಾನ, ಸಂಕೀರ್ತನೆ, ಭಜನೆ), ಅಥವಾ

ಅಖಂಡಸ್ಮೃತಿ, ಇದನ್ನೇ ಸುದೃಢವಾದ ಸ್ನೇಹವೆಂದು ಕರೆಯುತ್ತಾರೆ. ಮಾಹಾತ್ಮ್ಯ ಜ್ಞಾನವೂ ಸುದೃಢ ಸ್ನೇಹವೂ ಸೇರಿದರೆ ಭಕ್ತಿಯೆಂದು ಮಧ್ವಾಚಾರ್ಯರ ಮಾತೇ ಇದೆ

'ಮಾಹಾತ್ಮ್ಯ ಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನಚಾನ್ಯಥಾ'

ಇದು ಅವರ ಭಾರತ ತಾತ್ಪರ್ಯ ನಿರ್ಣಯದಲ್ಲಿ ಬರುವ ಮಾತು. ಅಲ್ಲಿಯೇ 'ಜ್ಞಾನಪೂರ್ವಪರ ಸ್ನೇಹ'ವೆಂದು ಭಕ್ತಿಗೆ ಸರಳವಾದ ನಿರ್ವಚನವೂ ಇದೆ. ಹರಿದಾಸರ ಎಣಿಕೆಯಲ್ಲಿ ಜ್ಞಾನವೆಂದರೆ ಹರಿಯು ಬಿಂಬನೆಂಬ ಜೀವನು ಪ್ರತಿಬಿಂಬನೆಂಬ ಅರಿವು ; ಪರಸ್ನೇಹವೆಂದರೆ ಬಿಂಬೋಪಾಸನೆ. ಎರಡೂ ಕೂಡಿ ಭಕ್ತಿಯೆಂದರೆ ಬಿಂಬಾಪರೋಕ್ಷ.

ವಿಜಯದಾಸರ ಶಿಷ್ಯರಾದ ಗೋಪಾಲದಾಸರು (1722–1765) ಮೇಲೆ ವ್ಯಾಸರಾಯರು ಹೇಳಿದ ಮಿಥ್ಯಾಜ್ಞಾನವನ್ನು ಹೋಗಲಾಡಿಸಲು ಬಿಂಬ ಕ್ರಿಯಾ ಜ್ಞಾನವು ಸಮರ್ಥವಾಗುವುದೆಂದು ತಿಳಿಸುತ್ತಾರೆ. ಅದಕ್ಕೆ ಹಿನ್ನೆಲೆಯಾಗಿ 'ಬಿಂಬ ಪೂರ್ಣ, ಪ್ರತಿಬಿಂಬ ಅಪೂರ್ಣ' ಎಂಬ ಜ್ಞಾನ, 'ಬಿಂಬ ಚಲಿಸೆ, ಪ್ರತಿಬಿಂಬ ಚಲಿಸುವ' ಎಂಬ ಜ್ಞಾನ, 'ಎನ್ನ ಬಿಂಬನೆ ಸರ್ವಬಿಂಬ' ಎಂಬ ಜ್ಞಾನ ಎಂದು ಅವರ ಪದವೊಂದು ವಿವರಿಸುತ್ತದೆ. ಹೀಗೆ ಬಿಂಬ ತತ್ತ್ವವು ಗುರೂಪದೇಶದಿಂದ ನಿಶ್ಚಿತವಾದ ಮೇಲೆ ಅದನ್ನು ಕುರಿತು ಎಡೆಬಿಡದೆ ಮನಸ್ಸಿಗೆ ತಂದುಕೊಳ್ಳುವುದು ಧ್ಯಾನವೆನಿಸಿಕೊಳ್ಳುತ್ತದೆ. ಆಚಾರ್ಯರು 'ಧ್ಯಾನಂ ನಿಶ್ಚಿತ ತತ್ತ್ವಸ್ಯ' ಎಂದು ಸಾಧನಾ ಮಾರ್ಗವನ್ನು ಸೂಚಿಸಿದ್ದಾರೆ. ಧ್ಯಾನವೆಂದರೆ ಎಡೆಬಿಡದ ಚಿಂತನೆ ('ಅಖಂಡೋ ಧ್ಯಾನಮುಚ್ಯತೇ') ; ನಿರಂತರವಾದ ಬಿಂಬೋಪಾಸನೆ. ಇದನ್ನೇ ಶ್ರೀಪಾದರಾಜರು ತಮ್ಮ ಪದವೊಂದರಲ್ಲಿ "ನೆನಹಿನಾತುರ"ವೆಂದು ಬಣ್ಣಿಸಿದ್ದಾರೆ. ಇದು ಕೈಗೂಡುವ ಮೊದಲು ಧಾರಣೆಯೆಂಬ ಹಂತ ; 'ಖಂಡಸ್ಮೃತಿಃ ಧಾರಣಾ ಸ್ಯಾತ್' ಎಂದು ಮಧ್ವಾಚಾರ್ಯರದ್ದೇ ನಿರ್ದೇಶನ. ಧಾರಣೆ ಮೊದಲು, ಧ್ಯಾನ ಅನಂತರ. ಆದರೆ ಧಾರಣೆಗೂ ಮೊದಲಿನ ಹಂತಗಳಿವೆ. ಈ ಹಂತಗಳನ್ನು ಎರಡು ಗುಂಪಾಗಿ ವಿಂಗಡಿಸಿದ್ದಾರೆ. ಒಂದು ಅಷ್ಟಾಂಗಯೋಗದ ಚೌಕಟ್ಟಿನಲ್ಲಿ ಯೋಗಾಭ್ಯಾಸದ ದಾರಿ : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳಾದ ಮೇಲೆ ಧಾರಣ, ಧಾರಣವಾದ ಮೇಲೆ ಧ್ಯಾನ. ಇನ್ನೊಂದು ಶಾಸ್ತ್ರಾವಮರ್ಶನವೆಂಬ ಪ್ರಕ್ರಿಯೆ. ಸಚ್ಛಾಸ್ತ್ರಗಳನ್ನು ಯೋಗ್ಯ ಗುರುಗಳಲ್ಲಿ ಅಭ್ಯಾಸಮಾಡಿ (ಶ್ರವಣ), ಅವುಗಳ ತಾತ್ಪರ್ಯವನ್ನು ಮನಸ್ಸಿನಲ್ಲಿ ಗಟ್ಟಿಮಾಡಿಕೊಂಡು (ಮನನ), ಆ ತಾತ್ಪರ್ಯದ ಮುಖ್ಯ ಪ್ರಮೇಯವಾದ ವಿಷ್ಣುತತ್ತ್ವದಲ್ಲಿ ಮನಸ್ಸು ನೆಲೆಗೊಳ್ಳುವಂತೆ ಮಾಡುವುದು (ನಿದಿಧ್ಯಾಸನ).

## 5

ಇವೆರಡು ದಾರಿಗಳೂ ಖಂಡಸ್ಮೃತಿಗೆ ಸಂಬಂಧಪಟ್ಟವೇ. ಇವನ್ನು ಮೀರಿದ ಭಕ್ತಿ ಅಖಂಡಸ್ಮೃತಿಯೆನಿಸಿಕೊಳ್ಳುತ್ತದೆ. ಮಧ್ವಾಚಾರ್ಯರು ತಮ್ಮ ಬೃಹದಾರಣ್ಯಕ ಭಾಷ್ಯದಲ್ಲಿ ಪೈಂಗೀಶ್ರುತಿಯನ್ನುದ್ಧರಿಸುತ್ತ "ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥಾ ದೃಶಿಃ" ಎಂದು ಹೇಳಿದ್ದಾರೆ. ಇಲ್ಲಿ ಧ್ಯಾನವೆಂದರೆ ನಿದಿಧ್ಯಾಸನವೇ. ಧಾರಣೆಯೆಂದರೆ ಖಂಡಸ್ಮೃತಿ, ಧ್ಯಾನ ಅಖಂಡಸ್ಮೃತಿ ಎಂದು ಒಂದು ವಿವರಣೆ. ಆದರೆ ಪ್ರಯೋಗದಲ್ಲಿ ಧ್ಯಾನವನ್ನು ಮೀರಿದ ಭಕ್ತಿ ಎನ್ನುವುದೇ ದಿಟವಾಗಿ ಅಖಂಡ ಸ್ಮೃತಿಯೆನಿಸಿಕೊಳ್ಳುವುದು. ಮಧ್ವಾಚಾರ್ಯರ ಈ ಒಕ್ಕಣೆಯನ್ನನುಸರಿಸಿ ವಾದಿರಾಜ ಸ್ವಾಮಿಗಳು ಹರಿದಾಸರಾಗಿ ಹೇಳಿದ್ದು

'ಅವನ ಶ್ರವಣಮನನ ನಿದಿಧ್ಯಾಸನ
ಆ ವಿಷ್ಣುವಿನ ಭಕ್ತಿ ಮಹಾಪ್ರಸಾದಂಗಳು
ಕೈವಲ್ಯಪದಕೆ ಇಕ್ಕಿದ ನಿಚ್ಚಣಿಕೆ'

ಆದರೆ ಯುಕ್ತಿಮಲ್ಲಿಕೆಯಲ್ಲಿ ಅವರೇ

ಶ್ರವಣಂ ಮನನಂ ಚೈವ ಧ್ಯಾನಂ ಚೇತಿ ಕ್ರಮಾತ್ ತ್ರಯಂ
ಪ್ರಧಾನಾಂಗಂ ಹಿ ಮನಸೋ ದ್ರಷ್ಟವ್ಯೇ ಪರಮಾತ್ಮನಿ'

ಎಂದು ಹೇಳಿ ಧ್ಯಾನದಲ್ಲಿ ನಿಲ್ಲಿಸಿದ್ದಾರೆ ಇದು ಶಾಸ್ತ್ರಾವಮರ್ಶನದ ದಾರಿ; ಸಾಮಾನ್ಯವಾಗಿ ವ್ಯಾಸಕೂಟದವರು ಎತ್ತಿ ಹಿಡಿಯುವುದು ಇದನ್ನೇ. ಯೋಗಾಭ್ಯಾಸದ ಇನ್ನೊಂದು ದಾರಿಯ ಮೇಲೆ ದಾಸಕೂಟದವರ ಒಲವು ಹೆಚ್ಚು. ಅದರಲ್ಲಿ ಇಂದ್ರಿಯ ನಿಗ್ರಹ, ಗುರೂಪದೇಶ, ವಿರಕ್ತಿ, ಸಾಧುಸಂಗ, ಹರಿಕಥಾಶ್ರವಣ, ನಾಮಸ್ಮರಣೆ ಇವುಗಳಿಂದ ಹರಿಯಲ್ಲಿ ಮನಃಪ್ರಾವಣ್ಯ, ಅನಂತರ ಹಂಸೋಪಾಸನೆ, ಬಿಂಬೋಪಾಸನೆಗಳು ಮುಖ್ಯವಾದ ವಿವರಗಳು. ಇದು ವ್ಯಾಸಕೂಟ–ದಾಸಕೂಟಗಳಲ್ಲಿರುವ ಭೇದಕ್ಕೆ ಕಾರಣವಾಯಿತು. ಎರಡೂ ದಾರಿಗಳಿಗೆ ಪೂರ್ವಾಂಗವಾಗಿ ಮಾಹಾತ್ಮ್ಯಜ್ಞಾನ, ಉತ್ತರಾಂಗವಾಗಿ ಭಕ್ತಿ, ಪ್ರಸಾದಗಳು ಸಮ್ಮತವೇ. ಮಧ್ವಾಚಾರ್ಯರು ಬ್ರಹ್ಮಸೂತ್ರಭಾಷ್ಯದ ಜಿಜ್ಞಾಸಾಧಿಕರಣದಲ್ಲಿ ನಾರದೀಯದ ಒಂದು ಮಾತನ್ನು ಉದ್ಧರಿಸಿ 'ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವ ಚ। ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ ॥' ಎಂದು ಭಕ್ತಿಯನ್ನು ಬೇರೆಯಾಗಿ, ಮೊದಲ ಮೂರಕ್ಕಿಂತ ಮಿಗಿಲಾದ ಸಾಧನವೆಂದು ಕಾಣಿಸಿದ್ದಾರೆ. ನಡುವೆ ವ್ಯಾಸಕೂಟದವರು ಶಾಸ್ತ್ರಾವಮರ್ಶನ, ದಾಸಕೂಟದವರು ಯೋಗಾಭ್ಯಾಸಗಳನ್ನು ಹೇಳುತ್ತಾರೆ. ವ್ಯಾಸಕೂಟದವರಿಗೆ ವೇದಾಂತದ (ಎಂದರೆ ಉಪನಿಷತ್ತುಗಳು, ಬ್ರಹ್ಮಸೂತ್ರ) ಆಲಂಬನೆ ಹೆಚ್ಚು.

ದಾಸಕೂಟದವರಿಗೆ ತಂತ್ರಪ್ರಕ್ರಿಯೆಗಳ (ಪಾಂಚರಾತ್ರಾಗಮ, ತಂತ್ರಸಾರ, ಯೋಗ) ಆಲಂಬನೆ ಹೆಚ್ಚು. ವ್ಯಾಸಕೂಟದವರು ಆಚಾರ್ಯರು ಹೇಳಿದರೆಂದು ಭಾಗವತ, ಭಾರತ, ಮೂಲರಾಮಾಯಣ, ವೈಷ್ಣವಪುರಾಣಗಳ ಪ್ರಾಮಾಣ್ಯವನ್ನು ಒಪ್ಪುವವರಾದರೂ ದಾಸಕೂಟದವರಂತೆ ಅವನ್ನೇ ಮೇಲೇರಿಸಿಕೊಳ್ಳುವುದಿಲ್ಲ ; ಅವರಿಗೆ ವೇದವ್ಯಾಸರ ಬ್ರಹ್ಮಸೂತ್ರವೇ ದಾರಿದೀಪ. ಹಾಗೆಂದೇ ಅವರದ್ದು ವ್ಯಾಸಕೂಟ ; ಯೋಗದ ಪ್ರಕ್ರಿಯೆಯಾದ ಬಿಂಬೋಪಾಸನೆ ಹರಿದಾಸರ ವಿಶಿಷ್ಟ ಸಾಧನೆಯಾದುದು ಸಹಜವೇ. ಬಿಂಬೋಪಾಸನೆಯಲ್ಲಿ ಜೀವನ ದಾಸ್ಯಭಾವನೆಯೇ ಮುಖ್ಯವಾದುದರಿಂದ ಇವರದ್ದು 'ದಾಸಕೂಟ'. ಈ ಕೂಟದ ಪ್ರವರ್ತಕರಾದ ಶ್ರೀಪಾದರಾಜರ ಶಿಷ್ಯರೂ, ಈ ಕೂಟವನ್ನು ಬೆಳಗಿದವರೂ ಆದ ವ್ಯಾಸರಾಯಸ್ವಾಮಿಗಳು ದಾಸ ಕೂಟದ ನಿಲುವನ್ನು ಸ್ಪಷ್ಟಪಡಿಸಿದ್ದಾರೆ

ಹರಿಚರಿತೆ ಶ್ರವಣ ದುರಿತಕುಚ್ಚಾಟನ
ಹರಿನಾಮ ಕೀರ್ತನೆ ಭವರೋಗಕ್ಕೆ ಸಿದ್ಧೌಷಧ
ಹರಿಚರಣಸ್ಮರಣ ಮುಕ್ತರೊಳಗರ್ವಣ
ಇಂತು ಹರಿಪಾದಸೇವೆ ಅನಂತಫಲಸಾಧನ

ಇಂತೆಂಬುದೊಂದು ಪೆರ್ವೊಗೆ ಹರಿಸೇವೆ ಫಲರೂಪ
ಶ್ರವಣವೆ ಶುಭದ ಬೆಳಸು ಕೀರ್ತನೆಯ ಲೇಸಿನ ಹೆಚ್ಚಿಗೆ
ಸ್ಮರಣವಚ್ಚಸುಖವೆಂಬ ತೊಟ್ಟಿಲು ಎಂಬುದನುಭವಸಿದ್ಧ
ಸಿರಿಕೃಷ್ಣನ್ನ ಪಾದಸೇವೆಯಲಿ ಮುಕ್ತಿಕನ್ನಿಕೆ ಸೇರುವೆ

## 6

ಇನ್ನು ಬಿಂಬೋಪಾಸನೆಯ ವಿಚಾರವಾಗಿ ಸ್ವಲ್ಪಮಟ್ಟಿಗೆ ಹೇಳಬೇಕಾದದ್ದಿದೆ. ದಾಸಕೂಟದವರು 'ಹರಿದಾಸ'ರೆಂದೇ ಆದುದು ಏಕೆ ? ವಿಷ್ಣುವಿಗೆ ಹಲವಾರು ಹೆಸರುಗಳಿದ್ದರೂ ಇದೊಂದನ್ನು ದಾಸರು ಆರಿಸಿಕೊಂಡುದಕ್ಕೆ ಕಾರಣವಿದೆ. ಮಧ್ವಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ 'ಸರ್ವೇಷಾಂ ಬಿಂಬರೂಪೋ ಹರಿರೇವ' (ಎಂದರೆ ಎಲ್ಲ ಮುಕ್ತಿಯೋಗ್ಯ ಜೀವರಿಗೂ ಬಿಂಬರೂಪಿಯಾಗಿರುವ ಪರಮಾತ್ಮನು ಹರಿಯೇ) ಎಂದು ಹೇಳಿದುದೇ ಕಾರಣ. ಜೀವನೊಂದಿಗೆ ಇರುವ ವಿಷ್ಣುವು ಹರಿ ನಾಮಕನೇ ('ಜೀವೇ ವಿಷ್ಣುಃ ಹರಿನಾಮಕೇನ ಬಿಂಬ ರೂಪೇಣ ಮುಖೇ ಮುಖಂ ಇತ್ಯನೇನ ಕ್ರಿಯೇಣ ಆಸ್ತೇ', ಆರಣ್ಯಕಾಚಾರ್ಯರ ಷೋಡಶೀ) ; ಜೀವಿಯ ಮುಖದಲ್ಲಿ ತನ್ನ ಮುಖ, ಅವನ ಅಂಗೋಪಾಂಗಗಳಲ್ಲಿ ತನ್ನ ಅಂಗೋಪಾಂಗಗಳು ಇರುವುದರಿಂದ ಬಿಂಬರೂಪ. ಮತ್ತು ಹರಿಯೆಂಬ ಹೆಸರಿನಲ್ಲಿ ಜೀವರ ಅಧಿಕಾರ,

ಯೋಗ್ಯತೆಗಳನ್ನು ಪರಿಗಣಿಸದೆ ಪಾಪಗಳನ್ನೆಲ್ಲ ಹೋಗಲಾಡಿಸುವ ಅರ್ಥವಿದೆ ('ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ'). ಆಚಾರ್ಯರ ಉಪನಿಷದ್ಭಾಷ್ಯದಲ್ಲಿ ಇನ್ನೂ ಒಂದು ಒಕ್ಕಣೆಯಿದೆ, ಹರಿಯೆನ್ನುವ ಮಾತು ಯಾವ ದೋಷವೂ ಎಂದೂ ಇಲ್ಲದವನು, ಸಾಧಕನ ಬದುಕಿನಲ್ಲಿ ಸಾರವಾದವನು ಎಂಬ ಅಕ್ಷರಾರ್ಥಗಳನ್ನು ಸೂಚಿಸುತ್ತದೆ ('ನಿತ್ಯಂ ಹೀನೋऽಖಿಲೈರ್ದೋಷೈಃ ಸಾರರೂಪೋ ಯತೋ ಹರಿಃ'). ಇದೇ ಬಿಂಬನ ಲಕ್ಷಣವಾದುದರಿಂದ, ಬಿಂಬೋಪಾಸನೆಯೇ ಸಾಧನೆಯಾಗಿ ಉಳ್ಳವರು ಹರಿ–ದಾಸರಾದರು.

ಬಿಂಬರೂಪಿಯಾದ ಹರಿಯೆಂದರೆ ಸಾಧಕನ ಹೃದಯದಲ್ಲೇ ಅಡಗಿರುವವನು. ಬಿಂಬವೆಂಬ ಸಂಸ್ಕೃತಮಾತಿನ ನಿಷ್ಪತ್ತಿ ನಿರ್ದಿಷ್ಟವಾಗಿಲ್ಲ ; ಆದರೆ ಆ ಮಾತಿನ ಪ್ರಾಚೀನ ಪ್ರಯೋಗ ಸೂರ್ಯಮಂಡಲ, ಚಂದ್ರಮಂಡಲ ಎಂಬರ್ಥಗಳಲ್ಲಿ. ಪ್ರತಿಬಿಂಬವೆಂಬ ಮಾತಿನ ಬಳಕೆಯಿಂದಲೇ ಬಿಂಬವೆಂಬ ಮಾತಿಗೆ ಬೆಲೆ. ನೀರಿನಲ್ಲಿ ಅಥವಾ ಕನ್ನಡಿಯಲ್ಲಿ ಸೂರ್ಯನ ಅಥವಾ ಚಂದ್ರನ ಪ್ರತಿಬಿಂಬವನ್ನು ನೋಡಿ ಅದರ ಮೂಲ ಸೂರ್ಯ ಅಥವಾ ಚಂದ್ರ ಎಂದು ಗುರುತಿಸುವುದು, ಪ್ರತಿಬಿಂಬ ಚಲಿಸಿದರೂ ಬಿಂಬ ಚಲಿಸದೆ ಇರುವುದು, ಒಂದೇ ಬಿಂಬವಿದ್ದರೂ ಹಲವಾರು ಪ್ರತಿಬಿಂಬಗಳಿರುವುದು, ಪ್ರತಿಬಿಂಬಗಳು ನೀರು, ಕನ್ನಡಿ ಮೊದಲಾದ ಉಪಾಧಿಗಳನ್ನವಲಂಬಿಸಿರುವುದು, ಬಿಂಬ ಬಲುದೂರದಲ್ಲಿದ್ದು ಪ್ರತಿಬಿಂಬ ಹತ್ತಿರದಲ್ಲಿರುವುದು, ಬಿಂಬ ಅಗ್ರಾಹ್ಯವಾಗಿ ಪ್ರತಿಬಿಂಬ ಗ್ರಾಹ್ಯವಾಗಿರುವುದು, ಪ್ರತಿಬಿಂಬ ಕಾಣದಾದರೂ ಬಿಂಬ ಇದ್ದೇ ಇರುವುದು, ಇವೆಲ್ಲ ಬಿಂಬ–ಪ್ರತಿಬಿಂಬ ಕಲ್ಪನೆಯಲ್ಲಿ ಅವಶ್ಯವಾಗಿ ಸೇರುವ ವಿವರಗಳು. ಮಧ್ವಾಚಾರ್ಯರು ಮಾಡಿದ ಹರಿಯು ಬಿಂಬ, ಜೀವನು ಪ್ರತಿಬಿಂಬ ಎಂಬ ನಿರೂಪಣೆಯಲ್ಲಿ ಇವೆಲ್ಲ ವಿವರಗಳೂ ಸೇರುತ್ತವೆ.

ಸರ್ವೋತ್ತಮನಾದ, ಸರ್ವೇಶ್ವರನಾದ, ಸರ್ವಾತ್ಮಕನಾದ, ಏಕಮೇವಾದ್ವಿತೀಯನಾದ ಪರಮಾತ್ಮನಿಗೆ ಸ್ವಭಾವವಾಗಿರುವ ಅಚಿಂತ್ಯಾದ್ಭುತ, ಅನನ್ಯಸಾಧಾರಣ ಶಕ್ತಿಯಿಂದ ಹಲವಾರು ರೂಪಗಳಲ್ಲಿ ಅವನ ಮಹಿಮೆ ಸ್ಪಷ್ಟವಾಗುತ್ತದೆ. ಸಾಧಕರಲ್ಲಿ ಕರುಣೆ ತೋರಿ ಮತ್ಸ್ಯ, ಕೂರ್ಮ, ವರಾಹ ಮೊದಲಾದ ದಶಾವತಾರಗಳನ್ನು ತಳೆಯುತ್ತಾನೆ ; ಉಪಾಸನೆಗೆ ಅನುಕೂಲವಾಗಿ ನಾರಾಯಣ, ನರ, ಶೌರಿ ಮೊದಲಾದ ಶತರೂಪಗಳಲ್ಲಿ, ವಿಶ್ವ, ವಿಷ್ಣು ಮೊದಲಾದ ಸಹಸ್ರರೂಪಗಳಲ್ಲಿ(ವಿಷ್ಣುಸಹಸ್ರನಾಮಗಳಲ್ಲಿ ಬರುವುದು), ಪರಾದಿ ಬಹುರೂಪಗಳಲ್ಲಿ, ಅಜಿತಾದಿ ಅನಂತರೂಪಗಳಲ್ಲಿ ತೋರಿಕೊಳ್ಳುತ್ತಾನೆ. ಈ ರೂಪಗಳನ್ನೆಲ್ಲ ಮೂರು ವಿಭಾಗಗಳಲ್ಲಿ ಅಳವಡಿಸುವುದುಂಟು. ಮೊದಲನೆಯದು ಮಹತ್ತತ್ತ್ವವನ್ನು ಹೊರಹೊಮ್ಮಿಸಿ ಸೃಷ್ಟಿಕಾರ್ಯದಲ್ಲಿ ತೊಡಗಿರುವ ರೂಪ (ಪುರುಷ) ; ಎರಡನೆಯದು ಬ್ರಹ್ಮಾಂಡದೊಳಗೆ ವ್ಯಾಪ್ತನಾಗಿ ನಿಯಾಮಕನಾಗಿರುವ ರೂಪ (ಪರಮಾತ್ಮಾ) ; ಮೂರನೆಯದು ಜೀವರಲ್ಲಿ ಅಂತರ್ಯಾಮಿಯಾಗಿರುವ ರೂಪ (ಬಿಂಬ).

'ವಿಷ್ಣೋಸ್ತು ತ್ರೀಣಿ ರೂಪಾಣಿ ಪುರುಷಸ್ಯ ಮಹಾತ್ಮನಃ
ಪ್ರಥಮಂ ಮಹತಃಸ್ರಷ್ಟುರ್ದ್ವಿತೀಯಂ ತ್ವಂಡಸಂಸ್ಥಿತಿಃ
ತೃತೀಯಂ ದೇಹಿನಾಂ ದೇಹೇ ತಾನಿ ಜ್ಞಾತ್ವಾ ವಿಮುಚ್ಯತೇ'

ಮತ್ತೆ ಈ ಮೂರನ್ನು ಸಂಗ್ರಹಿಸಿ ಎರಡು ರೂಪಗಳೆಂದು ಹೇಳುತ್ತಾರೆ— 'ಬಹಿಃಸ್ಥ' ರೂಪ, ಎಂದರೆ ಜೀವರ ಹೊರಗಡೆ ಬ್ರಹ್ಮಾಂಡದಲ್ಲಿ ತೋರಿಕೊಳ್ಳುವ ಅವತಾರಾದಿ ರೂಪಗಳು, ವಿಭವಗಳು ; ಮತ್ತು 'ಜೀವಾಂತಸ್ಥ' ರೂಪ, ಎಂದರೆ ಪ್ರತಿಬಿಂಬರಾದ ಜೀವರ ಒಳಗೆ ಬಿಂಬನಾಗಿ ಇರುವ ರೂಪ. ಇವೆರಡು ರೂಪಗಳಿಗೆ ಇರುವ ವ್ಯತ್ಯಾಸ, ಬಹಿಃಸ್ಥರೂಪವು ಎಲ್ಲ ರೂಪಗಳಿಗೂ ಒಂದೇ ಅಧಿಷ್ಠಾನವಾಗಿ ಅವೆಲ್ಲ ಒಂದೇ ಕಡೆ ಲೀನವಾಗುತ್ತವೆ (ಏಕತ್ರಲೀನ) ; ಅಂತಸ್ಥರೂಪವಾದರೋ ಪ್ರತಿಜೀವಕ್ಕೂ ಬೇರೆ ಬೇರೆಯಾಗಿ ಬಿಂಬಗಳು, ಸಂಸಾರದಲ್ಲಾಗಲಿ ಮುಕ್ತಿಯಲ್ಲಾಗಲಿ ಅವು ಒಂದೆಡೆ ಲೀನವಾಗುವುದಿಲ್ಲ. ಹೀಗೆ ಎರಡು ರೂಪಗಳೋ ಮೂರು ರೂಪಗಳೋ, ದಶಾವತಾರಗಳೋ, ಶತ ಸಹಸ್ರ ಬಹು ಅನಂತರೂಪಗಳೋ ಎಷ್ಟಿದ್ದರೂ ಹೇಗಿದ್ದರೂ ಪರಮಾತ್ಮನಲ್ಲಿ ಭೇದವಿಲ್ಲ. ಅವನ ಅವತಾರಗಳಿಗೂ, ಆಯುಧಗಳಿಗೂ, ಅಂಗಗಳಿಗೂ ಯಾವ ಬಗೆಯ ಭೇದವೂ ಇರದೆ ಇರುವುದರಿಂದ ಅವನು 'ಸ್ವಗತಭೇದ ವಿವರ್ಜಿತ' (ಪ್ರಮೇಯ ಮಾಲಿಕೆ). ಎಲ್ಲ ರೂಪಗಳಲ್ಲಿಯೂ ಅವನು 'ಜ್ಞಾನಾನಂದಾದಿ ಅನಂತಗುಣಗಣಪರಿಪೂರ್ಣ'. ಲೀಲಾವತಾರಗಳಲ್ಲಿ ಅವಕ್ಕೆ ತಕ್ಕಂಥ ಗುಣ, ಕ್ರಿಯೆಗಳಿದ್ದರೂ ಅವನೊಬ್ಬನೆ ; ಅವತಾರಗಳಲ್ಲಿಯಾಗಲಿ ಇತರ ರೂಪಗಳಲ್ಲಾಗಲಿ ಅವನು ತಳೆಯುವ ದೇಹ ಶುಕ್ಲಶೋಣಿತವಿಕಾರಗಳಿಲ್ಲದುವು. ಅವನ ಸ್ವರೂಪಗುಣಗಳಾದ ಸೃಷ್ಟ್ಯಾದ್ಯಷ್ಟಕರ್ತೃತ್ವ (ಎಂದರೆ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮುಕ್ತಿ ಎಂಬ ಎಂಟು ಮಹಾ ಕಾರ್ಯಗಳನ್ನು ಮಾಡುವುದು), ಪಾರತಂತ್ರ್ಯಾದಿ ದೋಷರಾಹಿತ್ಯ (ಇವನ್ನು ಮಾಡುವಾಗ ಬೇರೊಂದು ತತ್ತ್ವವನ್ನು ಆಶ್ರಯಿಸದೆ ಇರುವುದು), ಸರ್ವವಿಲಕ್ಷಣತ್ವ (ಉಳಿದೆಲ್ಲಕ್ಕಿಂತಲೂ ಭಿನ್ನವಾಗಿರುವುದು), ಚತುರ್ವಿಧ ನಾಶರಹಿತತ್ವ (ಪ್ರಾಗಭಾವ ಮೊದಲಾದ ನಾಲ್ಕು ಬಗೆಯ ನಾಶಗಳಿಲ್ಲದಿರುವುದು, ದೇಶ ಕಾಲ ಗುಣಗಳಿಂದ ಪರಿಪೂರ್ಣವಾಗಿರುವುದು), ಸರ್ವಜ್ಞತ್ವ (ಎಲ್ಲವನ್ನೂ ಆಲೋಚನೆಯಿಲ್ಲದೆ ಅರಿಯುವುದು), ಸರ್ವಶಕ್ತಿತ್ವ (ಎಲ್ಲವನ್ನೂ ಮಾಡುವ ಸಾಮರ್ಥ್ಯ), ಸಮಾಧಿಕರಹಿತತ್ವ (ತನಗೆ ಎಣೆಯಾಗಲಿ ಮಿಗಿಲಾಗಲಿ ಯಾರೂ ಇಲ್ಲದಿರುವುದು), ಜಗತ್ತಿಗೆ ಯಥಾ ಯೋಗ್ಯವಾಗಿ ಸತ್ತಾ (ಇರವು), ಪ್ರಮಿತಿ (ಅರಿವು), ಪ್ರವೃತ್ತಿ (ಕೆಲಸ)ಗಳನ್ನು ನೀಡುವ ಶಕ್ತಿ ಇವು ಯಾವ ರೂಪದಲ್ಲೂ ಎಷ್ಟು ಮಾತ್ರಕ್ಕೂ ಕೊರೆಯಾಗುವುದಿಲ್ಲ.

ಹೀಗೆ ಅನಂತರೂಪಗಳುಳ್ಳ, ಸರ್ವವ್ಯಾಪ್ತನಾದ ಪರಮಾತ್ಮನೇ ತನ್ನಲ್ಲಿ ಹೃದಯಾಂತರ್ಗತ ಬಿಂಬರೂಪಿಯಾದ ಹರಿಯಾಗಿದ್ದಾನೆ ಎಂದು ಅರಿತುಕೊಳ್ಳು

ವುದೇ, ಗಟ್ಟಿಮಾಡಿಕೊಳ್ಳುವುದೇ ಬಿಂಬೋಪಾಸನೆ. ಸ್ವಾಭಾವಿಕವಾಗಿಯೇ ಜೀವನು ಪರಮಾತ್ಮನಿಗೆ ಪ್ರತಿಬಿಂಬ, ಬಿಂಬರೂಪಿಯಾದ ಪರಮಾತ್ಮನ ವಶವರ್ತಿ, ಪರತಂತ್ರ, ದಾಸ. ಆದರೆ ವ್ಯಾಸರಾಯಸ್ವಾಮಿಗಳು ಹೇಳಿದ ಆದ್ಯಪರಾಧದಿಂದ ಜೀವನು ತಾನೇ ಸ್ವತಂತ್ರನೆಂಬ ಭ್ರಮೆಗೆ ಪಕ್ಕಾಗುತ್ತಾನೆ. ಇದರಿಂದ ಕಳಚಿಕೊಳ್ಳಲೆಂದೇ ಬಿಂಬೋಪಾಸನೆ ಅನಾದಿಕಾಲದಿಂದಲೂ ಅನಂತಜೀವರಿಗೆ ಬಿಂಬರೂಪಿಯಾಗಿ, ಅವರ ದೇಹ ಇಂದ್ರಿಯ ಮನಸ್ಸು ತತ್ತ್ವಗಳು ಎಲ್ಲದರಲ್ಲಿಯೂ ಆಯಾ ರೂಪವಾಗಿ ಆಯಾ ಗುಣವಾಗಿ, ಆಯಾ ಕಾರ್ಯವಾಗಿ, ತತ್ತ್ವಾಭಿಮಾನಿ ದೇವತೆಗಳಿಗೆ ಪ್ರೇರಕನಾಗಿ (ಪ್ರದ್ಯುಮ್ನ ಮತ್ತು ಅನಿರುದ್ಧ ರೂಪಗಳಿಂದ), ನಿಯಾಮಕನಾಗಿ (ಸಂಕರ್ಷಣ ರೂಪದಿಂದ), ಸಾಕ್ಷಿಯಾಗಿ (ವಾಸುದೇವ ರೂಪದಿಂದ) ಇರುವನೆಂಬುದನ್ನು ಮನಗಾಣುವುದು ಬಿಂಬೋಪಾಸನೆ 'ನೀನು ಕುಣಿದಂತೆ ನಾನು ಕುಣಿವೆ' ('ಬಿಂಬ ಕ್ರಿಯಯಾ ಏವ ಕ್ರಿಯಾವಾನ್') ಎಂಬ ಹರಿದಾಸರ ನಿಲುವು ಇದರ ನಿದರ್ಶನ.

ಪರಮಾತ್ಮನ ಹಲವು ರೂಪಗಳು ಉಪಾಸನೆಗೆ ಯೋಗ್ಯವಾದುವೇ. ಆದರೆ ಜೀವರಿಗೆ ತಮ್ಮ ಬಿಂಬರೂಪನಾದ ಹರಿಯ ಉಪಾಸನೆಯೇ ಸರಳ, ಸುಲಭ, ನೇರ, ಯುಕ್ತ. ಬಿಂಬನ ಜ್ಞಾನವೇ ಮೋಕ್ಷಕ್ಕೆ ಕಾರಣವಾಗುವುದು. ಇತರ ರೂಪಗಳ ಉಪಾಸನೆಯಿಂದ ಮೋಕ್ಷಕ್ಕೆ ಅಡ್ಡಿಯಾಗುವ ಕಾರಣಗಳು ತೊಡೆದುಹೋಗುತ್ತವೆ ಅಷ್ಟೆ; ಮೋಕ್ಷಪ್ರತಿಬಂಧಕ ನಿವೃತ್ತಿ. ಸಾಧನೆಯಲ್ಲಿ ತೊಡಗುವ ಮನಸ್ಸನ್ನು (ಮನಃಪ್ರಾವಣ್ಯ) ಒದಗಿಸುವವನು ಬಿಂಬನೇ, ತತ್ತ್ವೇಶರ ಮೂಲಕ. ಸಾತ್ತ್ವಿಕ ಚೇತನರಿಗೆ ಸಾಧನಾರಂಭದಲ್ಲಿ ಗುರುವನ್ನು ಒದಗಿಸುವವನೂ ಬಿಂಬನೇ; ತಾನೇ ಗುರುವಿನಲ್ಲಿ ನಿಂತು ಯೋಗ್ಯವಾದ ಉಪದೇಶವನ್ನು ನೀಡುತ್ತಾನೆ, ಎಲ್ಲ ಸಾಧನೆಗಳನ್ನೂ ತಿಳಿಯಪಡಿಸುತ್ತಾನೆ, ಅವುಗಳ ಮೂಲಕ ಜಯವನ್ನೂ ಕೊಡುತ್ತಾನೆ. ಹೀಗೆ ತನ್ನೊಳಗೆ ಬಿಂಬವನ್ನು ಕಂಡುಕೊಳ್ಳುವುದಕ್ಕಾಗಿ ನಡೆಸುವ ಸಾಧನೆ ಬಿಂಬೋಪಾಸನೆಯೆನಿಸಿಕೊಳ್ಳುತ್ತದೆ; ಬಿಂಬವನ್ನು ನೇರವಾಗಿ ತತ್ತ್ವದಂತೆ ಕಂಡುಕೊಳ್ಳುವುದು, ಸಾಕ್ಷಾತ್ಕರಿಸಿಕೊಳ್ಳುವುದು ಬಿಂಬಾಪರೋಕ್ಷ.

ಒಂದೊಂದು ಜೀವಕ್ಕೆ ತಕ್ಕಂತೆ ಒಂದೊಂದು ಬಿಂಬ; ಒಬ್ಬೊಬ್ಬರ ಬಿಂಬವೂ ಬೇರೆ ಬೇರೆ. ಎಷ್ಟು ಜೀವಗಳೋ ಅಷ್ಟು ಬಿಂಬಗಳು. ಹೀಗೆಂದಮಾತ್ರಕ್ಕೆ ಪರಮಾತ್ಮನಲ್ಲಿ ಅನೇಕತ್ವವನ್ನು ಅಥವಾ ವೈವಿಧ್ಯವನ್ನು ಹೇಳಬಾರದು; ಅವನು ಹೇಗೂ ಸ್ವಗತಭೇದವಿವರ್ಜಿತ. ಜೀವರಲ್ಲಿರುವ ಭೇದ ಅವರವರ ಗುಣಸಾಮಗ್ರಿಯನ್ನು ಅನುಸರಿಸಿದ್ದು. ಜೀವರಲ್ಲಿ ಸಾತ್ತ್ವಿಕ (ಉತ್ತಮ), ರಾಜಸ (ಮಧ್ಯಮ), ತಾಮಸ (ಅಧಮ) ಎಂಬ ಮೂರು ಬಗೆಗಳಿರುವುದನ್ನು ಆಗಲೇ ಹೇಳಿದೆ. ಅವರವರ ಕರ್ಮ, ಪುಣ್ಯ, ಪಾಪ, ಉಪಾಸನೆ, ಸ್ವರೂಪ, ಯೋಗ್ಯತೆಗಳನ್ನನುಸರಿಸಿ 'ಭಿನ್ನಾ ಜೀವಗಣಾಃ'. ಆದಕ್ಕೆ ತಕ್ಕಂತೆ ಪ್ರೇರಣೆ, ನಿಯಮನ, ಕರ್ಮಫಲಭೋಗದಾನ.

ಈ ವಿಚಾರವನ್ನು ಹೇಳುವಾಗ ಬಿಂಬನು ಜೀವರಲ್ಲಿ ಹೇಗೆ ಇರುವನೆಂಬುದನ್ನೂ ಗಮನಿಸಬೇಕು. ದೇವತಾ ತಾರತಮ್ಯದಲ್ಲಿ ಕಡೆಯವನು (ಅವರ) ಪುಷ್ಕರನಾಮಕ ನೆಂದು ಹೇಳಿದೆ. ಜೀವನಿಗೆ ಅವನೇ ದಿಟವಾಗಿ ಬಿಂಬ. ಆದರೆ ಆ ದೇವತೆಯೂ ಜೀವಕೋಟಿಯಲ್ಲಿ ಸೇರಿದ್ದು ಪ್ರತಿಬಿಂಬನೇ ; ಅವನಿಗೆ ಬಿಂಬರೂಪವಾದುದು ಅವನಿಗಿಂತ ಉತ್ತಮನಾದ ದೇವತೆ ಶನೈಶ್ಚರ. ಅವನಿಗೂ ಇದೇ ಗತಿ. ಪುಷ್ಕರನಿಗೆ ಬಿಂಬನಾದರೂ ತನಗಿಂತ ಉತ್ತಮಳಾದ ಉಷಾದೇವಿಗೆ ಪ್ರತಿಬಿಂಬನೇ. ಹೀಗೆಯೇ ಆರೋಹಣಕ್ರಮದಲ್ಲಿ ಆಕಾಶತತ್ತ್ವಾಭಿಮಾನಿಯಾದ ಗಣಪತಿ ಜೀವರಿಗೆ ಪರಂಪರೆ ಯಿಂದ ಬಿಂಬನಾಗುತ್ತಾನೆ. ಮತ್ತೆ ಹೀಗೆಯೇ ತಾರತಮ್ಯದ ಆರೋಹಣಕ್ರಮ ದಲ್ಲಿ ರುದ್ರ ಶೇಷಗರುಡರು, ಸರಸ್ವತಿ ಭಾರತಿಯರು, ಬ್ರಹ್ಮವಾಯುಗಳು ಬಿಂಬ ರಾಗುತ್ತಾರೆ ; ವಾಯುವು ಜೀವನಿಗೆ ಪರಂಪರೆಯಿಂದ ಬಿಂಬವಾದರೂ ಲಕ್ಷ್ಮಿಗೆ ಪ್ರತಿ ಬಿಂಬನೇ. ಲಕ್ಷ್ಮಿಯು ವಾಯುವಿಗೆ ಬಿಂಬವಾದರೂ ಪರಮಾತ್ಮನಿಗೆ ಪ್ರತಿಬಿಂಬಳೇ. ಆದರೆ ಪರಮಾತ್ಮನು ಜೀವನಿಗೆ ಬಿಂಬನಾಗುವುದು ಲಕ್ಷ್ಮಿಯನ್ನು ಆಸರೆಯಾಗಿರಿಸಿ ಕೊಂಡು (ಅಧಿಷ್ಠಾನ).

ಹೀಗೆ ಪರಮಾತ್ಮನು ತತ್ತ್ವಾಭಿಮಾನಿಗಳ ಮೂಲಕವಾಗಿ ಜೀವನಿಗೆ ಬಿಂಬ. ಬಿಂಬವೆಂಬ ಕಲ್ಪನೆಯಲ್ಲಿ ದ್ರವ್ಯಬಿಂಬ, ಗುಣಬಿಂಬ, ಕ್ರಿಯಾಬಿಂಬವೆಂದು ಮೂರು ವಿಭಾಗಗಳು. ದ್ರವ್ಯಬಿಂಬವೆಂದರೆ ಇರುವ ಎಲ್ಲದರಲ್ಲೂ ಬಿಂಬರೂಪವಾಗಿರುವುದು. ದೇವತಾತಾರತಮ್ಯದಲ್ಲಿ ಹರಿ ಮೊದಲು, ಪುಷ್ಕರ ಕಡೆ. ನಡುವೆ ಹಲವಾರು ದೇವತೆ ಗಳು ಒಬ್ಬೊಬ್ಬರೂ ಒಂದೊಂದು ತತ್ತ್ವಕ್ಕೆ ಅಭಿಮಾನಿಗಳಾಗಿ ಇದ್ದಾರೆ. ಎಲ್ಲರೂ ಹಾಲು–ನೀರಿನಂತೆ ಕಲೆತಿರುತ್ತಾರೆ ; ವಿಭಾಗ ಮಾಡುವುದಾಗದು. ಆದರೆ ಅವರೆಲ್ಲ ಇರುವ ರೀತಿ 'ಬಾಹ್ಯಾಭ್ಯಂತರ ಭಾವ' ; ಎಂದರೆ, ಒಬ್ಬ ತತ್ತ್ವೇಶ ಹೊರಗೆ, ಇನ್ನೊಬ್ಬ ತತ್ತ್ವೇಶ ಒಳಗೆ ; ಒಳಗಿರುವ ತತ್ತ್ವೇಶ ತನ್ನೊಳಗಿರುವ ತತ್ತ್ವೇಶನಿಗೆ ಹೊರಗೆ ಹೀಗೆ ಕ್ರಮವಾಗಿ ತತ್ತ್ವೇಶರ ವ್ಯವಸ್ಥೆ. ಆದರೆ ಎಲ್ಲ ತತ್ತ್ವೇಶರಲ್ಲಿಯೂ ಎಡೆಬಿಡದೆ ವ್ಯಾಪಿಸಿಕೊಂಡಿರುವವನು ಪರಮಾತ್ಮನೇ. ಎಲ್ಲ ತತ್ತ್ವೇಶರೂ ಜೀವರೇ, ಪರಮಾತ್ಮನೇ ಅವರಿಗೆಲ್ಲ ಬಿಂಬ. ಮನುಷ್ಯನ ದೇಹದಲ್ಲಿ ಎಲ್ಲ ತತ್ತ್ವಗಳೂ ಇವೆ ; ಬ್ರಹ್ಮಾಂಡದಲ್ಲಿರುವುದೆಲ್ಲ ಪಿಂಡಾಂಡದಲ್ಲಿದೆ. ಈ ಸಾಮರಸ್ಯಕಲ್ಪನೆ ತಂತ್ರಶಾಸ್ತ್ರ ದಲ್ಲೂ ಇರುವುದನ್ನು ಗಮನಿಸಬೇಕು. ಎಂದಮೇಲೆ ಮನುಷ್ಯನಲ್ಲೇ ಹರಿ ಮೊದ ಲಾಗಿ ಪುಷ್ಕರನವರೆಗೆ ಎಲ್ಲ ತತ್ತ್ವೇಶರೂ ಇದ್ದಾರೆ. ಬೇರೆ ಬೇರೆ ಅವಯವಗಳಲ್ಲಿ, ಅಂಗೋಪಾಂಗಗಲ್ಲಿ ಶರೀರದ ಮೂಲ ಘಟಕಗಳಲ್ಲಿ ಬೇರೆ ಬೇರೆ ತತ್ತ್ವೇಶರು ಅಡಗಿ ದ್ದಾರೆ ; ಅವರಲ್ಲೆಲ್ಲ ಹರಿಯು ಬಿಂಬರೂಪದಲ್ಲಿ ಇರುತ್ತಾನೆ. 'ಮುಖದಲ್ಲಿ ಮುಖ ವಾಗಿ, ಕಣ್ಣಲ್ಲಿ ಕಣ್ಣಾಗಿ, ಅವಯವಗಳಲ್ಲಿ ಅವಯವಾಗಿ ಇರ್ಪ', 'ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಃ' ಎನ್ನುವ ಉಪನಿಷತ್ತಿನ ವಚನದ ಕನ್ನಡರೂಪ.

ಒಂದೊಂದು ಜೀವಕ್ಕೂ ನಿಯತವಾದ, ಸ್ವರೂಪಯೋಗ್ಯತಾನುಸಾರವಾದ ಗುಣಗಳು ; ಶರೀರದ ಗುಣಗಳು, ಇಂದ್ರಿಯದ ಗುಣಗಳು, ಮನಸ್ಸಿನ ಗುಣಗಳು. ಈ ಗುಣಗಳ ಮೂಲವಾಗಿ ಆಯಾ ತತ್ತ್ವೇಶರ ಗುಣಗಳು. ತತ್ತ್ವೇಶರ ಗುಣ ವೈವಿಧ್ಯವೇ ನಮಗೆ ಕಾಣುವ ಗುಣವೈವಿಧ್ಯದ ಕಾರಣ. ಈ ತತ್ತ್ವೇಶರ ವೈವಿಧ್ಯ ವನ್ನು ಅವರವರ ಯೋಗ್ಯತಾನುಸಾರವಾಗಿ ಏರ್ಪಡಿಸುವವನು ಅವರಿಗೆಲ್ಲ ಬಿಂಬವಾದ ಪರಮಾತ್ಮನೇ. ಇದು ಗುಣಬಿಂಬವೆಂಬ ವಿಭಾಗ.

ಹಾಗೆಯೇ ಶರೀರದ ಬೇರೆ ಬೇರೆ ಅಂಗಗಳಲ್ಲಿ ಬೇರೆ ಬೇರೆ ಕ್ರಿಯೆಗಳು ; ಒಂದೊಂದು ಇಂದ್ರಿಯಕ್ಕೂ ಒಂದೊಂದು ಕ್ರಿಯೆ ; ಪ್ರತಿಯೊಂದು ತತ್ತ್ವಕ್ಕೂ ಅದಕ್ಕನುಗುಣವಾದ ವ್ಯಾಪಾರ. ಇದನ್ನು ಆಯಾ ಜೀವನ, ಅವನಲ್ಲಿರುವ ತತ್ತ್ವೇಶರ ಯೋಗ್ಯತಾನುಸಾರವಾಗಿ ವ್ಯವಸ್ಥೆ ಮಾಡುವವನು ಬಿಂಬರೂಪದ ಪರಮಾತ್ಮನೇ. ಎಂದರೆ ನಾವು ಮಾಡುವ ಒಂದೊಂದು ಕೆಲಸವೂ ದಿಟವಾಗಿ ಬಿಂಬನೇ ಮಾಡುವುದು ; ನಮ್ಮ ಮೂಲಕ ಮಾಡಿಸುತ್ತಾನಷ್ಟೆ. "ನಾಹಂ ಕರ್ತಾ ಹರಿಃ ಕರ್ತಾ" ಎಂಬ ನಿರೂಪಣೆಯ ತಾತ್ಪರ್ಯ ಇದೇ. ಪುರಂದರದಾಸರ "ಅಪರಾಧಿ ನಾನಲ್ಲ, ಅಪರಾಧ ವೆನಗಿಲ್ಲ" ಎಂದು ಮೊದಲಾಗುವ ಕೀರ್ತನೆಯಲ್ಲಿ ಇದೇ ಕಲ್ಪನೆಯಿದೆ. ಇದು ಬಿಂಬ ಕ್ರಿಯೆ ಯೆನ್ನುವ ವಿಭಾಗ.

ತ್ರಿವಿಧ ಜೀವರಲ್ಲಿ ದ್ರವ್ಯ, ಗುಣ, ಕ್ರಿಯೆಗಳ ತಾರತಮ್ಯವಿದೆ. ಇದಕ್ಕೆ ಕಾರಣ ತ್ರಿವಿಧ ಬಿಂಬ ವ್ಯಾಪಾರ. ಹೀಗೆ ಮನವರಿಕೆಯಾದ ಮೇಲೆ ಸಾಧಕನು ತಾನಿರುವ ಬಗೆ, ತನ್ನ ಗುಣಗಳು, ತಾನು ಮಾಡುವ ಕೆಲಸ ಎಲ್ಲವೂ ಬಿಂಬಕ್ಕೆ ಸೇರಿದ್ದು, ತಾನು ಆ ಬಿಂಬದ ಪ್ರತಿಬಿಂಬವಷ್ಟೆ, ತನಗೆ ತನ್ನವೇ ಆದ ಯಾವ ಸ್ವಾತಂತ್ರ್ಯವೂ ಇರದು ಎಂಬ ಭಾವನೆಯಿಂದ ಎಲ್ಲವನ್ನೂ ಪರಮಾತ್ಮನಿಗೇ ಅರ್ಪಣೆ ಮಾಡುವುದು ಹರಿದಾಸರ ನಿಲುವು

"ಸರ್ವ ಸ್ವತಂತ್ರ ಹರಿ ತಾನು ಸೂತ್ರನಾಟಕ
ಸರ್ವಚೇಷ್ಟಿ ತಾ ಮಾಡಿಸೆ ಕೀರ್ತಿ ಅಪಕೀರ್ತಿ
ಜೀವರ್ಗೆ ತಂದೀವ..."

"ಹರಿ ಮಾಡಿಸಿದಂತೆ ಎಲ್ಲ ಮಾಡುವೆನಯ್ಯ ನಾನು"

"ಹರಿಯೆ ಸ್ವತಂತ್ರ ಆನು ಅಸ್ವತಂತ್ರ"

"ನಿನ್ನ ಚಿತ್ತಕೆ ಬಂದುದನು ಮಾಡು ಸರ್ವೇಶ
ಎನ್ನ ಸ್ವಾತಂತ್ರ್ಯ ಲವಮಾತ್ರ ಉಂಟೇ ಸ್ವಾಮಿ"

ಈ ನಿಲುವಿನಲ್ಲಿ ಜೀವನು ತಾನು ಮಾಡಿದ ಕೆಲಸವೆಲ್ಲವನ್ನೂ ಹರಿಗೆ ಅರ್ಪಣೆ ಮಾಡುವುದಲ್ಲದೆ, ಕೆಲಸ ಮಾಡಿದ ಕರ್ತೃವೂ ತಾನಲ್ಲ, ಹರಿಯೇ ಮುಖ್ಯ ಕರ್ತೃ, "ಅವನು ಕುಣಿದಂತೆ ನಾನು ಕುಣಿವೆ", "ಹರಿ ಮಾಡಿಸಲು ನಾನು ಮಾಡಿದೆನೆಂಬುವಗೆ ಶರಧಿ ಅರಕಾಲು ಪರಿಮಾಣ ಜಲವು ; ಹರಿಯು ಕರ್ತೃತ್ವವು ಅರಿತಂತೆಲ್ಲ ಭವಜಲಧಿ ಬತ್ತುವುದಿನ್ನು" ಎಂದು ತನ್ನನ್ನೂ ಅರ್ಪಣೆ ಮಾಡಿಕೊಳ್ಳುವುದು ಇಲ್ಲಿನ ಮುಖ್ಯ ವಿಚಾರ. ಕರ್ತೃಸ್ವಾತಂತ್ರ್ಯ, ಭೋಕ್ತೃ ಸ್ವಾತಂತ್ರ್ಯ, ಸತ್ತಾ ಸ್ವಾತಂತ್ರ್ಯ, ಪ್ರಮಿತಿ ಸ್ವಾತಂತ್ರ್ಯ, ಪ್ರವೃತ್ತಿ ಸ್ವಾತಂತ್ರ್ಯ ಎಲ್ಲವೂ ಹರಿಯವೇ ಎಂಬ ತವಕದಿಂದಲೇ ದಾಸ್ಯ ಭಾವನೆ ಮೂಡುವುದು. ವ್ಯಾಸರಾಯಸ್ವಾಮಿಗಳು

"ಆಳು ನಾ ನಿನ್ನಾಳು ನಿನ್ನಾಳು ನಾನು
ನೀನು ತಂದೆ ನಿನ್ನ ಕಂದ ನಾನು
ಶರಣ್ಯ ನಾ ನಿನ್ನ ಶರಣಾಗತನು
ಓವ ನೋವಿತ್ತಿಂತು ಕಾವರು ಯಾರಿನ್ನು
ಶ್ರೀಪತಿ ಸಿರಿಕೃಷ್ಣ ನೀ ಎನ್ನ ನಲಹಬಹುದೊ"

ಎಂದು ಹೇಳಿದುದು ಇದೇ ಭಾವನೆಯ ಕಾವಿನಲ್ಲಿ. ದಾಸಕೂಟದವರಲ್ಲಿ ಬಳಕೆಯಲ್ಲಿರುವ 'ಜೀವಹೋಮ', 'ಸ್ವರೂಪಯಜ್ಞ' ಮೊದಲಾದ ಪ್ರಕ್ರಿಯೆಗಳು ಹರ್ಯರ್ಪಣ ಬುದ್ಧಿಯನ್ನು ಊರ್ಜಿತಗೊಳಿಸಲೆಂದೇ. ಹರಿದಾಸರ ಸಿದ್ಧಾಂತವೆಲ್ಲ ಅಡಗಿರುವುದು 'ಕೃಷ್ಣಾರ್ಪಣ' ಎಂಬ ಸಂಗ್ರಹವಾಕ್ಯದಲ್ಲೇ !

## 7

ವ್ಯಾಸರಾಯಸ್ವಾಮಿಗಳ ಸುಳಾದಿಯೊಂದರಲ್ಲಿ ನಾಲ್ಕು ಬಗೆಯ ಉಪಾಯಗಳನ್ನು ಹೇಳುತ್ತಾರೆ. ಸಾತ್ತ್ವಿಕರಾಗಿ ಮುಕ್ತಿಮಾರ್ಗಕ್ಕೆ ಅಧಿಕಾರಿಗಳಾದವರು ಪರಮಾತ್ಮನನ್ನು ನಾಲ್ಕು ಗುಣಗಳುಳ್ಳವನೆಂದು ಬಗೆದು, ಆ ಪರಮಾತ್ಮನೇ ತನ್ನ ಬಿಂಬವೆಂದು ಭಾವಿಸಿ, ತನ್ನ ಯೋಗ್ಯತಾನುಸಾರವಾಗಿ ನಾಲ್ಕರಲ್ಲಿ ಒಂದು ಗುಣವನ್ನೋ ಎಲ್ಲ ಗುಣಗಳನ್ನೋ ಉಪಾಯವೆಂದು ಅಳವಡಿಸಿಕೊಂಡು ಉಪಾಸನೆ ಮಾಡುವುದು ಇಲ್ಲಿನ ಸಂದರ್ಭ. ಆ ನಾಲ್ಕು ಗುಣಗಳು ಯಾವುವೆಂದರೆ

ಸತ್, 'ಇರುವವ' ('ಶೋಕಾದಿ ದೋಷಾತಿದೂರು' ; ವಾಸುದೇವ ;
ಚಿತ್, 'ಅರಿಯುವವ' ('ಜ್ಞಾನೈಕರಸದಿವ್ಯ ಮೂರುತಿ'); ಸಂಕರ್ಷಣ;
ಆನಂದ, 'ನಲಿಯುವವ' ('ಅಲೌಕಿಕಾಮಂದಾನಂದಸಾಂದ್ರ'); ಪ್ರದ್ಯುಮ್ನ;
ಆತ್ಮ, ('ಸಾಕುವ ತನ್ನ ನಿಜಸ್ವಾಮಿ'); ಅನಿರುದ್ಧ.

ಕಂಸದಲ್ಲಿರುವ ಮಾತುಗಳು ವ್ಯಾಸರಾಯಸ್ವಾಮಿಗಳ ಒಂದು ಸುಳಾದಿಯಿಂದ ಎತ್ತಿಕೊಂಡವು. "ನಾಲ್ಕುಬಗೆಯ ಉಪಾಸನೆಯಿಲ್ಲದವಗೆ ಶ್ರೀಕೃಷ್ಣ ತನ್ನ ಮೂರುತಿಯ ತೋರಗಡ" ಎಂದು ಸುಳಾದಿ ಮುಗಿಯುತ್ತದೆ ಹರಿದಾಸರ ಒಲುಮೆ ಇರುವುದು ಕಡೆಯ ಗುಣವಲ್ಲಿ; ಅದರಲ್ಲಿ ಉಳಿದ ಮೂರೂ ಸೇರಿಕೊಳ್ಳುತ್ತವೆ. ಇದೇ ಬಿಂಬೋಪಾಸನೆಯ ಸ್ವಾರಸ್ಯ. ಪ್ರಾಚೀನ ಹರಿದಾಸರೊಬ್ಬರು (ವಿಜಯದಾಸರಿಗಿಂತ ಹಳಬರು, ಪುರಂದರದಾಸರಿಗಿಂತಲೂ ಹಿಂದಿನವರೆಂದು ಕೆಲವರ ಅಭಿಪ್ರಾಯ) ಇದೆನ್ನು ನೊಗಸಾಗಿ ನಿರೂಪಿಸಿದ್ದಾರೆ.

'ಮಾಡುವನು ಹರಿ ಸಾಕ್ಷಿಯಾಗಿ ಜೀವರೊಳಿದ್ದು
ಮಾಡಿಸುವ ಪ್ರೇರಿಸಿ ತಾನೊಡೆಯನಾಗಿ
ಮಾಡಿದ ಸತ್ಕರ್ಮದಿಂದ ಪೂಜೆಯಗೊಂಡು
ನೀಡುವನು ಅವರ ಯೋಗ್ಯತೆಗೆ ತಕ್ಕ ಫಲವನ್ನು
ಬೇಡಿ ಭಜಿಸಿರೊ ನಮ್ಮ ಮುದ್ದುವಿಠಲರೇಯ
ನಾಡಿನೊಳಗವನೆ ಜಗದೊಡೆಯ ಪರದೈವ'

'ಆತ್ಮ' ಗುಣದಿಂದ ಉಪಾಸನೆ ಮಾಡುವಾಗ ಬಿಂಬನಿಗೆ ಮೂರು ಕರ್ತೃತ್ವಾಂಶಗಳಿರುತ್ತವೆ – ಪ್ರೇರಕ, ನೇಮಕ, ಸಾಕ್ಷಿಕ ಎಂದು; ಎಲ್ಲ ಕೆಲಸಗಳನ್ನೂ ಮಾಡಲು ತೊಡಗಿಸುವುದು, ಕೆಲಸಕ್ಕೆ ತಕ್ಕ ಫಲವನ್ನು ಜೀವ ಪಡೆಯುವಂತೆ ಮಾಡುವುದು, ಕರ್ಮದ ಅಥವಾ ಫಲದ ಲೇಪವಿಲ್ಲದೆ ಶುದ್ಧನಾಗಿರುವುದು. ಜೀವನು ಕೆಲಸ ಮಾಡುವುದು, ಅದರ ಫಲಗಳನ್ನು ಅನುಭವಿಸುವುದು ತನ್ನ ಸ್ವರೂಪವಾದ ಅಲ್ಪಾಂಶದಿಂದ; ಇದೂ ದಿಟವಾಗಿ ಬಿಂಬನ ಅಂಶವೇ ಜೀವನು ಮೂಲಪ್ರಕೃತಿಯಾದ ಲಕ್ಷ್ಮಿಯನ್ನು ಪೂಜಿಸುವಾಗ, ಬಿಂಬನ ಅಂಶಪೂಜೆಯೇ ತಾತ್ಪರ್ಯ. ಅನಾದಿ ಕರ್ಮದ ಸಂಬಂಧದಿಂದ ಜೀವನು ತನ್ನ ಬಿಂಬನ ತ್ರಿವಿಧಕರ್ತೃತ್ವವನ್ನು ಮರೆತು, ಸುಖದುಃಖದ ಅನುಭವಕ್ಕೆ ಕಾರಣವಾದ ಕರ್ಮಗಳನ್ನು ಮಾಡುತ್ತಾನೆ; ಈ ದೇಹದಿಂದ ಪಡೆದುಕೊಂಡ ಕರ್ಮಫಲವನ್ನು ಕರ್ತೃತ್ವದೊಂದಿಗೆ ಜೀವನು ಬಿಂಬನಿಗೇ ಅರ್ಪಣೆಮಾಡಿದಾಗ, ಬಿಂಬನು ಅದನ್ನು ತನ್ನ ಪೂಜೆಯೆಂದು ಬಗೆದು ಒಪ್ಪಿಸಿಕೊಳ್ಳುವನು ತಂದೆಯು ತನ್ನ ಮಗುವಿನ ಕೈಯಿಂದ ಕೆಲಸಮಾಡಿಸಿ ನೋಡಿ ಸಂತೋಷಪಡುವಂತೆ ಬಿಂಬನೂ ಜೀವನಿಂದ ಕೆಲಸಮಾಡಿಸಿ ಅದನ್ನು ತನ್ನ ಪೂಜೆಯೆಂದು ತಿಳಿದು ಮೆಚ್ಚುವನೆಂದು ಮಧ್ವಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ ಹೇಳಿದ್ದಾರೆ. ಜೀವನು ಕರ್ತೃತ್ವವನ್ನೂ, ಕರ್ಮವನ್ನೂ, ಫಲಭೋಗವನ್ನೂ ತನ್ನ ಬಿಂಬನಿಗೇ ಸಮರ್ಪಿಸಿದಾಗ ಬಿಂಬನಿಗೆ ಸ್ವರೂಪಸುಖವುಂಟಾಗುವುದೆಂದೂ ಅದೇ ಪರಮಾತ್ಮನ ಒಲುಮೆಯೆಂದೂ ಮೆಚ್ಚುಗೆಯೆಂದೂ ಭಾವನೆ. ಇದನ್ನೇ ಹರಿದಾಸರು 'ಹರಿಪ್ರೀತಿ'ಯೆಂದು ಬಣ್ಣಿಸಿದ್ದಾರೆ; 'ನಲಿವ, ನಲಿದರೆ ಒಲಿವ'.

ಹರಿಪ್ರೀತಿಗಾಗಿ ಹರಿಯ ವಿಭೂತಿಗಳನ್ನು ಮನನಮಾಡುವ ಪ್ರಕ್ರಿಯೆಯೂ ಹರಿದಾಸರಲ್ಲುಂಟು. ಮಧ್ವಾಚಾರ್ಯರು 'ತಂತ್ರಸಾರಸಂಗ್ರಹ'ದಲ್ಲಿ ಹತ್ತು ತೆರನಾದ ವಿಭೂತಿಗಳನ್ನು ಎಣಿಸಿದ್ದಾರೆ.

(1) ನೀತ—ಪ್ರತಿಮೆಗಳಲ್ಲಿ ಸಾಮಾನ್ಯರು ಕಾಣುವುದು ('ಪ್ರತಿಮಾಸು ಅಪ್ರಬುದ್ಧಾನಾಂ'), ಚಕ್ರಾಬ್ಜಮಂಡಲ, ಅಚಲ (ಶಿಲೆಯ ಪ್ರತಿಮೆಗಳು), ಹೃದಯ (ವಾಸನಾಮಯವಾದ ಮನಸ್ಸಿನಲ್ಲಿ ಮೂರ್ತಿಯಾಗಿ), ಜಲ (ಪುಣ್ಯತೀರ್ಥ, ಕಲಶೋದಕ ಇತ್ಯಾದಿ), ಸ್ಥಲ (ಕ್ಷೇತ್ರ) ಇವುಗಳಲ್ಲಿ ದೇವತಾಸಾನ್ನಿಧ್ಯವನ್ನು ಕಾಣುವುದು. ಮಧ್ವಾಚಾರ್ಯರು ಚಕ್ರಾಬ್ಜಮಂಡಲವನ್ನು ಉಲ್ಲೇಖಿಸಿದ್ದಾರಷ್ಟೆ ; ವಿವರಿಸಲಿಲ್ಲ. ವಿಜಯದಾಸರ ಕಂಕಣಾಕಾರಸುಳಾದಿ ಇದನ್ನು ವಿವರಿಸುತ್ತದೆ.

(2) ಸಾಧಾರಣ—ಸ್ಥಾವರ, ಜಂಗಮ, ಪ್ರಾಣಿಪಕ್ಷಿಗಳಲ್ಲಿ ದೇವತಾಸಾನ್ನಿಧ್ಯವನ್ನು ಕಾಣುವುದು ('ಸಮಃ ಸರ್ವೇಷು ಭೂತೇಷು').

(3) ವಿಶೇಷ—ಕೆಲವು ಐತಿಹಾಸಿಕ, ಪೌರಾಣಿಕ ವ್ಯಕ್ತಿಗಳಲ್ಲಿ ; ಪೃಥು, ಅರ್ಜುನ, ಬಲರಾಮ ಮೊದಲಾದವರಲ್ಲಿ ಆವಿಷ್ಟರೂಪವಾಗಿ ಪರಮಾತ್ಮನನ್ನು ಕಾಣುವುದು.

(4) ಸಜಾತಿ—ಹತ್ತು ಅವತಾರಗಳು (ವಿವರಣೆಗೆ ಮುಂದೆ ನೋಡಿ)

(5) ನೈಜ—ದೇವತೆಗಳೂ ಋಷಿಗಳೂ ತಂತಮ್ಮ ಯೋಗ್ಯತೆಗನುಗುಣವಾಗಿ, ಉಪಾಸನೆ ಮಾಡಿ ಅಪರೋಕ್ಷಾನುಭೂತಿಯನ್ನು ಪಡೆದುಕೊಂಡಾಗ ಅವರಲ್ಲಿ ದೇವತಾಸಾನ್ನಿಧ್ಯವನ್ನು ಕಂಡುಕೊಳ್ಳುವುದು ('ನಿಜೈಶ್ವರ್ಯಯುತಾ.')

(6) ಆಹಿತ—ಸ್ವರೂಪೋದ್ಧಾರಕರಾದ ಗುರುಗಳು, ಆಚಾರ್ಯರು, ಪೂಜಾರ್ಹರಾದ ಅತಿಥಿಗಳು, ಹಿರಿಯರು ಇವರಲ್ಲಿ ದೇವತಾಸಾನ್ನಿಧ್ಯವನ್ನು ಗುರುತಿಸುವುದು.

(7) ಸಹಜ—ಕಲಿಕಾಲದಲ್ಲಿ ಸಾತ್ತ್ವಿಕರನ್ನು ಉದ್ಧರಿಸುವ ಸಲುವಾಗಿ ವಿವಿಧ ಕ್ಷೇತ್ರಗಳಲ್ಲಿ ಸ್ವಯಂವ್ಯಕ್ತರೂಪದಿಂದ ಪರಮಾತ್ಮನು ತೋರಿಕೊಳ್ಳುವುದು (ವೇಂಕಟಾಚಲ, ಉಡುಪಿ, ಶ್ರೀರಂಗ, ಪಂಢರಪುರ ಮೊದಲಾದುವು) ; ಅರ್ಚಾವತಾರಗಳು.

(8) ವಿಜಾತಿ—ಬೇರೆ ಬೇರೆ ತತ್ತ್ವೇಶರಲ್ಲಿ ಆಯಾ ರೂಪಿಗಳಂತೆಯೇ ಕಾಣಿಸಿಕೊಳ್ಳುವುದು ; ಮಹತ್ತತ್ತ್ವದ ಅಭಿಮಾನಿಯಾದ ಬ್ರಹ್ಮನಲ್ಲಿ ಬ್ರಹ್ಮನಂತೆ, ಅಹಂಕಾರತತ್ತ್ವದ ಅಭಿಮಾನಿಯಾದ ರುದ್ರನಲ್ಲಿ ರುದ್ರನಂತೆ, ಆಕಾಶಾಭಿಮಾನಿಯಾದ ಗಣಪತಿಯಂತೆ ಇತ್ಯಾದಿ. ಒಂದೊಂದು ಈ ಬಗೆಯ ದೇವತೆಯೂ ದಿಟವಾಗಿ ಒಬ್ಬನೇ ಪರಮಾತ್ಮನ ವಿಶಿಷ್ಟ ವಿಭೂತಿಯೇ.

(9) ಖಂಡ—ತನ್ನ ಅನಂತಾಂಶದಿಂದ ಒಂದೊಂದು ಪದಾರ್ಥದಲ್ಲೂ, ಪದಾರ್ಥದ ಒಂದೊಂದು ತುಣುಕಿನಲ್ಲೂ ಇರುವನೆಂಬುದು ; ಇಡೀ ಬ್ರಹ್ಮಾಂಡ

ವನ್ನೆಲ್ಲ ಒಳಗೆ ಮತ್ತು ಹೊರಗೆ ವ್ಯಾಪಿಸಿರುವ ಭಾವ ('ಅಂತರ್ಬಹಿಶ್ಚ ತತ್ ಸರ್ವಂ ವ್ಯಾಪ್ಯ ನಾರಾಯಣಃ').

(10) ಅಖಂಡ—ಶಾಲಗ್ರಾಮಶಿಲೆ ಮೊದಲಾದುವಲ್ಲಿ ತನ್ನ ವಿಭೂತಿಯನ್ನು ಒಟ್ಟಾರೆ ಇರಿಸಿರುವುದು.

ಈ ಕಲ್ಪನೆಯಿರುವುದರಿಂದ ಹರಿದಾಸರು ತಮ್ಮ ಆಧ್ಯಾತ್ಮಿಕ ಪ್ರವೃತ್ತಿಯನ್ನು ಹಲವು ಪ್ರಕಾರಗಳಲ್ಲಿ ಹರಿಸಿದರು : ಪುರಾಣಕತೆಗಳು, ಭಕ್ತರು, ಭಾಗವತರು, ತೀರ್ಥಕ್ಷೇತ್ರಗಳು, ಅರ್ಚಾಮೂರ್ತಿಗಳು, ಅಧ್ಯಾತ್ಮಚಿಂತನೆ ಮುಂತಾಗಿ ಹರಿದಾಸರ ಮುಖ್ಯ ನಿಲುವೇದರೆ ಪರಮಾತ್ಮನು ಸಗುಣನೆಂಬುದು. "ಸತ್ಯವಿದು ಹರಿಯ ಸದ್ಗುಣಗಳೆಂಬೋ ರಾಶಿ" (ಮುದ್ದುವಿಠಲ). ಪ್ರಾಕೃತವಾದ ಆಕಾರವಿಲ್ಲದ್ದರಿಂದ ಪ್ರಾಕೃತವಾದ ಗುಣಗಳಿಲ್ಲ ; ಆದರೆ ದಿವ್ಯದೇಹವಿದ್ದು ಬ್ರಹ್ಮಾಂಡದ ಎಂಟು ಮಹಾ ಕಾರ್ಯಗಳನ್ನೂ (ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಅಜ್ಞಾನ, ಜ್ಞಾನ, ಬಂಧ, ಮುಕ್ತಿ) ನಡೆಸುವವನಾದ್ದರಿಂದ ಸಗುಣನೇ. ಪರಮಾತ್ಮನ ಎಲ್ಲ ಆಕಾರಗಳೂ ಎಲ್ಲ ಗುಣಗಳೂ ಅವನ ಇಚ್ಛೆಯಂತೆಯೆ.

'ನ ತೇ ರೂಪಂ ನ ಚಾಕಾರೋ ನಾಯುಧಾನಿ ನ ಚಾಸ್ಪದಂ ।
ತಥಾಪಿ ಪುರುಷಾಕಾರಃ ಭಕ್ತಾನಾಂ ತ್ವಂ ಪ್ರಕಾಶಸೇ ॥'

ಜೀವಾಂತರ್ಯಾಮಿಯಾದ ಬಿಂಬನೇ ಸಗುಣ ಬ್ರಹ್ಮ : ವಿಶ್ವ, ವಿಷ್ಣು, ವಷಟ್ಕಾರ. ಅವನಿಗೆ ಅನಂತಾವತಾರಗಳು ಸಂಗತವೇ. ಜಗಜ್ಜನ್ಮಕ್ಕೆ ಕಾರಣನಾದವನೇ ಇಂದ್ರಿಯ ಪ್ರವರ್ತಕ. ಬ್ರಹ್ಮಾಂಡದ ನಾಯಕನೇ ಪಿಂಡಾಂಡಕ್ಕೂ ನಾಯಕ. ಪರಬ್ರಹ್ಮನೆಂದು ಶ್ರುತಿ ಹೇಳುವುದು ಬಿಂಬವನ್ನು ಕುರಿತೇ.

ಈ ದೃಷ್ಟಿಯಿರುವುದರಿಂದ ಬಿಂಬೋಪಾಸನೆಯಲ್ಲಿ ಸಗುಣವರ್ಣನೆಯೇ ಎದ್ದು ಕಾಣುತ್ತದೆ. ಪರಮಾತ್ಮನ ಪುರುಷಾಕಾರ, ಸೌಂದರ್ಯ, ಕಾರುಣ್ಯ, ವೀರ್ಯ, ತೇಜಸ್ಸು, ಮೊದಲಾದುವನ್ನು ವರ್ಣಿಸುವುದರಲ್ಲಿ ಹರಿದಾಸರ ಪ್ರೀತಿ ಹೆಚ್ಚು : ಅವತಾರಗಳ ತಾತ್ಪರ್ಯ, ಸ್ವಾರಸ್ಯಗಳನ್ನು ಹಾಡಿ ಹೊಗಳುವುದು ಅವರಿಗೆ ಇಷ್ಟವಾದುದು. ಅವರ ರಚನೆಗಳಿಗೆ ಸಾಮಗ್ರಿ ಪುರಾಣಗಳಿಂದಲೇ ಬಹುಮಟ್ಟಿಗೆ ಒದಗಿರುವುದು ಈ ಕಾರಣದಿಂದ. ಆಗಮಗಳಲ್ಲಿ ಅಪೌರುಷೇಯ, ಪೌರುಷೇಯ ಎಂದು ಎರಡು ವಿಭಾಗ. ಮೊದಲನೆಯದರಲ್ಲಿ ವೇದ, ಉಪನಿಷತ್ತು, ಅವನ್ನನುಸರಿಸಿದ ಭಗವದ್ಗೀತೆ, ಬ್ರಹ್ಮಸೂತ್ರಗಳು ಸೇರುತ್ತವೆ. ಎರಡನೆಯದರಲ್ಲಿ ಭಾರತ, ಪಾಂಚರಾತ್ರ, ಮೂಲರಾಮಾಯಣ, ಮತ್ತು ತತ್ತ್ವನಿಶ್ಚಯಕ್ಕೆ ಅನುಕೂಲವಾಗುವ ಪುರಾಣ ಇತಿಹಾಸ ಸ್ಮೃತಿಗಳು ಸೇರುತ್ತವೆ. ಇಲ್ಲಿಯೂ ವ್ಯಾಸಕೂಟ, ದಾಸಕೂಟಗಳಿಗಿರುವ ವ್ಯತ್ಯಾಸವನ್ನು ನೆನಪಿಗೆ ತಂದುಕೊಳ್ಳಬೇಕು. ವ್ಯಾಸಕೂಟದವರಿಗೆ

ಅಪೌರುಷೇಯ ಆಗಮಗಳ ಮೇಲೆ ಹೆಚ್ಚಿನ ವಿಶ್ವಾಸ ; ಹರಿದಾಸರಿಗೆ ಪಾಂಚರಾತ್ರ, ಭಾರತ, ಪುರಾಣ ಮೊದಲಾದ ಪೌರುಷೇಯ ಆಗಮಗಳ ಮೇಲೆ ಆದರ.

ಭಾರತ, ಭಾಗವತ, ಪುರಾಣ ಮೊದಲಾದುವುಗಳಲ್ಲಿ ಬರುವ ಕತೆಗಳು ಹರಿಯ ಮಾಹಾತ್ಮ್ಯೆಯನ್ನು ತಿಳಿಯಪಡಿಸುವುದರಿಂದ ಅವು ಹರಿದಾಸರಿಗೆ ಮಾನ್ಯ. ಶ್ರೀಪಾದರಾಜರೂ ವ್ಯಾಸರಾಯಸ್ವಾಮಿಗಳೂ ಪುರಾಣಪ್ರಕ್ರಿಯೆಯನ್ನು ಹೆಚ್ಚಾಗಿ ಬಳಸಿಕೊಂಡರು ಇದಕ್ಕೆ ಕಾರಣವನ್ನು ವ್ಯಾಸರಾಯಸ್ವಾಮಿಗಳ ಶಿಷ್ಯರಾದ ವಾದಿ ರಾಜರು ತಿಳಿಸುತ್ತಾರೆ

'ಈ ಕಲಿಯುಗದಲ್ಲಿ ಬೇಕಾದ ಪುರಾಣ ವಾಕು ವಿ
ವೇಕದಿ ಮನದಿ ವಿಚಾರಿಸಿ
ಸ್ವೀಕರಿಸು ವೈಷ್ಣವರ ಮತವ'

ವ್ಯಾಸರಾಯಸ್ವಾಮಿಗಳೇ "ಹರಿಚರಿತೆ ಶ್ರವಣ ದುರಿತಕುಚ್ಚಾಟನ" ಎಂದಿದ್ದಾರೆ. ಹೀಗೆ ಪುರಾಣಗಳಿಂದ, ಹರಿಕಥಾಶ್ರವಣದಿಂದ ಸಿದ್ಧವಾಗುವುದು "ಸಗುಣ ಸಾಕಾರ ಸಕಲ ಸುರರೊಡೆಯ, ನಿರ್ಜರರೆಲ್ಲ ಹರಿಯ ಕಿಂಕರರೆಂ"ಬುದು. ಪುರಾಣಗಳಲ್ಲಿ ಬರುವ ನಾಮಸ್ಮರಣೆ, ಸಂಕೀರ್ತನೆ, ಭಜನೆಗಳು ಹರಿದಾಸರಿಗೆ ವಿಹಿತವಿಧಿಗಳಾದುವು. ಇಲ್ಲಿ ಮುಖ್ಯವಾಗಿ ತೋರಿಕೊಳ್ಳುವ ಭಕ್ತಿಗೆ ದಾಸಕೂಟದಲ್ಲಿ ಒತ್ತು ಹೆಚ್ಚಿದುದು ಸಹಜವೇ . ನವವಿಧಭಕ್ತಿಗಳ ಪರಿಪಾಟಿಯೂ ಒದಗಿಬಂದಿತು.

## 8

ಭಕ್ತಿಗೆ ತಾತ್ತ್ವಿಕವಾದ ಹಿನ್ನೆಲೆಯನ್ನೂ ಗಮನಿಸಬೇಕು. ಭಕ್ತಿಯನ್ನು ಮಾಡಬೇಕಾದವನು ಜೀವ ; ಭಕ್ತಿಗೆ ಗುರಿಯಾಗುವವನು ಹರಿ. ಜೀವನು ಅಣು, ನಿತ್ಯ, ಸ್ವಪ್ರಕಾಶ. ಕುದುರೆಯ ಬಾಲದ ಒಂದು ಕೂದಲನ್ನು ನೇರವಾಗಿ ಒಂದು ಸಾವಿರ ಸೀಳುಗಳಾಗಿ ವಿಭಾಗಮಾಡುವುದಾದರೆ ಒಂದು ಸೀಳು ಜೀವನ ಸ್ವರೂಪ ಪರಿಮಿತಿ. ಈ ಜೀವನ ಹೃದಯ ಕಮಲದಲ್ಲಿ ಹರಿಯು ಮೂರು ತೆರನಾಗಿ ಇದ್ದಾನೆ. ಹೃದಯಕಮಲದ ಕರ್ಣಿಕೆಯ ತುದಿಯಲ್ಲಿ, ಸಾಧಕನ ಹೆಬ್ಬೆರಳು ಗೆಣ್ಣಿನ ಪ್ರಮಾಣದಲ್ಲಿ, 'ಅಗ್ರೇಶ'; ಇವನನ್ನು ಪ್ರಾಜ್ಞರೂಪವೆಂದೂ ಕರೆಯುತ್ತಾರೆ. ಜೀವರ ನಿದ್ರೆಗೆ ಇವನೇ ಕಾರಣ. ಹೃದಯಾಕಾಶದಲ್ಲಿ ಎಲ್ಲೆಲ್ಲೂ ವ್ಯಾಪಿಸಿಕೊಂಡು ಪ್ರಾದೇಶ ಪರಿಮಿತನಾಗಿ (ಎಂದರೆ ಹೃದಯಾಕಾಶವೆಷ್ಟಿದೆಯೋ ಅಷ್ಟು ಪ್ರದೇಶ ವನ್ನು ತುಂಬಿ) 'ಪೂರ್ಣ'. ಹೃದಯಕಮಲದ ಬುಡದಲ್ಲಿ ಹೆಬ್ಬೆರಳ ತುದಿಯಷ್ಟು ಪರಿಮಿತಿಯುಳ್ಳ 'ಮೂಲೇಶ'. ಇವನನ್ನು ವಿಜ್ಞಾನಾತ್ಮನೆಂದೂ ಕರೆಯುತ್ತಾರೆ.

ಈ ಮೂಲೇಶನ ಪಾದವನ್ನಾಶ್ರಯಿಸಿ ಮುಖ್ಯಪ್ರಾಣ (ಹನುಮಂತ). ಶ್ವಾಸರೂಪ ನಾಗಿರುವ ಮುಖ್ಯಪ್ರಾಣನು ಹಂಸಮಂತ್ರವನ್ನು ಎಡೆಬಿಡದೆ ಜಪಿಸುತ್ತ ಇರುವನು ; ಮತ್ತು ಇದೇ ಜಪವನ್ನು ಜೀವನಿಂದ ಮಾಡಿಸುತ್ತಲೂ ಇರುವನು. ಉಸಿರಾಡುವಾಗ ಉಸಿರನ್ನು ಒಳಗೆ ಎಳೆದುಕೊಳ್ಳುವುದು 'ಹಂ', ಹೊರಕ್ಕೆ ಬಿಡುವುದು 'ಸಃ'. ಇದೇ ಹಂಸಜಪ. ಪ್ರತಿಯೊಬ್ಬನೂ ದಿನಕ್ಕೆ ಇಪ್ಪತ್ತೊಂದುಸಾವಿರ ಆರುನೂರು ಸಂಖ್ಯೆಯ ಹಂಸಜಪವನ್ನು ಮಾಡುತ್ತಾನೆ. ಇದನ್ನು ಅವನಿಂದ ಮಾಡಿಸುವ ಮುಖ್ಯಪ್ರಾಣನು ಹರಿಪ್ರೀತಿಗಾಗಿಯೇ ಮಾಡಿಸುತ್ತಾನೆ.

ಎಂದರೆ ಜೀವನಿಗೆ ಸ್ವಭಾವದಲ್ಲಿಯೇ ಭಕ್ತಿಯಿದೆ. ಪ್ರತಿಬಿಂಬನಾದ ಅವನ ಹೃದಯದಲ್ಲೇ ಭಕ್ತಿಯನ್ನು ಮಾಡಿಸುವ ಮುಖ್ಯಪ್ರಾಣನೂ ಇದ್ದಾನೆ, ಭಕ್ತಿಗೆ ಗುರಿಯಾಗುವ ಪರಮಾತ್ಮನೂ ಬಿಂಬವಾಗಿ ಇದ್ದಾನೆ. ಇರುವುದು ಮಾತ್ರವಲ್ಲ, ಜೀವನನ್ನು ಉದ್ಧಾರಮಾಡಬೇಕೆಂಬ ಸಂಕಲ್ಪವನ್ನೂ ಹೊಂದಿರುತ್ತಾನೆ ; ಇದೇ ಕಾರುಣ್ಯವೆನ್ನುವ ಗುಣ. ಬಿಂಬನಲ್ಲಿ ಕಾರುಣ್ಯ ಸ್ವಭಾವಸಿದ್ಧವಾದುದು. ಬಿಂಬನ ಕಾರುಣ್ಯವು ಅವನ ಪ್ರತಿಬಿಂಬರಾದ ಎಲ್ಲ ತತ್ತ್ವೇಶರಲ್ಲೂ ಇದೆ. ಜೀವನಿಗೆ ಅವರೆಲ್ಲರೂ ಆಪ್ತರೇ : ಆದರೆ ಬಿಂಬರೂಪಿಯಾದ ಪರಮಾತ್ಮನು ಆಪ್ತತಮ, ಪರಮಾಪ್ತ. ಜೀವನು ಮಾಡುವ ಭಕ್ತಿಗೆ ಪರಮಾತ್ಮನ ಪ್ರಸಾದ ಫಲರೂಪವಾದುದು. ಜೀವನಲ್ಲಿ ಸ್ವಭಾವಸಿದ್ಧವಾಗಿ ಭಕ್ತಿಯಿದ್ದರೂ ಪರಮಾತ್ಮನಲ್ಲಿ ಸ್ವಭಾವಸಿದ್ಧವಾಗಿ ಕಾರುಣ್ಯವು ಇದ್ದರೂ, ಎರಡರ ಸಮಾಗಮವಾಗಲು ಸಾಧನಸಾಮಗ್ರಿ ಇರಬೇಕು. ಸಾಧನಸಾಮಗ್ರಿಯನ್ನು ಮಧ್ವಾಚಾರ್ಯರು ತಮ್ಮ ಋಗ್ಭಾಷ್ಯದಲ್ಲಿ ಹೀಗೆ ಎಣಿಸಿದ್ದಾರೆ

'ಸ್ವಾಧ್ಯಾಯಸ್ತತ್ತ್ವವಿಜ್ಞಾನಂ ವಿಷ್ಣುಭಕ್ತಿರ್ವಿರಾಗತಾ
ನಿಷಿದ್ಧಕರ್ಮಣಾಂ ತ್ಯಾಗೋ ವಿಹಿತಸ್ಯ ಸದಾ ಕ್ರಿಯಾ
ಸದಾ ವಿಷ್ಣುಸ್ಮೃತಿಶ್ಚ. .'

ಸಚ್ಛಾಸ್ತ್ರಗಳ ಅಧ್ಯಯನ, ವಿಷ್ಣುವು ಸರ್ವೋತ್ತಮನೆಂಬ ತತ್ತ್ವದ ಅರಿವು, ವಿಷ್ಣುವಿನಲ್ಲಿ ಭಕ್ತಿ, ವಿಷಯ ಸುಖಗಳಲ್ಲಿ ವೈರಾಗ್ಯ, ಶಾಸ್ತ್ರವು ಮಾಡಬಾರದೆಂದು ಹೇಳಿರುವುದನ್ನು ಮಾಡದೆ ಇರುವುದು, ಶಾಸ್ತ್ರವು ವಿಧಿಸಿರುವುದನ್ನು ಮಾಡುವುದು, ಎಡೆಬಿಡದೆ ವಿಷ್ಣುವಿನ ಸ್ಮರಣೆ ಇವು ಸಾಧನಗಳು. ಅವರೇ ತಮ್ಮ ಅನುವ್ಯಾಖ್ಯಾನದಲ್ಲಿ "ಸಾಧನೆಗಳೆಲ್ಲೆಲ್ಲ ಭಕ್ತಿಯೇ ಹೆಚ್ಚಿನದು, ಅದರಂತೆ ಇರುವುದು ಯಾವುದೂ ಇಲ್ಲ" ('ಸಾಧನೇಭ್ಯೋಽಧಿಕಾ ಭಕ್ತಿಃ, ನೈವಾನ್ಯತ್ ತಾದೃಶಂ ಕ್ವಚಿತ್') ಎಂದು ಹೇಳಿದ್ದಾರೆ. ಮೋಕ್ಷಕ್ಕೆ ಜ್ಞಾನವೇ ಕಾರಣ ಎಂದು ವೇದಾಂತಿಗಳೆಲ್ಲ ಒಪ್ಪಿಕೊಳ್ಳುವಾಗ, ಮಧ್ವಾಚಾರ್ಯರು ಮೋಕ್ಷಕ್ಕೆ ಕಾರಣವಾಗುವ ಜ್ಞಾನ ಭಕ್ತಿಯ ಅಂಶವೇ ('ಭಕ್ತ್ಯಂಶಕಂ ಯತೋ ಜ್ಞಾನಂ') ಎಂದು ಹೇಳಿ ಭಕ್ತಿಯು ಜ್ಞಾನ ಮತ್ತು

ಸ್ನೇಹಗಳ ಸಮಾವೇಶವೆಂದು ('ಜ್ಞಾನಸ್ನೇಹಾತ್ಮಿಕಾ ಹಿ ಸಾ') ನಿರ್ದೇಶಿಸುತ್ತಾರೆ (ಭಾಗವತ ತಾತ್ಪರ್ಯ ನಿರ್ಣಯ).

ಹರಿದಾಸರು ಮಾಡುವ ಸಾಧನ ಸಾಮಗ್ರಿಗಳ ಎಣಿಕೆ ಸ್ವಲ್ಪ ಬೇರೆ ಬಗೆಯದು. ನಿದರ್ಶನಕ್ಕೆ, ವ್ಯಾಸರಾಯಸ್ವಾಮಿಗಳು ಹೇಳಿರುವುದನ್ನು ಇನ್ನೊಂದು ಸಂದರ್ಭದಲ್ಲಿ ಆಗಲೇ ಉಲ್ಲೇಖಿಸಿದ್ದೇನೆ :

'ನಾಲಗೆಯ ಮೇಲೆ ಹರಿನಾಮ
ಎಲ್ಲರ ಮೇಲೆ ದಯ ಮಾಡಬೇಕು
ಪಾಪರಹಿತನಾಗಿರಬೇಕು
ಕಾಮಲೋಭಗಳನ್ನು ತ್ಯಜಿಸಬೇಕು
ಮಧ್ವರಾಯರನ್ನು ಯಾವಾಗಲೂ ಸ್ಮರಿಸಬೇಕು
ದೊರೆತದ್ದರೊಳಗೆ ತೃಪ್ತನಾಗಿರಬೇಕು
ಪ್ರಪಂಚದಲ್ಲಿ ತೃಪ್ತಿಯಿಂದಿರಬೇಕು'

ಅವರ ಶಿಷ್ಯರಾದ ವಾದಿರಾಜಸ್ವಾಮಿಗಳ ಎಣಿಕೆ ಹೀಗೆ :

'ಗುರುಭಕುತಿ ಬೇಕು
ಹಿರಿಯರ ಕರುಣ ಬೇಕು
ಹರಿಕಥೆಗಳ ನಿತ್ಯ ಕೇಳುತಿರಬೇಕು
ವಿರಕುತಿ ಬೇಕು
ವಿಷ್ಣುವಿನಾರಾಧನೆ ಬೇಕು
ವರಮಂತ್ರಜಪ ಬೇಕು
ತಪ ಬೇಕು ಪರಗತಿಗೆ
ಸಿರಿಹಯವದನನ ಪರಮಾನುಗ್ರಹ ಬೇಕು'

ಹರಿದಾಸರು ವಿರಕ್ತಿಯ ಪ್ರಯೋಜನವನ್ನು ಎತ್ತಿ ಹೇಳುತ್ತಾರೆ. ಶ್ರೀಪಾದರಾಜರು "ಭಕ್ತಿ ಬೇಕು" ಎಂದು ಹೇಳಿದೊಡನೆ "ವಿರಕ್ತಿ ಬೇಕು" ಎಂದು ಸೇರಿಸುತ್ತಾರೆ. ವ್ಯಾಸರಾಯಸ್ವಾಮಿಗಳ ಪ್ರಕಾರ ಸಾಧನಾಮಾರ್ಗದಲ್ಲಿ ಮೊದಲ ಹೆಜ್ಜೆಯೇ ವಿರಕ್ತಿ, ಸಂಸಾರವು ಅಸಾರವೆಂದು ಮನವರಿಕೆಮಾಡಿಕೊಂಡು 'ಗಾಳಿಗಿಕ್ಕಿದ ದೀವಿಗೆಯಂತೆ ದೇಹ' ಅದರಲ್ಲಿ ಹೇಯ ಬುದ್ಧಿಯನ್ನು ಬೆಳೆಸಿಕೊಳ್ಳುವುದು. ಇದರಿಂದ ಇಂದ್ರಿಯ ನಿಗ್ರಹ, ಇಂದ್ರಿಯನಿಗ್ರಹದಿಂದ ಸಜ್ಜನಸಂಗ, ಸಜ್ಜನಸಂಗದಿಂದ ಪರಮಾತ್ಮನಲ್ಲಿ ಅತ್ಯಧಿಕವಾದ ಸ್ನೇಹ (ಭಕ್ತಿ), ಅದರಿಂದ ಕೃಷ್ಣನೇ ಶರಣೆಂಬ ದೃಢವಾದ ವಿಶ್ವಾಸ. ಈ ಹೆದ್ದಾರಿಯನ್ನು ಹಿಡಿದು ಪುರಂದರದಾಸರೂ "ಕಟಪಟಿ ಸಂಸಾರ", "ಲೊಳಲೊಟ್ಟೆ", "ನೀರಮೇಲಣ ಗುಳ್ಳೆಯಂತೆ ನಿಜವಲ್ಲ", "ನೆಚ್ಚದಿರೀ ಭಾಗ್ಯ ಸ್ಥಿರವಲ್ಲ",

"ಎಂತಾದರೂ ಚಿಂತೆ ಬಿಡದು" ಎಂದು ಬಗೆಬಗೆಯಾಗಿ ಸಂಸಾರದ ಅಸಾರತೆಯನ್ನು ವಿವರಿಸಿ ವಿರಕ್ತಿಯ ಅಗತ್ಯವನ್ನು ಸೂಚಿಸಿದ್ದಾರೆ.

ಸಂಸಾರದಲ್ಲಿ, ವಿಷಯಸುಖಗಳಲ್ಲಿ ಸಾಮಾನ್ಯಜನರಿಗಿರುವ ಆಸಕ್ತಿ, ಅನುರಾಗಗಳನ್ನು ಮಧ್ವಾಚಾರ್ಯರು 'ವಿರುದ್ಧರಾಗ'ವೆಂದು ಕರೆದಿದ್ದಾರೆ, ಮತ್ತು ಈ ರಾಗದ ವಿನಾಶವಾಗುವವರೆಗೆ ಅಪರೋಕ್ಷದರ್ಶನವಿರದು ಎಂದೂ ಸ್ಪಷ್ಟಪಡಿಸಿದ್ದಾರೆ (ಛಾಂದೋಗ್ಯಭಾಷ್ಯ, 'ವಿರುದ್ಧರಾಗಿಣಾಂ ನೈವ ಹ್ಯಪರೋಕ್ಷದೃಶಿರ್ಭವೇತ್, ಯಾವದ್ರಾಗವಿನಾಶಃ ಸ್ಯಾತ್ ವಿರಕ್ತ್ಯೋ ಭಕ್ತಿಸಂಯುತಃ'). ಹೀಗೆ ಅವರು ಭಕ್ತಿಗೆ ವಿರಕ್ತಿಯೇ ಮೂಲ ಸಾಮಗ್ರಿ ಎಂದು ಹೇಳಿರುವುದು ಹರಿದಾಸರ ಮನಸ್ಸಿಗೆ ನಾಟಿತು. ಭಕ್ತಿಯು ಅನಾದಿಯಾಗಿದ್ದರೂ (ಎಂದರೆ ಜೀವರಿಗೆ ಸ್ವಭಾವಸಿದ್ಧವಾಗಿದ್ದರೂ) ಅದು ಬೆಳೆಯಲು, ಬೇರೂರಲು ವಿರಕ್ತಿಯ ಅಗತ್ಯವಿದೆ. ಸಾಧನೆಯ ದಾರಿಗೆ ವಿರಕ್ತಿಯೇ ಹೆಬ್ಬಾಗಿಲು. ಹಾಗೆಂದೇ ಪುರಂದರದಾಸರು ಸಾಧನಾಮಾರ್ಗವನ್ನು ಸಂಗ್ರಹಿಸಿ

'ವಿಷಯದ ವಿಚಾರ ಬಿಡು
ವಿಹಿತಕರ್ಮವ ಮಾಡು
**ವೈರಾಗ್ಯಭಾಗ್ಯವ ಬೇಡು'**

ಎಂದು ಸೂಚನೆಮಾಡಿದ್ದಾರೆ. ವ್ಯಾಸರಾಯಸ್ವಾಮಿಗಳ ಪ್ರಮೇಯಮಾಲಿಕೆಯಲ್ಲಿ ಬರುವ 'ಅಮಲಾಭಕ್ತಿಶ್ಚ ತತ್ಸಾಧನಂ' ಎಂಬ ಮಾತಿನಲ್ಲಿ 'ಅಮಲವಾದ ಭಕ್ತಿ' ಯೆಂದರೆ ವಿಷಯಕಾಮ ಅಥವಾ ಫಲೇಚ್ಛೆಯಿಲ್ಲದೆ, ವಿಷಯಭೋಗದಲ್ಲಿರುವ ಅಸಾರತೆಯನ್ನು ಅರಿತುಕೊಂಡು, ವಿರಕ್ತಿಯನ್ನು ತಳೆದು ಅಲಂಬುದ್ಧಿಯನ್ನು (ಎಂದರೆ ದೊರತದ್ದು ಸಾಕು ಎನ್ನುವ ಬುದ್ಧಿ) ಬೆಳೆಸಿಕೊಂಡು, ಅನಂತರ ಮೋಕ್ಷವನ್ನೇ ಪ್ರಯೋಜನವಾಗಿರಿಸಿಕೊಂಡ ಭಕ್ತಿ. ಸಾಮಾನ್ಯವಾಗಿ ಜನರು ಲೌಕಿಕ ಫಲಾಪೇಕ್ಷೆಯಿಂದ ಮಾಡುವ ಭಕ್ತಿ 'ಮಲಭಕ್ತಿ', ಕೊಳೆಯಿಂದ ಕೂಡಿದ ಭಕ್ತಿ. ಅದು ಮೋಕ್ಷಕ್ಕೆ ನೆರವಾಗುವುದಿಲ್ಲ.

ಹರಿದಾಸರ ಇನ್ನೊಂದು ಒತ್ತು ಭಕ್ತಿಯಾಗಲಿ ಅದಕ್ಕೆ ದಾರಿಯಾದ ವಿರಕ್ತಿಯಾಗಲಿ ಪರಮಾತ್ಮನ ಅನುಗ್ರಹದಿಂದಲೇ ಒದಗಿಬರಬೇಕು. ಇದನ್ನು ಶ್ರೀಪಾದರಾಜರು ಶಕ್ತಿಯೆಂದು ಕರೆದು

ಭಕ್ತಿಬೇಕು ವಿರಕ್ತಿಬೇಕು ಸರ್ವ ಶಕ್ತಿಬೇಕು
ಮುಕ್ತಿಯ ಮುಂದೆ ಬಯಸುವವಗೆ

ಎಂದು ಹೇಳಿದರು. ಭಕ್ತಿಯಲ್ಲಿ ಆಶ್ರಯಾಶ್ರಯಿಸಂಬಂಧವನ್ನು ಹೇಳುತ್ತಾರೆ. ಆಶ್ರಯನಾದವನು ಪರಮಾತ್ಮ; ಆಶ್ರಿತನಾದವನು ಜೀವ; ಭಕ್ತಿಯೆಂಬುದು

ಆಶ್ರಯಕ್ಕೂ ಆಶ್ರಿತನಿಗೂ ಇರುವ ಸಂಬಂಧ. ಭಕ್ತಿಯು ಜೀವನಿಷ್ಠವಾದರೆ ಸೇವೆ, ದಾಸ್ಯ ; ಅದೇ ಪರಮಾತ್ಮನಿಷ್ಠವಾದರೆ ಅನುಗ್ರಹ, ಪ್ರಸಾದ, ಒಲುಮೆ. ಇದು ಜೀವ–ಪರಮಾತ್ಮರ ನಿತ್ಯಸಂಬಂಧ ; ಇದರಲ್ಲಿ ಸತ್ತ್ವವೇ ಮುಖ್ಯಗುಣ. ಅದರಲ್ಲಿ ರಜಸ್ಸು, ತಮಸ್ಸು ಸೇರಿಕೊಂಡರೆ ಅದು 'ಮಲಭಕ್ತಿ' ; ಅದರಲ್ಲಿ ರಾಗದ್ವೇಷಾ ದಿಗಳು ಕೆಲಸಮಾಡುತ್ತವೆ. ರಜಸ್ಸು ಕೂಡಿಕೊಂಡು ಭಕ್ತಿ ಮಾಡುವವರು ಮಧ್ಯಾಧಿ ಕಾರಿಗಳು ; ತಮಸ್ಸು ಕೂಡಿಕೊಂಡು ಭಕ್ತಿಮಾಡುವವರು ಮಂದಾಧಿಕಾರಿಗಳು. ರಜಸ್ಸಾಗಲಿ ತಮಸ್ಸಾಗಲಿ ಕೂಡಿಕೊಳ್ಳದೆ ಕೇವಲ ಸತ್ತ್ವವೇ ಇದ್ದರೆ ಅದು 'ಅಮಲ ಭಕ್ತಿ'. ಅಮಲಭಕ್ತಿಯುಳ್ಳವನು ಉತ್ತಮಾಧಿಕಾರಿಯೆಂದೇ ಅರ್ಥ. ಉತ್ತಮಾಧಿ ಕಾರಿಗೆ ಪರಮಾತ್ಮನ ಅನುಗ್ರಹವೇ ಬೆಂಬಲ.

ಭಕ್ತಿಯಲ್ಲಿ ಜ್ಞಾನದ ಅಂಶ, ಸ್ನೇಹದ ಅಂಶ ಎರಡೂ ಸೇರುವುದೆಂದು ಹೇಳಿದೆ ವಷ್ಟೆ. ಯಾವುದಾದರೂ ವಸ್ತುವಿನಲ್ಲಿ ಸ್ನೇಹ ಒದಗುವುದು ಆ ವಸ್ತುವಿನ ಬಗ್ಗೆ ಇರುವ ಅರಿವಿನಿಂದ ; ಮತ್ತು ಆ ವಸ್ತುವನ್ನು ಪಡೆದುಕೊಳ್ಳುವ ಬಗೆ ಹೇಗೆಂದು ತಿಳಿದಮೇಲೇ (ಇಷ್ಟಸಾಧನತಾ ಜ್ಞಾನ). ಭಕ್ತಿಯಲ್ಲಿ ಜ್ಞಾನ, ಸ್ನೇಹ ಎರಡೂ ಸೇರುವಾಗ, ಸಮ ಪ್ರಧಾನವಾಗಿರಬಹುದು (ನಿದರ್ಶನಕ್ಕೆ ದೇವತೆಗಳಲ್ಲಿ), ಜ್ಞಾನ ಪ್ರಧಾನವಾಗಿದ್ದು ಸ್ನೇಹ ಅಪ್ರಧಾನವಾಗಿರಬಹುದು (ಮುನಿಗಳಲ್ಲಿ), ಅಥವಾ ಜ್ಞಾನ ಅಪ್ರಧಾನವಾಗಿದ್ದು ಸ್ನೇಹ ಪ್ರಧಾನವಾಗಿರಬಹುದು (ವಸುದೇವ ಮೊದಲಾದ ಭಕ್ತರಲ್ಲಿ). ಹರಿದಾಸರ ದೃಷ್ಟಿ ಸ್ನೇಹವನ್ನು ಬೆಳೆಸಿಕೊಳ್ಳುವುದರ ಕಡೆಗೆ ; ಹಾಗೆಂದೇ ಭಕ್ತರ ಕತೆಗಳು ಅವರಿಗೆ ಪ್ರಿಯವಾದುವು. ಶ್ರವಣ, ಮನನ, ನಿದಿಧ್ಯಾಸನಗಳನ್ನು ಅವರು ಬೇರೆ ಬಗೆ ಯಾಗಿಯೇ ವಿವರಿಸುತ್ತಾರೆ. ಶ್ರವಣವೆಂದರೆ ಹರಿಕಥಾಶ್ರವಣ ; ಅದರಿಂದ ಮನ ಸ್ಸಿನ ದೋಷಗಳು ತೊಲಗುವುವು. ಮನನವೆಂದರೆ ನಾಮಸ್ಮರಣೆ (ಖಂಡಸ್ಮೃತಿ); ಭಗವಂತನ ರೂಪ, ಗುಣ, ಕ್ರಿಯೆಗಳನ್ನು ಬೇರೆ ಬೇರೆಯಾಗಿ ಮನಸ್ಸಿಗೆ ತಂದು ಕೊಳ್ಳುವುದು ; ಅದರಿಂದ ತತ್ತ್ವನಿರ್ಣಯ. ನಿದಿಧ್ಯಾಸನವೆಂದರೆ ಸಂಕೀರ್ತನದಲ್ಲಿ ಮೈಮರೆಯುವುದು (ಅಖಂಡಸ್ಮೃತಿ) ; ಭಗವಂತನ ಮಾಹಾತ್ಮ್ಯೆಯನ್ನು ಬಾಳುವೆ ಯಲ್ಲಿ ಬೇರೂರಿಸುವುದು. ಅದರಿಂದ ಪರಮಾತ್ಮನಲ್ಲಿ ಅತ್ಯಧಿಕವಾದ ಭಕ್ತಿ ಒದಗು ವುದು. ಸಾಂಪ್ರದಾಯಿಕವಾದ ಶ್ರವಣಮನನಗಳನ್ನು ಹರಿದಾಸರು ಜರಿದು ಹೀಗೆ ಹೇಳುತ್ತಾರೆ :

ಮನವು ಸ್ಥಿರಗೊಳ್ಳದವನ ಶ್ರವಣವೇತಕೆ
ನೆನೆವು ನೆಲೆಗೊಳ್ಳದಿರೆ ಮನನವೇತಕೆ
ತನುವು ಘನವ ಕಾಣದ ಅನುಭವವ್ಯಾತಕೆ
ದಾನಿ ಮಹೀಪತಿಸ್ವಾಮಿಯ ಕಾಣದ ಜನುಮವೇತಕೆ

ಈಗಿನ ಕಾಲಕ್ಕೆ ಹರಿಕಥಾಶ್ರವಣ, ನಾಮಸ್ಮರಣೆಗಳೇ ಸರಿಯಾದ ದಾರಿಯೆಂದು ಹರಿದಾಸರ ಶ್ರದ್ಧೆ.

ಧ್ಯಾನವು ಕೃತಯುಗದಲ್ಲಿ ಯಜ್ಞ
ಯಾಗವು ತ್ರೇತಾಯುಗದಲ್ಲಿ
ಅರ್ಚನೆ ದ್ವಾಪರಯುಗದಲ್ಲಿ
ಕೀರ್ತನೆ ಮಾತ್ರದಿ ಕಲಿಯುಗದಲ್ಲಿ ಮು
ಕುತಿಯನ್ನೀವ ಪುರಂದರವಿಠಲ

ಎನ್ನುವ ಉಗಾಭೋಗವಿದೆಯಷ್ಟೆ. ಇದು ಪುರಂದರವಿಠಲಾಂಕಿತ. ಇದೇ ಉಗಾಭೋಗ ವ್ಯಾಸರಾಯಸ್ವಾಮಿಗಳ ಹೆಸರಿನಲ್ಲೂ ಇದೆಯೆನ್ನುವುದು ಸ್ವಾರಸ್ಯ. ವ್ಯಾಸರಾಯಸ್ವಾಮಿಗಳ ಶಿಷ್ಯರೇ ಆಗಿದ್ದ ವಿಜಯೀಂದ್ರತೀರ್ಥರು ಶಾಸ್ತ್ರಸಂಪನ್ನರೇ ಆಗಿದ್ದು ವಾದಗ್ರಂಥಗಳನ್ನು ರಚಿಸಿದರಾದರೂ ವ್ಯಾಸರಾಯಸ್ವಾಮಿಗಳ ಈ ದೃಷ್ಟಿ ಅವರ ಮೇಲೆ ಪ್ರಭಾವ ಬೀರದಿರಲಿಲ್ಲ. ಅವರದ್ದೊಂದು ಪದ

'ನಿನ್ನ ಕೀರುತಿ ಕಿವಿಗೆ ನಾಮವೆನ್ನ ನಾಲಗೆಗೆ
ಎನ್ನ ಕಣ್ಣಿಗೆ ನಿನ್ನ ಮೂರುತಿ ದೊರೆಯಲೋ
ಎನ್ನ ಮನಕೆ ನೆನವ ಸಿರಿ ವಿಜಯೀಂದ್ರ ರಾಮ'

ವ್ಯಾಸರಾಯಸ್ವಾಮಿಗಳ ಇನ್ನೊಬ್ಬ ಶಿಷ್ಯ ವೈಕುಂಠದಾಸರೂ ಇದೇ ತಾತ್ಪರ್ಯವನ್ನು ಇದೇ ಧಾಟಿಯಲ್ಲಿ ಹೇಳಿದ್ದಾರೆ

'ನಿನ್ನ ಕೀರುತಿ ಕಿವಿಗೆ ನಾಮ
ಎನ್ನ ನಾಲಿಗ್ಗೆ ಚಾರು ಲಾವಣ್ಯ
ಎನ್ನ ಕಣ್ಣಿಗೆ ಆ ಆ ಇದೆ ಸಾರವಯ್ಯ
ಸಿರಿ ವೈಕುಂಠವಿಠಲ ವೇಲಾಪುರದೀಶ'

ಪುರಂದರದಾಸರಂತೂ ಈ ದೃಷ್ಟಿಯನ್ನೇ ಪ್ರಧಾನವಾಗಿ ಹಿಡಿದಿದ್ದಾರೆ. ಅವರ ಕೀರ್ತನೆಗಳಲ್ಲಿ ಬಹುಮಟ್ಟಿಗೆ ಬರುವುದು ನಾಮಸ್ಮರಣೆಯ ಹೆಗ್ಗಳಿಕೆ, ಸಂಕೀರ್ತನ ಪದ್ಧತಿಯ ಹಿರಿಮೆ.

## 9

ಇದರಿಂದಾಗಿ ಆಧ್ಯಾತ್ಮಿಕ ಸಾಧನೆಯಲ್ಲಿ ಪೂಜೆಯ ಕಟ್ಟುಪಾಡು ಸಡಿಲವಾಯಿತು. ಶಾಸ್ತ್ರದಲ್ಲಿ ಹೇಳುವಂತೆ ವಿಸ್ತಾರವಾಗಿ, ಹಲವಾರು ಪರಿಕರಗಳಿಂದ

ಕೂಡಿ, ವಿಧ್ಯುಕ್ತವಾಗಿ ಮಾಡುವ ದೇವರಪೂಜೆಯಲ್ಲಿ ಸಂಪತ್ತಿನ ಅಗತ್ಯವೂ ಇದೆ, ಆಡಂಬರದ ಪಾತ್ರವೂ ಇದೆ. ಮಠಗಳಲ್ಲಿ, ಶ್ರೀಮಂತರ ಮನೆಗಳಲ್ಲಿ ನಡೆಯುವ ಪೂಜೆ ಹರಿದಾಸರ ಗಮನಕ್ಕೆ ಬಂದಿರಬೇಕು. ತಾವೇ ಮಠಾಧಿಪತಿಗಳಾಗಿದ್ದ ವ್ಯಾಸರಾಯಸ್ವಾಮಿಗಳಿಗೂ ಇದರ ಆಭಾಸ ಮನದಟ್ಟಾಗಿರಬೇಕು. ಹಾಗೆಂದೇ

'ಒಂದೆ ಹೂವು ಒಂದು ಫಲವೊಂದೆ
ಬಿಂದುಜಲ ವೊಂದೆ ತುಳಸಿದಳ
ಒಂದೇ ಕೇವಲದನೆಯೊಂದೆ ಪ್ರದಕ್ಷಿಣೆ
ಒಂದನರ್ಪಿಸಿದೊಡೆ ಕುಂದದಾನಂದವೀವ'

ಎಂದೂ

'ನುಡಿದ ಶಬ್ದಗಳೆಲ್ಲ ಹೂವುಗಳು
ನಡೆವುದೆಲ್ಲವು ನಾಟ್ಯಂಗಳು'

ಎಂದೂ

'ನಿನ್ನ ಮೂರುತಿ ಒಮ್ಮೆ ನೆನದೊಡೆ ನೋಡಿದೊಡೆ
ನಿನ್ನ ನಾಮವನೊಮ್ಮೆ ಪಾಡಿದೊಡೆ
ಘನ್ನ ಭವಬಂಧ ಹರಿವುದೋ'

ಎಂದೂ ಹೇಳಿದರು. ಸುಲಭಪೂಜೆಯ ಮಾರ್ಗವನ್ನು ಎತ್ತಿ ತೋರಿಸಿದವರು ಅವರೇ. ಬಹಿರಂಗವಾಗಿ ಆಡಂಬರದಿಂದ ಮಾಡುವ ಪೂಜೆಗಿಂತ 'ಅಂತರಂಗದಲಿ ಹರಿಯ ಕಾಣು'ವುದರ ಸ್ವಾರಸ್ಯವನ್ನು ಕಾಣಿಸಿದರು. ಮಾನಸಪೂಜೆಯ ಹಿರಿಮೆಯನ್ನೂ ಅವರು ತೋರಿಸಿದರು :

'ಅನ್ಯದೇವತೆ ಯಾಕೆ
ಅನ್ಯ ಪ್ರತಿಮೆ ಯಾಕೆ
ಅನ್ಯವಾದ ಮಂತ್ರ ತಂತ್ರವೇಕೆ
ಎನ್ನಲ್ಲಿ ಭರಿತ ಸಾಧನೆಗಳಿರುತಿರಲು
ಚೆನ್ನಾಗಿ ಶ್ರೀ ಕೃಷ್ಣಸ್ವಾಮಿಯ ಪೂಜಿಸುವೆ'

ಹರಿದಾಸಸಂಪ್ರದಾಯದಲ್ಲಿ ಮಾನಸಪೂಜೆಗೆ ಬೆಲೆ ಹೆಚ್ಚು. ವಿಷ್ಣುತೀರ್ಥರು (ಅಡವಿ ಆಚಾರ್ಯರು 1750–1806) ತಮ್ಮ ಚತುರ್ದಶೀ ಗ್ರಂಥದಲ್ಲಿ ಶರೀರವೇ ದೇವಮಂದಿರ, ಹೃದಯಕಮಲವೇ ಮಂಟಪ, ಜೀವಸ್ವರೂಪವೇ ಪ್ರತಿಮೆ, ಅದರಲ್ಲಿ ಸನ್ನಿಹಿತವಾಗಿರುವುದೇ ಪರಮಾತ್ಮನ ಬಿಂಬ, ಅವನ ಅಖಂಡಸ್ಮೃತಿಯೇ ಧ್ಯಾನ ಎಂದು ಮೊದಲುಮಾಡಿ ಬಹಿಃಪೂಜೆಯ ಎಲ್ಲ ವಿವರಗಳಿಗೂ ಮಾನಸಪ್ರವೃತ್ತಿಗಳನ್ನು ಸಾಂಕೇತಿಕವಾಗಿ ಸೂಚಿಸಿದ್ದಾರೆ. ಇದು 'ಅನಾಯಾಸದಿಂದ ಮಾಡುವ ಪೂಜೆ',

ಸುಲಭಪೂಜೆ ಎಂದೂ ಹೇಳಿದ್ದಾರೆ. ಅವರ ಗುರುಗಳಾದ ವ್ಯಾಸತತ್ತ್ವಜ್ಞರು (ಐಜೀ ಆಚಾರ್ಯರು 1704–1800) ತಮ್ಮ ಮಾನಸಸ್ಮೃತಿಯಲ್ಲಿ ಸಾಧಕನು ತನ್ನ ದೇಹವನ್ನು ವಿಷ್ಣುರಥವೆಂದೂ ಅದ್ಭುತವಾದ ಈಶಾಧಿಷ್ಠಾನವೆಂದೂ ಬಗೆದು ಅದರಲ್ಲೇ ಬಿಂಬೋಪಾಸನೆಯನ್ನು ಮಾನಸಧ್ಯಾನಪದ್ಧತಿಯಲ್ಲಿ ನೆರವೇರಿಸುವ ವಿಧಿಯನ್ನು ವಿವರಿಸಿದ್ದಾರೆ. ಹರಿದಾಸರ ನಿಲುವನ್ನು ಸಂಸ್ಕೃತದಲ್ಲಿ ನಿರೂಪಿಸಿರುವ ಗ್ರಂಥಗಳು ಇವೆರಡು. ಗ್ರಂಥಕರ್ತರಿಬ್ಬರೂ ವ್ಯಾಸಕೂಟದಲ್ಲೂ ಸೈ ಎನಿಸಿ ಕೊಂಡಿದ್ದವರು. ಹರಿದಾಸರ ಆಧ್ಯಾತ್ಮಿಕ ಪ್ರವೃತ್ತಿ ಹರಡಿಕೊಳ್ಳುತ್ತಿದ್ದುದರ ಸೂಚನೆ ಇದು.

ಅಂತೂ, ಶ್ರೀಪಾದರಾಜರು, ವ್ಯಾಸರಾಯಸ್ವಾಮಿಗಳು, ಪುರಂದರದಾಸರು ಇವರು ಮೂವರು ಹರಿದಾಸರ ಅಧ್ಯಾತ್ಮನಿಷ್ಠೆಯ ಗೊತ್ತುಗುರಿಯನ್ನು ನಿರ್ಧರಿಸಿದ ರೆನ್ನಬಹುದು. ಅದು ದಿಟವಾಗಿ ಅಧ್ಯಾತ್ಮ (ಅಧಿ–ಆತ್ಮ) ನಿಷ್ಠೆಯೇ ; ಸಾಧಕನು ತನ್ನ ಆತ್ಮನಲ್ಲೇ ಪರಮಾತ್ಮನನ್ನು ಕಾಣುವ ತವಕ, ಕಾಣುವ ಪರಿ. 'ಅಂತರಂಗದಲಿ ಹರಿಯ ಕಾಣದವ ಹುಟ್ಟು ಕುರುಡನೋ' ಎಂದು ವ್ಯಾಸರಾಯರು ಹೇಳಿದುದೇ ಮೂಲಸೂತ್ರವಾಯಿತು. ಇದಕ್ಕೆ ವ್ಯಾಖ್ಯಾನರೂಪವಾಗಿ ಪುರಂದರದಾಸರು

'ಕಣ್ಣಿನೊಳಗೆ ನೋಡೊ ಹರಿಯ ಒಳ
ಗಣ್ಣಿನಿಂದಲಿ ನೋಡೊ ಮೂಜಗದ ಧೊರೆಯ

ಆಧಾರ ಮೊದಲಾದ ಆರು ಚಕ್ರವ
ಶೋಧಿಸಿ ಬಿಡಬೇಕು ಏಷಣಾತ್ರಯ
ಸಾಧಿಸಿ ಸುಷುಮ್ನಾ ಏರಿ ಅಲ್ಲಿ
ಭೇದಿಸಿ ನೀ ಪರಬ್ರಹ್ಮನ್ನ ಸೇರು'

ಎಂದು ಮೊದಲಾಗಿ ಹೇಳಿದುದು ಸಾಧಕರಿಗೆ ಉಪನಿಷದ್ವಾಕ್ಯಗಳಂತೆ ಮಾನ್ಯ ವಾದುವು.

ಪುರಂದರದಾಸರ ಪದಗಳನ್ನು ಅವರ ಗುರುಗಳಾದ ವ್ಯಾಸರಾಯಸ್ವಾಮಿಗಳು ಪುರಂದರೋಪನಿಷತ್ತೆಂದೇ ಕರೆದರೆಂದು ಉಲ್ಲೇಖವಿದೆ. ಇದರ ಹಿನ್ನೆಲೆಯಲ್ಲಿ ದಾಸರ ಮಗನೆನ್ನಲಾದ ಗುರುರಾಯ ಹೇಳಿದ ಕತೆಯೂ ಒಂದಿದೆ. ಕತೆಯಲ್ಲಿ ತಥ್ಯಾಂಶವೆಷ್ಟಿದೆಯೋ ತಿಳಿಯದು, ಸ್ವಾರಸ್ಯವಂತೂ ಇದೆ. ಒಮ್ಮೆ ಮಠದಲ್ಲಿ ಭೋಜನವಾದಮೇಲೆ ಸ್ವಾಮಿಗಳು ಶಿಷ್ಯರೊಂದಿಗೆ ಕುಳಿತಿದ್ದಾಗ ಅವರ ಮುಂದೆ ಎಂದಿನಂತೆ ಸಂಸ್ಕೃತದ ಶಾಸ್ತ್ರಗ್ರಂಥಗಳು ಇದ್ದುವಂತೆ. ಪುರಂದರದಾಸರು ಬಂದು ಗುರುಗಳಿಗೆ ನಮಸ್ಕರಿಸಿ ತಾವು ಬರೆದಿದ್ದ ಕೀರ್ತನೆಗಳ ಕಟ್ಟೊಂದನ್ನು ತಂದು ನೆಲದ ಮೇಲೆ ಗುರುಗಳ ಮುಂದಿರಿಸಿದರಂತೆ. ಆ ಕಟ್ಟು ಒಡನೆಯೇ ನೆಲದಿಂದ ಜಿಗಿದು

ಗುರುಗಳ ಮುಂದಿದ್ದ ಶಾಸ್ತ್ರಗ್ರಂಥಗಳ ಮೇಲೆ ಕುಳಿತಿತಂತೆ ಸ್ವಾಮಿಗಳ ಪರಿಚಾರಕರು, ಪಂಡಿತರು ಸಂಸ್ಕೃತಶಾಸ್ತ್ರಗ್ರಂದಗಳ ಮೇಲೆ ಕನ್ನಡದ ಪದಗಳು ಕೂರುವುದು ಸರಿಯಲ್ಲವೆಂದು ಬಗೆದು ಅವನ್ನು ತೆಗೆದು ನೆಲದ ಮೇಲೇ ಅಸಡ್ಡೆಯಿಂದ ನೂಕಿದ ರಂತೆ

'ಪದಗಳು ಬರೆದ ಪಹಿ ಮುಂಕೊಂಡು ಪೋಗಿ
ಮಧ್ವಶಾಸ್ತ್ರದ ಮೇಲೆ ಕುಳ್ಳಿರಲಾಗ ಕಂಡು
ಹದನನರಿಯದೆ ದಿಂಡಿಯವನೊಬ್ಬನು ಆ
ಪದದ್ರೋಹಿ ತೆಗೆದು ಬಿಸುಟನಾಗ'

ಆದರೆ ಪದಗಳು ಮತ್ತೆ ಜಿಗಿದು ಶಾಸ್ತ್ರಗ್ರಂಥಗಳ ಮೇಲೇ ಕುಳಿತುವಂತೆ ಹೀಗೆ ಮತ್ತೆರಡು ಬಾರಿ ಆಯಿತಂತೆ ಆಗ ವ್ಯಾಸರಾಯಸ್ವಾಮಿಗಳು

'ವರನಾಲ್ಕು ವೇದಗಳುಂಟು ಅಲ್ಲ
ನರರುತ್ತಮರೆಲ್ಲ ನೋಡಿ ಹರುಷದಿಂದ
ಧರೆಯೊಳಗೆ ಪುರಂದರ ಉಪನಿಷತ್ತೆಂದರು'

ವೇದಗಳಿಗೂ ಉಪನಿಷತ್ತಿಗೂ ಇರುವ ಪ್ರದಾನವಾದ ಭೇದವೆಂದರೆ ವೇದದಲ್ಲಿ ಬಹಿಃಪ್ರವೃತ್ತಿ, ಉಪನಿಷತ್ತುಗಳಲ್ಲಿ ಅಂತಃಪ್ರವೃತ್ತಿ, ವೇದದ ಅಧಿದೈವದೃಷ್ಟಿ, ಉಪನಿಷತ್ತಿನ ಅಧ್ಯಾತ್ಮ ದೃಷ್ಟಿ ಹೀಗೆ ವ್ಯಾಸರಾಯಸ್ವಾಮಿಗಳು 'ಪುರಂದರೋಪ ನಿಷತ್ತೆ'ಂದು ಪುರಂದರದಾಸರ ರಚನೆಗಳನ್ನು ಕರೆದದ್ದು ಸರಿಯೇ ವ್ಯಾಸರಾಯ ಸ್ವಾಮಿಗಳೂ ಉಪನಿಷತ್ತಿನ ಧೋರಣೆಯನ್ನೇ ಹಿಡಿದು

'ಬಲ್ಲವಗಿಲ್ಲಿದೆ ವೈಕುಂಠ, ಬಲ್ಲವಗೆಲ್ಲೋ ಶ್ರೀಹರಿಪೂಜೆ'

ಎಂದು ಮುಕ್ತಿಯನ್ನು ನಿತ್ಯಜೀವನದಲ್ಲೇ ಕಾಣಿಸಿದರು ವೈಕುಂಠವೆಂಬುದು ಎಲ್ಲೋ ಇರುವ ಲೋಕವೇ ? ಸಾಧಕನ ಅಂತರಂಗದಲ್ಲೇ ಇರುವ ಪರಮಾತ್ಮನ ನಿತ್ಯನಿವಾಸ ಅದನ್ನರಿಯದೆ ಪಂಡಿತಮೂರ್ಖರು ಬರಿದೆ ಪರದಾಡುತ್ತಾರೆ. ಪುರಂದರದಾಸರ ಮಾತಿನಲ್ಲಿ "ಪಿಂಡಾಂಡದೊಳಗಿನ ಗಂಡನ ಕಾಣದೆ ಮುಂಡೇರಾದರು ಪಂಡಿತರೆಲ್ಲ" ! ದಾಸರು ತೋರಿಸಿದ ದಾರಿ

'ಮನವ ದಂಡಿಸಿ ಪರಮಾತ್ಮನ್ನ ಕಾಣೋ
ಕೊನೆಗೆ ನಿನ್ನೊಳಗೆ ನೀ ಜಾಣೋ ಮುಕ್ತಿ
ನಿನಗೆ ದೂರಿಲ್ಲವು ಒಂದೆ ಗೇಣೋ'

## ಭಾಗ ೧

# ದೇವತಾ ದರ್ಶನ

ತಾರತಮ್ಯ ಸ್ತೋತ್ರ
ಗುರುಸ್ತುತಿ
ಗಣಪತಿ
ಶೇಷ
ರುದ್ರ
ಸರಸ್ವತಿ
ಭಾರತಿ
ವಾಯು
ರಮಾ
ಹರಿ

# ತಾರತಮ್ಯಸ್ತೋತ್ರ

ಮುಂದಿನ ಮೂರು ಪದಗಳು ತಾರತಮ್ಯವನ್ನು ಕುರಿತವು. ದ್ವೈತ ವೇದಾಂತದಲ್ಲಿ ದೇವತಾ ತಾರತಮ್ಯ ಮುಖ್ಯವಾದ ಪ್ರಕ್ರಿಯೆ. ಹರಿಯು ಸರ್ವೋತ್ತಮ, ಸರ್ವನಿಯಾಮಕ ಎಂಬುದನ್ನು ಸಾಧಿಸಲು ಈ ಪ್ರಕ್ರಿಯೆಯನ್ನು ಹಿಡಿದಿದ್ದಾರೆ. ಇದರಲ್ಲಿ ಹಲವಾರು ದೇವತೆಗಳನ್ನು ಹೇಳಿ ಅವರಿಗೆ ಒಂದು ಕ್ರಮವನ್ನು ಸೂಚಿಸುವುದು ಎದ್ದುಕಾಣುವ ವಿವರ. ದೇವತೆಗಳೆಂದರೆ ಈ ಸಿದ್ಧಾಂತದಲ್ಲಿ ತತ್ತ್ವಾಭಿಮಾನಿಗಳು, ತತ್ತ್ವೇಶರು. ತತ್ತ್ವಗಳೆಂದರೆ ಇಡೀ ಜಗತ್ತಿನ ಸ್ವರೂಪ, ಸ್ವಭಾವ, ವ್ಯಾಪಾರಗಳಿಗೆ ಕಾರಣವಾದ ಪಂಚಭೂತಗಳು (ನೆಲ, ನೀರು, ಬೆಂಕಿ, ಗಾಳಿ, ಆಕಾಶ), ಪಂಚತನ್ಮಾತ್ರಗಳು (ಅದೇ ವಿವರಗಳ ಮೂಲರೂಪ), ಪಂಚ ಜ್ಞಾನೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ), ಪಂಚಕರ್ಮೇಂದ್ರಿಯಗಳು (ಕೈ, ಕಾಲು, ಮಾತು, ಪಾಯು, ಉಪಸ್ಥ), ಮನಸ್ಸು, ಅಹಂಕಾರ, ಮಹತ್ ಮತ್ತು ಅವ್ಯಕ್ತ, ಈ ಇಪ್ಪತ್ತುನಾಲ್ಕು ವಿವರಗಳು. ಈ ವಿವರಗಳಲ್ಲಿದ್ದುಕೊಂಡು ಆಯಾ ಕೆಲಸಗಳನ್ನು ನಿರ್ವಹಿಸುವುದನ್ನು ದೇವತೆಗಳೆಂದು ಪಾರಿಭಾಷಿಕವಾಗಿ ಕರೆಯುತ್ತಾರೆ. ದಿಟವಾಗಿ ದೇವತೆಗಳೆಂದರೆ ಬೇರೆ ಬೇರೆ ಪ್ರವರ್ತಕ ಶಕ್ತಿಗಳು.

ಆದರೆ ಇವೆಲ್ಲ ಶಕ್ತಿಗಳೂ ಪರಮಾತ್ಮನ ಅಧೀನವೇ ಆದುದರಿಂದ, ಅವನ ಅಂಗಗಳೇ ಆದುದರಿಂದ, ಇದನ್ನು ಬಹುದೇವತಾವಾದವೆಂದು ಕರೆಯುವ ಹಾಗಿಲ್ಲ. ಪರಮಾತ್ಮ (ಇಲ್ಲಿ ಹರಿ ಅಥವಾ ವಿಷ್ಣು ಎಂದು ಕರೆಯುತ್ತಾರೆ) ಒಬ್ಬನೇ, 'ಏಕಮೇವಾದ್ವಿತೀಯ'. ಅವನೇ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮುಕ್ತಿಗಳೆಂಬ ಪ್ರಕಾರಗಳನ್ನು ನಡೆಸುವವನು. ಈ ಬ್ರಹ್ಮಾಂಡದ ವಿಶೇಷ ವ್ಯಾಪಾರಗಳಿಗಾಗಿ ತತ್ತ್ವಾಭಿಮಾನಿದೇವತೆಗಳನ್ನು ಕಲ್ಪಿಸಿಕೊಂಡಿದ್ದಾರೆ. ವಾಸ್ತವವಾಗಿ ಇದು ಪರಮಾತ್ಮನ ಅಚಿಂತ್ಯಾದ್ಭುತಶಕ್ತಿಯನ್ನು ಸೂಚಿಸುವುದು.

ಈ ದೇವತೆಗಳನ್ನು (ಎಂದರೆ ಪರಮಾತ್ಮನ ಶಕ್ತಿವಿಶೇಷಗಳನ್ನು) ಮೂವತ್ತೈದು ಕಕ್ಷೆಗಳಲ್ಲಿ ಅಳವಡಿಸುವುದು ವಾಡಿಕೆ. ಕಕ್ಷೆ ಎಂದರೆ ಒಳಮನೆ (ಅಂತರ್ಗೃಹ), ಕೋಣೆ ಅಥವಾ ಅಂಗಳ. ಪರಮಾತ್ಮನು ದೊಡ್ಡದೊಂದು ಮನೆಯೆಂದು ಬಗೆದರೆ ಈ ದೇವತೆಗಳೆಲ್ಲ ಆ ಮನೆಯಲ್ಲಿರುವ ಕೋಣೆಗಳು, ಅದರ ವಿಭಾಗಗಳು, ಅಂಗಗಳು. ಮನೆಗೆ ಯಜಮಾನನೂ ಪರಮಾತ್ಮನೇ, ಅವನಿಗೆ ಮೇಲ್ಪಟ್ಟ ಒಡೆಯನಿಲ್ಲ. ಮನೆಯ ಎಲ್ಲ ಕೋಣೆಗಳೂ ಅವನವೇ, ದಿಟವಾಗಿ ಎಲ್ಲ ಕೋಣೆಗಳಲ್ಲಿರುವವನೂ ಅವನೇ. ಆಯಾ ಕೋಣೆಗಳಲ್ಲಿ ಆಯಾ ಕೆಲಸಗಳನ್ನು ನಡೆಸುತ್ತ ಬೇರೆ ಬೇರೆಯಾಗಿ ತೋರಿಕೊಳ್ಳುತ್ತಾನೆ ಅಷ್ಟೆ. ಒಂದೊಂದು ಕಕ್ಷೆಯಲ್ಲಿ ಬೇರೆ ಬೇರೆ ದೇವತೆಗಳೆಂದು ಭಾವಿಸಿದಾಗ ಅವರೆಲ್ಲರೂ ಮನೆಯಾತ ನೇಮಿಸಿದ ಕೆಲಸವನ್ನೇ ಮಾಡುವವರು, ಅವನ ಪರವಾಗಿ ಇರುವವರು. ಸ್ವತಂತ್ರನಾದವನು

ಅವನೊಬ್ಬನೇ, ಅವನ ಸಂಕಲ್ಪದಂತೆಯೇ ಎಲ್ಲ ದೇವತೆಗಳ ಕೆಲಸವೂ. ಪರಮಾತ್ಮನ ಬ್ರಹ್ಮಾಂಡವ್ಯವಸ್ಥೆಯ ನಿರೂಪಣೆಯೇ ಕಕ್ಷೆಯ ಕಲ್ಪನೆಯಲ್ಲಿರುವ ಸ್ವಾರಸ್ಯ.

ಮೂವತ್ತೈದು ಕಕ್ಷೆಗಳಾದರೂ ತತ್ತ್ವಗಳು ಇಪ್ಪತ್ತುನಾಲ್ಕೇ ಆದುದರಿಂದ ತತ್ತ್ವಾಭಿಮಾನಿ ದೇವತೆಗಳು ಅದೇ ಸಂಖ್ಯೆಯಲ್ಲಿದ್ದಾರೆ. ಇವರಲ್ಲದೆ ಕರ್ಮಜ ಮತ್ತು ಕರ್ಮಾಭಿಮಾನಿ ಎಂಬ ಇನ್ನೆರಡು ವಿಭಾಗಗಳನ್ನು ಸೇರಿಸಿದರೆ ಇಪ್ಪತ್ತಾರು ಕಕ್ಷೆಗಳಲ್ಲಿ ದೇವತೆಗಳ ವಿಂಗಡಣೆ ಉಳಿದ ಕಕ್ಷೆಗಳಲ್ಲಿ ಪಿತೃಗಳು, ಅಸುರರು, ಗಂಧರ್ವರು, ಯಕ್ಷರು, ಋಷಿಗಳು, ಚಕ್ರವರ್ತಿಗಳು, ಮನುಷ್ಯರು, ಪಶುಪಕ್ಷಿಗಳು, ಮರಗಿಡಗಳು. ದೇವತೆಗಳ ಎಣಿಕೆಯಲ್ಲಿ ಪರಮಾತ್ಮ ಮೊದಲ ಕಕ್ಷೆ, ಪುಷ್ಕರನೆಂಬ ದೇವತೆ (ಕರ್ಮಾಭಿಮಾನಿ) ಕಡೆಯವನು (ಇಪ್ಪತ್ತಾರನೆಯ ಕಕ್ಷೆ). ಇವರಲ್ಲಿ ಮೊದಲ ಹದಿನೆಂಟು ಕಕ್ಷೆಗಳನ್ನು ಮುಖ್ಯ ತಾತ್ತ್ವಿಕ ದೇವತೆಗಳೆಂದು (ಮುಖ್ಯ ತತ್ತ್ವೇಶ) ಪರಿಗಣಿಸುತ್ತಾರೆ , ಉಳಿದವರು ಅಮುಖ್ಯರು ಹದಿನೆಂಟನೆಯ ಕಕ್ಷೆಯಲ್ಲಿರುವವನು ಗಣಪತಿ (ಆಕಾಶ ತತ್ತ್ವಕ್ಕೆ ಅಭಿಮಾನಿ)

ಕಕ್ಷೆಗಳನ್ನು ಎಣಿಕೆ ಮಾಡುವಾಗ ಎರಡು ಕ್ರಮಗಳಿವೆ : ಆರೋಹಣ ಕ್ರಮ, ಅವರೋಹಣಕ್ರಮವೆಂದು. ಮೊದಲನೆಯ ಕಕ್ಷೆಯಿಂದ (ಪರಮಾತ್ಮನಿಂದ) ಮೊದಲು ಮಾಡಿ ಕೆಳಕೆಳಗೆ ಬರುತ್ತ ಕಡೆಯ ಕಕ್ಷೆಯವರೆಗೆ (ಮರಗಿಡಗಳು, ಮೂವತ್ತೈದನೆಯ ಕಕ್ಷೆ) ಎಣಿಸಿದರೆ ಅದು ಅವರೋಹಣ ಕ್ರಮ. ಅದಕ್ಕೆ ವಿಪರೀತವಾಗಿ, ಕಡೆಯ ಕಕ್ಷೆಯಿಂದಲೇ ಆರಂಭಮಾಡಿ ಮೊದಲ ಕಕ್ಷೆಯವರೆಗೆ ಕ್ರಮವಾಗಿ ಏರುತ್ತಹೋದರೆ ಅದು ಆರೋಹಣ ಕ್ರಮ. ಹರಿಯ ಸ್ತುತಿಯಿಂದ ಆರಂಭಿಸಿ ಗಣಪತಿಯ ಸ್ತುತಿಯಲ್ಲಿ ಮುಗಿಸುವುದು ಅವರೋಹಣ ಕ್ರಮ; ಸ್ತೋತ್ರವು ಗಣಪತಿಯಿಂದಲೇ ಆರಂಭವಾಗಿ ಹರಿಯಲ್ಲಿ ಮುಗಿದರೆ ಅದು ಆರೋಹಣ ಕ್ರಮ. ಎಣಿಕೆಯಲ್ಲಿ ಮುಖ್ಯವಾದ ವಿವರ ಮೇಲಿನ ಕಕ್ಷೆ ಕೆಳಗಿನ ಕಕ್ಷೆಗಿಂತ ಉತ್ತಮವಾದುದು, ಗುಣಗಳಲ್ಲಿ ಅಧಿಕವಾದುದು ಎಂಬುದು ಮೂವತ್ತೈದನೆಯ ಕಕ್ಷೆಗಿಂತ (ಎಂದರೆ ಮರಗಿಡಗಳಿಗಿಂತ) ಕೆಳಗಿನದು, ಅವರವಾದುದು ಯಾವುದೂ ಇರದು, ಮೊದಲ ಕಕ್ಷೆಗಿಂತ (ಪರಮಾತ್ಮನಿಗಿಂತ) ಮೇಲಿನದು, ಉತ್ತಮವಾದುದು ಯಾವುದೂ ಇರದು. ಉಳಿದ ಎಲ್ಲ ಕಕ್ಷೆಗಳೂ ಮೇಲಿನದಕ್ಕೆ ಅವರವಾಗುತ್ತವೆ, ಕೆಳಗಿನದಕ್ಕೆ ಉತ್ತಮವಾಗುತ್ತವೆ. ಇದೇ 'ತರ–ತಮ' ಎಂಬ ಕಲ್ಪನೆ.ಇದು ತಾರತಮ್ಯದ ತಾತ್ಪರ್ಯ ಇದನ್ನು 'ನೀಚೋಚ್ಚಭಾವ' ವೆಂದೂ ಕರೆಯುತ್ತಾರೆ.

ತಾರತಮ್ಯದ ಅವರೋಹಣಕ್ರಮವನ್ನು ಹಿಡಿದು ಕಕ್ಷೆಗಳನ್ನು ಎಣಿಕೆ ಮಾಡಿದರೆ ಮುಂದೆ ಕಾಣಿಸಿರುವ ಪಟ್ಟಿ ಒದಗುತ್ತದೆ. ಇದರಲ್ಲಿ ಮೊದಲ ಹದಿನೆಂಟು ಕಕ್ಷೆಗಳನ್ನು ಮಾತ್ರ (ಇಲ್ಲಿನ ದೇವತೆಗಳೇ ಮುಖ್ಯ ತತ್ತ್ವಾಭಿಮಾನಿಗಳಾದುದರಿಂದ) ಇಲ್ಲಿ ಹೇಳಿದೆ. ಪ್ರತಿ ಸಾಲಿನಲ್ಲೂ ಮೊದಲು ಬರುವ ಸಂಖ್ಯೆ ಕಕ್ಷೆಯ ಸಂಖ್ಯೆ; ಮುಂದಿರುವ ಹೆಸರು ಆಯಾ ದೇವತೆಗಳದ್ದು ; ಕಂಸದಲ್ಲಿ ಅವರು ಪ್ರತಿನಿಧಿಸುವ ತತ್ತ್ವಗಳನ್ನು ಸೂಚಿಸಿದೆ.

೧. ಪರಮಾತ್ಮ, ಹರಿ, ವಿಷ್ಣು (ಸರ್ವೋತ್ತಮ ; ಪುರುಷ)
೨. ರಮಾದೇವಿ, ಮಹಾಲಕ್ಷ್ಮಿ (ಅವ್ಯಕ್ತತತ್ತ್ವ ; ಮೂಲಪ್ರಕೃತಿ)
೩. ಬ್ರಹ್ಮ ಮತ್ತು ವಾಯು (ಮಹತ್ತತ್ತ್ವ)
೪. ಸರಸ್ವತಿ ಅಥವಾ ಬ್ರಹ್ಮಪತ್ನಿ ಮತ್ತು ಭಾರತಿ ಅಥವಾ ವಾಯುಪತ್ನಿ (ಮಹದವ್ಯಕ್ತ)
೫. ಗರುಡ, ಶೇಷ ಮತ್ತು ರುದ್ರ (ಅಹಂಕಾರ ತತ್ತ್ವ)
೬. ಕೃಷ್ಣನ ಷಣ್ಮಹಿಷಿಯರು : ನೀಲಾ, ಭದ್ರಾ, ಮಿತ್ರವಿಂದಾ, ಕಾಲಿಂದೀ, ಲಕ್ಷಣಾ, ಜಾಂಬವತೀ
೭. ಸೌಪರ್ಣಿ ಅಥವಾ ಗರುಡ ಪತ್ನಿ, ವಾರುಣೀ ಅಥವಾ ಶೇಷಪತ್ನಿ, ಮತ್ತು ಪಾರ್ವತಿ ಅಥವಾ ರುದ್ರಪತ್ನಿ
೮. ಇಂದ್ರ ಮತ್ತು ಕಾಮ (ಮನಸ್ತತ್ತ್ವ)
೯. ಅಹಂಕಾರಿಕ ಪ್ರಾಣ (ತೈಜಸಾಹಂಕಾರ, ತ್ವಗಿಂದ್ರಿಯ)
೧೦. ದಕ್ಷ (ಪಾಣೀಂದ್ರಿಯ), ಅನಿರುದ್ಧ ಅಥವಾ ಕಾಮಪುತ್ರ, ರತಿ ಅಥವಾ ಕಾಮಪತ್ನಿ, ಸ್ವಾಯಂಭುವ ಮನು (ಉಪಸ್ಥೇಂದ್ರಿಯ), ಬೃಹಸ್ಪತಿ (ಶಬ್ದ), ಶಚಿ ಅಥವಾ ಇಂದ್ರಪತ್ನಿ
೧೧. ಪ್ರವಹವಾಯು (ವಾಯುತತ್ತ್ವ, ಭೂತವಾಯು)
೧೨. ಸೂರ್ಯ (ಚಕ್ಷುರಿಂದ್ರಿಯ), ಶತರೂಪಾ ಅಥವಾ ಸ್ವಾಯಂಭುವ ಮನುಪತ್ನಿ, ಚಂದ್ರ (ಶ್ರೋತ್ರೇಂದ್ರಿಯ) ಮತ್ತು ಯಮ
೧೩. ವರುಣ (ಅಪ್‌ತತ್ತ್ವ, ರಸನೇಂದ್ರಿಯ)
೧೪. ನಾರದ
೧೫. ಪ್ರಸೂತೀದೇವಿ, ಭೃಗು ಮತ್ತು ಪ್ರಧಾನಾಗ್ನಿ (ವಾಗಿಂದ್ರಿಯ, ತೇಜೋತತ್ತ್ವ)
೧೬. ಸಪ್ತರ್ಷಿಗಳು, ಪ್ರಹ್ಲಾದ ಮತ್ತು ವೈವಸ್ವತಮನು
೧೭. ಮಿತ್ರ, ಪ್ರವಹೀದೇವಿ ಮತ್ತು ತಾರಾ ಎಂಬಿಬ್ಬರು ಬೃಹಸ್ಪತಿ ಪತ್ನಿಯರು, ಮತ್ತು ರಕ್ಷೋಧಿನಾಥನಾದ ನಿರ್ಋತಿ (ಪಾಯು ಇಂದ್ರಿಯ)
೧೮. ವಿಷ್ವಕ್ಸೇನ, ಅಶ್ವಿನೀ ದೇವತೆಗಳು (ಘ್ರಾಣೇಂದ್ರಿಯ), ಗಣಪತಿ (ಆಕಾಶ ತತ್ತ್ವ), ಕುಬೇರ ಮತ್ತು ಶತದೇವತೆಗಳು

(ಇಲ್ಲಿ ಪಂಚಭೂತಗಳಲ್ಲಿ ನಾಲ್ಕು ಬಂದಿವೆ ; ಉಳಿದ ಪೃಥ್ವೀ ತತ್ತ್ವಕ್ಕೆ ಅಭಿಮಾನಿ ದೇವತೆ ಶನೈಶ್ಚರ, ಇಪ್ಪತ್ತೈದನೆಯ ಕಕ್ಷೆಯಲ್ಲಿರುವ ದೇವತೆ ; ಪಂಚಕರ್ಮೇಂದ್ರಿಯಗಳಲ್ಲಿ ನಾಲ್ಕು ಬಂದಿವೆ. ಉಳಿದ ಪಾದೇಂದ್ರಿಯಕ್ಕೆ ಅಭಿಮಾನಿ ದೇವತೆ ಇಂದ್ರಪುತ್ರನಾದ ಜಯಂತ).

ಇಲ್ಲಿಗೆ ಮುಖ್ಯ ತಾತ್ತ್ವಿಕ ದೇವತೆಗಳ ಎಣಿಕೆ ಮುಗಿಯಿತು. ಮುಂದೆ ಕರ್ಮಜದೇವತೆಗಳು (ಸ್ವಾರೋಚಿಷ ಮೊದಲಾದ ಮನುಗಳು, ಸನಕಾದಿ ಮುನಿಗಳು, ಕಾರ್ತವೀರ್ಯಾದಿ ರಾಜರು), ಅನಾಖ್ಯಾತ ದೇವತೆಗಳು (ಕೂರ್ಮಮುಖ್ಯಾದಿ), ಕರ್ಮಾಖ್ಯ ಕಲಾಭಿಮಾನಿ (ಪುಷ್ಕರ, ದೇವತಾ ವರ್ಗದಲ್ಲಿ ಕಡೆಯವನು), ಆಜಾನಜರು (ಪಿತೃಗಳು, ಅಸುರರು, ಗಂಧರ್ವರು, ಚಾರಣರು, ವಿದ್ಯಾಧರರು, ಸಿದ್ಧರು ಮೊದಲಾದವರು), ಶತೋನಶತಕೋಟಿ ಋಷಿಗಳು (ಅಪ್ರತೀಕಾಲಂಬನರು), ದೇವಗಂಧರ್ವರು, ಮನುಷ್ಯಗಂಧರ್ವರು ಇವರನ್ನು ಎಣಿಸಿ ಮೂವತ್ತಮೂರನೆಯ ಕಕ್ಷೆಯಲ್ಲಿ

ಮನುಷ್ಯೋತ್ತಮರನ್ನು ನೇರಿಸುತ್ತಾರೆ. ಮನುಷ್ಯೋತ್ತಮರೆಂದರೆ ಪರಮಾತ್ಮನೇ ತಮ್ಮ ಆತ್ಮಾ (ಅಂತರ್ಯಾಮಿ) ಎಂದು ಏಕಗುಣೋಪಾಸನೆ ಮಾಡುವವರು. ಮುಂದಿನ (ಎಂದರೆ ಕೆಳಗಿನ) ಕಕ್ಷೆಯಲ್ಲಿ ಜಂಗಮ ಪ್ರಾಣಿಗಳು (ಪಶು, ಪಕ್ಷಿ, ಜಲಚರ, ಕ್ರಿಮಿ, ಕೀಟ), ಕಡೆಯ (ತೀರ ಕೆಳಗಿನ) ಕಕ್ಷೆಯಲ್ಲಿ ಸ್ಥಾವರ ಪ್ರಾಣಿಗಳು (ಎಂದರೆ ಗಿಡ, ಮರ, ಬಳ್ಳಿ, ಹುಲ್ಲು). ಇದು 'ಗುಣತಾರತಮ್ಯಮಾಲಿಕೆ'ಯ ಒಕ್ಕಣೆ.

ಮೇಲೆ ಒಂದು ಕಕ್ಷೆಯಲ್ಲಿ ಒಂದಕ್ಕಿಂತ ಹೆಚ್ಚು ವಿವರಗಳು ಸೇರಿದಾಗ, ಮೊದಲು ಹೆಸರಿಸಿದ ವಿವರ ಅನಂತರ ಕಾಣಿಸಿದ್ದಕ್ಕಿಂತ ಉತ್ತಮ, ಅಧಿಕ. ಕಕ್ಷೆಗಳಲ್ಲಿ ತಾರತಮ್ಯವಿರುವಂತೆ, ಪ್ರತಿ ಕಕ್ಷೆಯಲ್ಲಿಯೂ ತಾರತಮ್ಯವಿದೆ. ನಿದರ್ಶನಕ್ಕೆ ಜಂಗಮ ಪ್ರಾಣಿಗಳು ಸ್ಥಾವರ ಪ್ರಾಣಿಗಳಿಗಿಂತ ಉತ್ತಮ. ಜಂಗಮಪ್ರಾಣಿಗಳಲ್ಲಿರುವ ಚಿತ್ತವ್ಯಾಪಾರ ಸ್ಥಾವರ ಪ್ರಾಣಿಗಳಲ್ಲಿ ಇಲ್ಲದ ಕಾರಣ. ಸ್ಥಾವರಪ್ರಾಣಿಗಳಲ್ಲೇ ತೃಣಕ್ಕಿಂತ ಗುಲ್ಮ, ಗುಲ್ಮಕ್ಕಿಂತ ಲತಾ, ಲತೆಗಿಂತ ವೃಕ್ಷ ಉತ್ತರೋತ್ತರವಾಗಿ ಉತ್ತಮ. ಹಾಗೆಯೇ ಜಂಗಮ ಪ್ರಾಣಿಗಳಲ್ಲೂ ಗಜ, ಅಶ್ವ, ಮೃಗ, ಪಶು, ಪಕ್ಷಿ, ಜಲಚರ, ಕ್ರಿಮಿಕೀಟ, ಇವು ಉತ್ತರೋತ್ತರವಾಗಿ ಅಧಮ. ಒಂದು ಕಕ್ಷೆಯಿಂದ ಮೇಲಿನ ಕಕ್ಷೆಯೆಂದರೆ ಹಲವಾರು ಗುಣಗಳಿಂದ ಅಧಿಕವಾದುದು, ಉತ್ತಮವಾದುದು. ಈ ಅಂತರವೂ ಮೇಲೆ ಮೇಲೆ ಹೋಗುತ್ತ ಹೆಚ್ಚುತ್ತದೆ. ಕಡೆಯ ಕಕ್ಷೆಯಲ್ಲಿರುವ ಸ್ಥಾವರಪ್ರಾಣಿಗಳಿಗೂ ಅದಕ್ಕೆ ಮೇಲಿನ ಕಕ್ಷೆಯಲ್ಲಿರುವ ಜಂಗಮ ಪ್ರಾಣಿಗಳಿಗೂ ಅಂತರ ಕಡಮೆ; ಜಂಗಮ ಪ್ರಾಣಿಗಳ ಆಧಿಕ್ಯ ಚಿತ್ತ ವ್ಯಾಪಾರದಲ್ಲಿ ಮಾತ್ರ. ಆದರೆ ಮೂರನೆಯ ಕಕ್ಷೆಯಲ್ಲಿರುವ ಬ್ರಹ್ಮ ಮತ್ತು ವಾಯುಗಳಿಗಿಂತ ಎರಡನೆಯ ಕಕ್ಷೆಯಲ್ಲಿರುವ ಮಹಾಲಕ್ಷ್ಮಿ ಒಂದು ಕೋಟಿ ಗುಣಗಳಿಂದ ಉತ್ತಮಳು ಅವಳಿಗಿಂತ ಮೊದಲ ಕಕ್ಷೆಯಲ್ಲಿರುವ ಪರಮಾತ್ಮನು ಅನಂತ (ಎಂದರೆ ಲೆಕ್ಕವಿಲ್ಲದಷ್ಟು) ಗುಣಗಳಿಂದ ಉತ್ತಮ, ಅಧಿಕ. ಈ ಅಂತರವನ್ನು ಮನುಷ್ಯಮಾತ್ರದವರು ಊಹಿಸಿಕೊಳ್ಳುವುದೂ ಸಾಧ್ಯವಿಲ್ಲ.

ತಾರತಮ್ಯ ಪ್ರಮೇಯವು ಕೇವಲ ದೇವತಾ ವಿಭಜನಕ್ರಮವೆಂದು ಬಗೆಯಬಾರದು. ಸಾಧನೆಯಲ್ಲಿ ಲಯ ಚಿಂತನ ಕ್ರಮದಲ್ಲೂ ಅದರ ಅನ್ವಯವಿದೆ. ಕೆಳಗಿನ ಕಕ್ಷೆಯಲ್ಲಿರುವ ದೇವತೆಗಳು ಪ್ರಲಯದಲ್ಲಿ ಮೇಲು ಮೇಲಿನ ಕಕ್ಷೆಯ ದೇವತೆಗಳಲ್ಲಿ ಲಯ ಹೊಂದುವುದನ್ನು ಮನಸ್ಸಿನಲ್ಲಿ ಬೇರೂರಿಸಿಕೊಳ್ಳುವುದು 'ಲಯಚಿಂತನ'. ಕಡೆಯಲ್ಲಿ ಎಲ್ಲ ದೇವತೆಗಳೂ ಮಹಾಲಕ್ಷ್ಮಿಯಲ್ಲಿ (ಮೂಲಪ್ರಕೃತಿಯಲ್ಲಿ) ಲೀನರಾಗಿ, ಮಹಾಲಕ್ಷ್ಮಿಯು ಪರಮಾತ್ಮನಿಂದ ಅವಿನಾಭಾವಸ್ಥಿತಿಯಲ್ಲಿರುವುದು ಈ ಚಿಂತನದ ಪರಾಕಾಷ್ಠೆ. ಮತ್ತು ಸಾಧನೆಯನ್ನು ಮಾಡುತ್ತಿರುವ ವೇಳೆಯಲ್ಲಿ ದೇವತಾ ತಾರತಮ್ಯದ ಪ್ರಯೋಜನವಿದೆ. ನಿದರ್ಶನಕ್ಕೆ ಉತ್ತಮರಿಗೆ ಚಂದ್ರನು (ಕಕ್ಷೆ ೨೨) ವಿಶೇಷ ಜ್ಞಾನವನ್ನು ಒದಗಿಸುತ್ತಾನೆ, ಪ್ರವಹವಾಯುವು (ಕಕ್ಷೆ ೧೧) ಆದರ ಮೇಲೆ ಯುಕ್ತಿಯಿಂದ ನಿರ್ಣೀತವಾದ ಜ್ಞಾನವನ್ನು ನೀಡುತ್ತಾನೆ ; ಈ ಜ್ಞಾನದಿಂದ ಜೀವನಿಗೆ ಉಂಟಾಗುವ ರತಿಯು ಅನಿರುದ್ಧ (ಕಕ್ಷೆ ೧೦) ನಿಂದ ಒದಗುತ್ತದೆ ; ಈ ರತಿಯಿಂದ ಹೊರಹೊಮ್ಮುವ ಅಲಂರೂಪದ ತೃಪ್ತಿಯು ಅಹಂಕಾರಿಕ ಪ್ರಾಣ (ಕಕ್ಷೆ ೯) ದಿಂದ ಬರುತ್ತದೆ. ಇದಾದ

ಮೇಲೆ ಇಂದ್ರನು (ಕಕ್ಷೆ ೮) ಅಸ್ಥಿರವಾದ ಪ್ರತಿಭೆಯನ್ನು ನೀಡುತ್ತಾನೆ ; ಈ ಪ್ರತಿಭೆಯು ಸ್ಥಿರವಾಗುವುದು ರುದ್ರಪತ್ನಿಯಾದ ಪಾರ್ವತಿ (ಕಕ್ಷೆ ೭) ಯಿಂದ. ಹೀಗೆ ಪ್ರತಿಭೆಯು ಸ್ಥಿರವಾದಾಗ ರುದ್ರನು (ಕಕ್ಷೆ ೫) ಜ್ಞಾನರೂಪ ವಾದ ಅಖಂಡಸ್ಮೃತಿಯನ್ನು ನೀಡುವನು ; ಅನಂತರ ವಾಯುಪತ್ನಿಯಾದ ಭಾರತಿಯು (ಕಕ್ಷೆ ೪) ಜೀವನಿಗೆ ಸ್ವಯೋಗ್ಯವಾದ ಭಗವದಪರೋಕ್ಷ ಜ್ಞಾನ ವನ್ನು ಒದಗಿಸುತ್ತಾಳೆ. ಕಡೆಯಲ್ಲಿ ವಾಯುವು (ಕಕ್ಷೆ ೩) ಅತ್ಯುತ್ತಮ ಸುಖರೂಪವಾದ ಸ್ವಸ್ವರೂಪಾನಂದದ ಆವಿರ್ಭಾವಕ್ಕೆ ಅವಕಾಶವೀಯು ವನು ; ಇದೇ ಮುಕ್ತಿಯೆನಿಸಿಕೊಳ್ಳುತ್ತದೆ ಆದರೆ ವಾಯುವು ಮುಕ್ತಿ ಯನ್ನು ಜೀವನಿಗೆ ಕೊಡುವುದು ಮಹಾಲಕ್ಷ್ಮಿಯ (ಕಕ್ಷೆ ೨) ಪ್ರೇರಣೆಯಿಂದ, ಮಹಾಲಕ್ಷ್ಮಿಯು ಪ್ರೇರಣೆಯಾಗುವುದು ಪರಮಾತ್ಮನ (ಕಕ್ಷೆ ೧) ಸಂಕಲ್ಪ ದಿಂದಲೇ.

ತಾರತಮ್ಯ ಸಿದ್ಧಾಂತವು ಹರಿದಾಸರಿಗೆ ಮುಖ್ಯವಾದುದು ಹೀಗೆ ಸಾಧನೆಗೆ ನೆರವಾಗುವುದರಿಂದ. ಪುರಂದರದಾಸರ ಪದಗಳಲ್ಲಿ ಈ ಪ್ರಮೇಯದ ಸಾರಭೂತವಾದ ನಿರೂಪಣೆ ಮಟ್ಟಿಗೆ ಬಂದಿದೆ. ಸಾಧನೆಗೆ ಅನುಪಯುಕ್ತವೆನಿಸಿದ ವಿವರಗಳನ್ನು ಅವರು ಕೈಬಿಟ್ಟಿದ್ದಾರೆ. ಹರಿಯು ಸರ್ವೋತ್ತಮನೆಂಬ ಜ್ಞಾನ ಒದಗಬೇಕೆಂಬುದೇ ತಾರತಮ್ಯಪ್ರಮೇಯದ ಪ್ರಯೋಜನವೆಂಬುದನ್ನು ಅವರು ಮನಗಂಡಿದ್ದಾರೆ. ಅವರ ರಚನೆಗಳಲ್ಲಿ ಈ ಪ್ರಮೇಯವನ್ನು ಉಲ್ಲೇಖಿಸುವುವು ಮೂರು ಪದಗಳು ಮಾತ್ರ. ಅವನ್ನು ಇಲ್ಲಿ ಕಾಣಿಸಿದೆ. ಉಳಿದ ಪದಗಳಲ್ಲಿ ಹಲವೆಡೆ ನೇರವಾಗಿ ತಾರ ತಮ್ಯದ ಪ್ರಸ್ತಾಪವಿಲ್ಲದಿದ್ದರೂ ಆ ಪ್ರಮೇಯವನ್ನು ಒಪ್ಪಿಕೊಂಡು ತಳೆದ ಧೋರಣೆ ಕಾಣುತ್ತದೆ. ಆದುದರಿಂದಲೇ ಈ ವಿಚಾರವಾಗಿ ಸುದೀರ್ಘ ವಾದ ವಿವರಣೆಯನ್ನು ಇಲ್ಲಿ ಒದಗಿಸಬೇಕಾಯಿತು. ದಾಸರ ದೃಷ್ಟಿಯಲ್ಲಿ ಮುಖ್ಯವಾದ ವಿಚಾರ ಇಷ್ಟೆ: ಜೀವರೆಲ್ಲರಿಗೆ ಬಿಂಬರೂಪನಾದ ಪರಮಾತ್ಮನು ತಾರತಮ್ಯದಲ್ಲಿರುವ ದೇವತೆಗಳಿಗೂ (ಎಂದರೆ ತತ್ತ್ವೇಶರಿಗೂ) ಬಿಂಬನೇ, ಪ್ರತಿಬಿಂಬಗಳಾದ ಅವರಲ್ಲೆಲ್ಲ ವ್ಯಾಪ್ತನಾಗಿದ್ದಾನೆ ; ಅವನ ಕಾರ್ಯವೇ ತತ್ತ್ವೇಶರ ಮೂಲಕ ನಡೆಯುತ್ತಿರುವುದು. ಮತ್ತು, ಪರಮಾತ್ಮನು ಅಂಶಿಯಾದುದರಿಂದ ತತ್ತ್ವೇಶರೆಲ್ಲರೂ ಅವನ ಅಲ್ಪಾಂಶಗಳೇ. ಯಾವ ದೇವತೆಯನ್ನು ಪೂಜಿಸಿದರೂ ಒಬ್ಬನೇ ಪರಮಾತ್ಮನ (ಬಿಂಬನ) ಅಂಶ ಪೂಜೆಯೆಂದು ಭಾವಿಸಬೇಕು. ಬಿಂಬನಾದ, ಅಂಶಿಯಾದ ಪರಮಾತ್ಮನು ಮರದ ಬೇರಿದ್ದಂತೆ ; ಉಳಿದ ದೇವತೆಗಳೆಲ್ಲ ಕಾಂಡ, ರೆಂಬೆ, ಕೊಂಬೆ ಗಳಿದ್ದಂತೆ (ಯಥಾ ತರೋರ್ಮೂಲ ನಿಷೇಚನೇನ ತೃಪ್ಯಂತಿ ತತ್‌ಸ್ಕಂಧ ಭುಜೋಪಶಾಖಾಃ)

೮

ಸಟ್ಟ

ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ
ಮತಿ ಪ್ರೇರಿಸುವಳು ಪಾರ್ವತೀದೇವಿ ಮು
ಕುತಿ ಪಥಕೆ ಮನವೀವ ಮಹರುದ್ರದೇವರು ಭ
ಕುತಿದಾಯಕಳು ಸಿರಿ ಭಾರತೀದೇವಿ ಯು
ಕುತಿ ಶಾಸ್ತ್ರಗಳಲ್ಲಿ ವನಜಸಂಭವನರಸಿ
ಸತ್ಕರ್ಮಗಳ ನಡೆಸಿ ಸುಜ್ಞಾನಮತಿಯಿತ್ತು
ಮತ್ತೆ ಪಾಲಿಸುವ ನಮ್ಮ ಪವಮಾನನು
ಚಿತ್ತದಲಿ ಆನಂದ ಸುಖವನೀವಳು ರಮಾ ಭ
ಕುತ ಜನರೊಡೆಯ ನಮ್ಮ ಪುರಂದರವಿಠ್ಠಲನು
ಸತತ ಇವರಲಿ ನಿಂತು ಕೃತಿಯ ನಡೆಸುವನು

[ಲೋಕದ ಮತ್ತು ಲೋಕೋತ್ತರವಾದ ವ್ಯವಹಾರಗಳನ್ನೆಲ್ಲ ಒಂದು ಸುಸಂಬದ್ಧ ವ್ಯವಸ್ಥೆಯ ಕಕ್ಷೆಯಲ್ಲಿ ತಂದು ಆಯಾ ವಿಭಾಗದ ರಕ್ಷಕ ದೈವಗಳ ಸ್ಥಾನ ನಿರ್ದೇಶ ಮಾಡಿರುವುದು ಈ ಪದದ ವೈಶಿಷ್ಟ್ಯ. ಇಡಿಯ ಲೋಕ ವ್ಯವಸ್ಥೆಯನ್ನು ಒಂದು ಮಹಾಕೃತಿ ಎಂಬಂತೆ ರೂಪಿಸಿ ಈ ಮಹತ್‌ಕೃತಿಯನ್ನು ರಚಿಸಿ ನಿರ್ವಹಿಸುತ್ತಿರುವ ಪುರಂದರವಿಠಲನ ಹಿರಿಮೆಯನ್ನು ಚಿತ್ರಿಸುವುದು ಕವಿಯ ಉದ್ದೇಶ

ಈ ಉಗಾಭೋಗವು ತಾರತಮ್ಯಸ್ತೋತ್ರವೇ ಆದರೆ ಇಲ್ಲಿ ದೇವತಾತಾರತಮ್ಯದ ಆರೋಹಣ ಕ್ರಮವನ್ನು ಅನುಸರಿಸಿದ್ದಾರೆ ಮೊದಲು ಗಣಪತಿ (ಹದಿನೆಂಟನೆಯ ಕಕ್ಷೆ), ಅನಂತರ ಪಾರ್ವತಿ (ಏಳನೆಯ ಕಕ್ಷೆ), ರುದ್ರ (ಐದನೆಯ ಕಕ್ಷೆ), ಭಾರತಿ ಮತ್ತು ಸರಸ್ವತಿ (ನಾಲ್ಕನೆಯ ಕಕ್ಷೆ), ವಾಯು (ಮೂರನೆಯ ಕಕ್ಷೆ), ರಮಾದೇವಿ (ಎರಡನೆಯ ಕಕ್ಷೆ) ಮತ್ತು ಕಡೆಯಲ್ಲಿ ವಿಷ್ಣು (ಮೊದಲ ಕಕ್ಷೆ) ಇವರನ್ನು ಸ್ತುತಿಸಿದ್ದಾರೆ. ಗಣಪತಿಯ ಕಕ್ಷೆಯಲ್ಲೇ ಸೇರಿರುವ ಅಶ್ವಿನೀದೇವತೆಗಳು, ಇಲ್ಲಿ ಉಲ್ಲೇಖಕ್ಕೆ ಬಂದಿಲ್ಲ. ನಾಲ್ಕನೆಯ ಕಕ್ಷೆಯಲ್ಲಿ ಬ್ರಹ್ಮನ ಹೆಂಡತಿಯಾದ ಸರಸ್ವತಿಯೊಂದಿಗೆ ವಾಯುಪತ್ನಿಯಾದ ಭಾರತೀದೇವಿಯೂ ಕಾಣಿಸಿಕೊಳ್ಳುತ್ತಾಳೆ. ಸರಸ್ವತಿಯು ಯುಕ್ತಿಗೂ (ಎಂದರೆ ಜ್ಞಾನಕ್ಕೂ), ಭಾರತಿಯು ಭಕ್ತಿಗೂ ಅಭಿಮಾನಿಗಳು ]

ಗಣನಾಥ—ದೇವತಾತಾರತಮ್ಯದ ಹದಿನೆಂಟನೆಯ ಕಕ್ಷೆಯಲ್ಲಿರುವ ದೇವತೆಗಳೆಲ್ಲ ಗಣನಾಯಕರೇ. ವಿಷ್ವಕ್ಸೇನ ವಿಷ್ಣುಸೇನೆಯೆಂಬ ಗಣಕ್ಕೆ, ಕುಬೇರ ಯಕ್ಷ ಗಣಕ್ಕೆ, ಶತದೇವತೆಗಳು ವಸು–ರುದ್ರ–ಆದಿತ್ಯ–ಮರುದ್ಗಣಗಳಿಗೆ, ಮತ್ತು ವಿಘ್ನೇಶ್ವರನು ವಿಘ್ನಗಣಗಳಿಗೆ ನಾಯಕರು. ವ್ಯವಹಾರದಲ್ಲೇನೋ ವಿಘ್ನೇಶ್ವರನನ್ನೇ ಗಣನಾಯಕನೆಂದು ಕರೆಯುವುದು ವಾಡಿಕೆ.

ಪಾರ್ವತೀದೇವಿ—ಐದನೆಯ ಕಕ್ಷೆಯಲ್ಲಿರುವ ಗರುಡ–ಶೇಷ–ರುದ್ರರ ಪತ್ನಿಯರು ಏಳನೆಯ ಕಕ್ಷೆಯಲ್ಲಿ ಸೇರುತ್ತಾರೆ : ಸೌಪರ್ಣಿ, ವಾರುಣಿ, ಪಾರ್ವತಿಯರು.

ಪವಮಾನನು—ಮೂರನೆಯ ಕಕ್ಷೆಯಲ್ಲಿರುವ ವಾಯು ; ಮುಂದೆ ಅದೇ ಕಕ್ಷೆಯಲ್ಲಿ ಸ್ವಾಧಿಕನಾದ ಬ್ರಹ್ಮನ ಪದವಿಯನ್ನು ಪಡೆಯುವವನು.

ರಮಾ—ಲಕ್ಷ್ಮಿ.

ಇವರಲಿ ನಿಂತು—ಇವರೆಲ್ಲರೂ ತತ್ತ್ವೇಶರಾದರೂ, ಅವರವರ ಕರ್ಮಗಳನ್ನು ನಡೆಸುವವರಾದರೂ ಅವರಲ್ಲಿ ಅಂತರ್ಯಾಮಿಯಾಗಿ ಪ್ರೇರಕನಾಗಿರುವ ವಿಷ್ಣುವಿನ ಅಧೀನರಾಗಿಯೇ ತಂತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಾರೆ. ವಿಷ್ಣುವು ಸರ್ವೋತ್ತಮ, ಸರ್ವರಿಗೂ ಸತ್ತಾಪ್ರದ, ಪ್ರಮಿತಿಪ್ರದ ಮತ್ತು ಪ್ರವೃತ್ತಿಪ್ರದ ; ಎಂದರೆ ಎಲ್ಲರೂ ಇರುವುದಕ್ಕೆ, ಅರಿಯುವುದಕ್ಕೆ, ಕೆಲಸ ವನ್ನು ಕೈಗೊಳ್ಳುವುದಕ್ಕೆ ಕಾರಣನಾದವನು.

ವನಜ ಸಂಭವನರಸಿ—ಬ್ರಹ್ಮನ ರಾಣಿ, ಶಾರದೆ.



ನಟ್ಟಿ ಅಟ್ಟ

ಶ್ರೀಪತಿಯು ನಮಗೆ ಸಂಪದವೀಯಲಿ ಪ

ವಾಣೀಪತಿಯು ನಮಗೆ ದೀರ್ಘಾಯು ಕೊಡಲಿ ಅ

ಸುರರ ಗಣವನು ಪೊರೆಯೆ ವಿಷವ ಕಂಠದಲಿಟ್ಟ
ಪರ ನಮಗೆ ಸತತ ಸಹಾಯಕನಾಗಲಿ
ನರರೊಳುನ್ನತವಾದ ಭೋಗ ಭಾಗ್ಯಂಗಳನು
ಪುರುಹೂತ ಪೂರ್ಣ ಮಾಡಿಸಲಿ ನಮಗೆ ೧

ವಿನುತ ಸಿದ್ಧಿಪ್ರದನು ವಿಘ್ನೇಶ ದಯದಿಂದ
ನೆನೆದ ಕಾರ್ಯಗಳೆಲ್ಲ ನೆರೆವೇರಿಸಲಿ
ದಿನದಿನದಿ ಅಶ್ವಿನಿಗಳಾಪತ್ತುಗಳ ಕಳೆದು
ಮನಕೆ ಹರುಷವನಿತ್ತು ಮನ್ನಿಸಲಿ ಬಿಡದೆ ೨

ನಿರುತ ಸುಜ್ಞಾನವನು ಈವ ಮಧ್ವರಾಯ
ಗುರುಗಳಾಶೀರ್ವಾದ ನಮಗಾಗಲಿ
ಪುರಂದರವಿಠಲನ ಕರುಣದಿಂದಲಿ ಸಕಲ
ಸುರರೊಲುಮೆ ನಮಗೆ ಸುಸ್ಥಿರವಾಗಲಿ ೩

[ಇದು ತಾರತಮ್ಯಸ್ತೋತ್ರವೆಂದು ಹೆಸರಾಗಿದೆ. ಇದರಲ್ಲಿ ಮಾಧ್ವಸಿದ್ಧಾಂತದ ದೇವತಾತಾರತಮ್ಯದ ಅವರೋಹಣ ಕ್ರಮವನ್ನು ಅನುಸರಿಸಿ ಮೊದಲು ಲಕ್ಷ್ಮೀ ನಾರಾಯಣರು (ಮೊದಲ ಎರಡು ಕಕ್ಷೆಗಳು), ಬ್ರಹ್ಮ ಸರಸ್ವತಿಯರು (ಮೂರು ನಾಲ್ಕನೆಯ ಕಕ್ಷೆಗಳು), ರುದ್ರ (ಐದನೆಯ ಕಕ್ಷೆ), ಇಂದ್ರ (ಎಂಟನೆಯ ಕಕ್ಷೆ), ಗಣಪತಿ ಮತ್ತು ಅಶ್ವಿನೀದೇವತೆಗಳು (ಹದಿನೆಂಟನೆಯ ಕಕ್ಷೆ) ಕಡೆಯಲ್ಲಿ ಗುರುಗಳು ಇವರ ಪ್ರಾರ್ಥನೆಯಿದೆ. ಆರು ಮತ್ತು ಏಳನೆಯ ಕಕ್ಷೆಗಳಲ್ಲಿರುವ ಕೃಷ್ಣನ ಷಣ್ಮಹಿಷಿಯರು ಮತ್ತು ಸೌಪರ್ಣೀ, ವಾರುಣೀ ಪಾರ್ವತಿಯರನ್ನೂ, ಒಂಬತ್ತರಿಂದ ಹದಿನೇಳನೆಯ ಕಕ್ಷೆಗಳಲ್ಲಿರುವ ಆಹಂಕಾರಿಕಪ್ರಾಣ, ದಕ್ಷಾದಿಗಳು, ಪ್ರವಹವಾಯು, ಸೂರ್ಯ ಚಂದ್ರಾದಿಗಳು, ವರುಣ ನಾರದ ಮತ್ತಿತರ ಋಷಿಗಳು ಮೊದಲಾದ ದೇವತೆಗಳನ್ನೆಲ್ಲ

ಬಿಟ್ಟಿದ್ದಾರೆ. ಇವರೆಲ್ಲ ಅಮುಖ್ಯ ತತ್ತ್ವೇಶರೆಂಬ ಕಾರಣದಿಂದ ಇರಬಹುದು. ಮುಖ್ಯ ದೇವತೆಗಳಲ್ಲೂ ಎರಡನೆಯ ಕಕ್ಷೆಯಲ್ಲಿ ವಾಯುವನ್ನೂ ನಾಲ್ಕನೆಯ ಕಕ್ಷೆಯಲ್ಲಿ ಭಾರತಿಯನ್ನೂ ಏಳನೆಯ ಕಕ್ಷೆಯಲ್ಲಿ ಪಾರ್ವತಿಯನ್ನೂ ಬಿಟ್ಟಿರುವುದನ್ನು ಗಮನಿಸ ಬಹುದು. ವಾಯುವಿನ ಅವತಾರವಾದ ಮಧ್ವಾಚಾರ್ಯರು ಗುರುಗಳ ಕಕ್ಷೆಯಲ್ಲಿ ಬಂದಿದ್ದಾರೆ.]

ಶ್ರೀಪತಿ—ನಾರಾಯಣನು (ಮೊದಲ ಕಕ್ಷೆ), ಲಕ್ಷ್ಮಿ (ಎರಡನೆಯ ಕಕ್ಷೆ) ಯೊಡಗೂಡಿ.

ವಾಣೀಪತಿಯು—ಬ್ರಹ್ಮನು (ಮೂರನೆಯ ಕಕ್ಷೆ), ಸರಸ್ವತಿ (ನಾಲ್ಕನೆಯ ಕಕ್ಷೆ) ಯೊಡಗೂಡಿ.

ಸುರರ ಗಣವನು ಪೊರೆಯೆ—ಸಮುದ್ರಮಥನ ಕಾಲದಲ್ಲಿ ವಿಷವು ಹೊರಬಂದು ದೇವತೆಗಳನ್ನು ತೊಂದರೆಗೀಡುಮಾಡಿದಾಗ, ರುದ್ರನು ಈ ವಿಷವನ್ನುಂಡು ದೇವತೆಗಳ ನೆಮ್ಮದಿಗೆ ಕಾರಣನಾದನೆಂಬ ಕತೆ ಹಿನ್ನೆಲೆ. ಆಗಲೇ ಶಿವನು ವಿಷಕಂಠನಾದದ್ದು.

ಹರ—ಶಿವ, ರುದ್ರದೇವರು.

ಪುರುಹೂತ—ಇಂದ್ರ.

ವಿಘ್ನೇಶ—ಗಣಪತಿ.

ಅಶ್ವಿನಿಗಳು—ಸೂರ್ಯನ ಅವಳಿಮಕ್ಕಳು, ಅಶ್ವಿನೀಕುಮಾರರು; ದೇವಲೋಕದ ವೈದ್ಯರು.

ಸಕಲಸುರರ—ತಾರತಮ್ಯ ಮಾಲಿಕೆಯಲ್ಲಿರುವ ಎಲ್ಲ ದೇವತೆಗಳು (ಎರಡನೆಯ ಕಕ್ಷೆಯಿಂದ ಇಪ್ಪತ್ತೇಳನೆಯ ಕಕ್ಷೆಯವರೆಗೆ).



ಸೌರಾಷ್ಟ್ರ ಝಂಪೆ

ಸತ್ಯ ಜಗತಿದು ಪಂಚಭೇದವು ನಿತ್ಯ ಶ್ರೀ ಗೋವಿಂದನ
ಕೃತ್ಯವರಿತು ತಾರತಮ್ಯದಿ ಕೃಷ್ಣನಧಿಕವೆಂದು ಸಾರಿರೈ ಪ

ಜೀವ ಈಶಗೆ ಭೇದ ಸರ್ವತ್ರ ಜೀವ ಜೀವಕೆ ಭೇದವು
ಜೀವ ಜಡಕೆ ಜಡ ಜಡಕೆ ಭೇದ ಜಡ ಪರಮಾತ್ಮಗೆ ೧

ಮಾನುಷೋತ್ತಮರಧಿಕ ಕ್ಷಿತಿಪರು ಮನುಜ ದೇವ ಗಂಧರ್ವರು
ಜಾನಪಿತರಜಾನಜ ಕರ್ಮಜರು ಉಕ್ತ ಶೇಷ ಶತಸ್ಥರು ೨

ಗಣಪಮಿತ್ರರು ಸಪ್ತಋಷಿಗಳು ವಹ್ನಿ ನಾರದ ವರುಣರು
ಇನಜಗೆ ಸಮ ಚಂದ್ರ ಸೂರ್ಯರು ಮನುಸುತೆಯು ಹೆಚ್ಚು ಪ್ರವಹನು ೩

ದಕ್ಷ ಸಮ ಅನಿರುದ್ಧ ಗುರು ಶಚಿ ರತಿಸ್ವಾಯಂಭುವರಾ ರ್ವರು
ಕಕ್ಷಪ್ರಾಣನಿಗಿಂತ ಕಾಮನು ಕಿಂಚಿದಧಿಕನು ಇಂದ್ರನು ೪

ದೇವೇಂದ್ರನಿಂದಧಿಕ ಮಹ ರುದ್ರ ರುದ್ರ ಸಮ ಶೇಷಗರುಡರು
ಗರುಡಶೇಷರಿಗಧಿಕರೆನಿಪರು
ದೇವಿ ಭಾರತಿ ಸರಸ್ವತಿ ೫

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು
ವಾಯು ಬ್ರಹ್ಮಗೆ ಕೋಟಿ ಗುಣದಿಂದ ಅಧಿಕಶಕ್ತಳು ಶ್ರೀ ರಮಾ ೬

ಅನಂತ ಗುಣದಿಂ ಲಕುಮಿಗಧಿಕನು ಶ್ರೀ ಪುರಂದರವಿಠಲನು
ಘನ ಸಮರು ಇವಗಿಲ್ಲ ಜಗದೊಳು ಹನುಮ ಹೃತ್ಪದ್ಮವಾಸಿಗೆ ೭

[ಈ ಪದವಲ್ಲಿ ದ್ವೈತಸಿದ್ಧಾಂತದ ಮುಖ್ಯ ಪ್ರಮೇಯಗಳಾದ ಪಂಚಭೇದ ಮತ್ತು ದೇವತಾತಾರತಮ್ಯ ಇವುಗಳ ಉಲ್ಲೇಖವಿದೆ. ಮೊದಲ ಎರಡು ನುಡಿಗಳಲ್ಲಿ ಪಂಚಭೇದ, ಮುಂದೆ ಐದು ನುಡಿಗಳಲ್ಲಿ ಆರೋಹಣ ತಾರತಮ್ಯಕ್ರಮ ಇವನ್ನು ಹೇಳಿದ್ದಾರೆ.]

ಸತ್ಯ ಜಗತಿದು...—'ವಿಶ್ವಂ ಸತ್ಯಂ ವಶೇ ವಿಷ್ಣೋಃ' ಎಂಬ ಆಚಾರ್ಯರ ವಾಕ್ಯದ ಕನ್ನಡ ರೂಪ.

ತಾರತಮ್ಯದಿ...—ದೇವತಾತಾರತಮ್ಯದ ಪ್ರಯೋಜನವು ಹರಿಸರ್ವೋತ್ತಮತ್ವವನ್ನು ಸಾಧಿಸುವುವೇ ಆಗಿದೆ.

ಜೀವ ಈಶಗೆ.. —ಪಂಚಭೇದದ ವಿವರ. 'ಪರಮಶ್ರುತಿ'ಯ ಒಕ್ಕಣೆ–'ಜೀವೇಶ್ವರಭಿದಾ', 'ಜಡೇಶ್ವರಭಿದಾ', 'ಜೀವಭೇದೋ ಮಿಥಃ', 'ಜಡಜೀವಭಿದಾ', 'ಮಿಥಃ ಜಡಭೇದಃ' ಎಂಬುದರ ಸರಳ ನಿರೂಪಣೆ ಇಲ್ಲಿದೆ.

ಜಾನಪಿತರಜಾನ.. —ಇಲ್ಲೊಂದು ಪಾಠಾಂತರವಿದೆ– 'ಜಾನಪಿತರಜಾನಕರ್ಮಜದಾನವಾರಿ ತತ್ತ್ವೇಶರು'. ಮನುಜ ಗಂಧರ್ವರು ಮೂವತ್ತೊಂದನೆಯ ಕಕ್ಷೆಯವರು; ಅವರ ಮೇಲೆ (ಎಂದರೆ ಅವರಿಗಿಂತ ಉತ್ತಮರು) ದೇವಗಂಧರ್ವರು, ಅವರ ಮೇಲೆ ಚಿರಪಿತೃಗಳು ಇವರನ್ನೇ ಇಲ್ಲಿ 'ಜಾನಪಿತರು' ಎಂದು ಕರೆಯಲಾಗಿದೆ (ಇಪ್ಪತ್ತೊಂಬತ್ತನೆಯ ಕಕ್ಷೆ). ಅವರ ಮೇಲೆ ಅಜಾನಜೇಯರಾಧಮರು (ಶತೋನ ಶತಕೋಟಿ ಋಷಿಗಳು) ; ಇವರನ್ನು 'ಅಜಾನಜ ಕರ್ಮಜರು' ಎಂದು ಇಲ್ಲಿ ಕರೆದಿದ್ದಾರೆ. ಈ ಇಪ್ಪತ್ತೆಂಟನೆಯ ಕಕ್ಷೆಯಾದ ಮೇಲೆ 'ಶೇಷಶತಸ್ಥರು' ಎಂಬ ನೂರು ದೇವತೆಗಳು ಹದಿನೆಂಟನೆಯ ಕಕ್ಷೆಗೆ ಸೇರಿದವರು. ಇವರಲ್ಲಿ ಅಷ್ಟ ವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಏಕೋನಪಂಚಾಶತ್ ಮರುತ್ತುಗಳು ದಶವಿಶ್ವೇದೇವತೆಗಳು ಮೊದಲಾದವರು ಸೇರುತ್ತಾರೆ.

ಗಣಪ ಮಿತ್ರರು...—ಗಣಪತಿಯೂ ಶೇಷಶತಸ್ಥರ ಕಕ್ಷೆಯಲ್ಲೇ ಸೇರಿದವನು, ಆದರೆ ಅವರಿಗಿಂತ ಉತ್ತಮ. ಆಕಾಶಾಭಿಮಾನಿಯಾಗಿ ಮುಖ್ಯತತ್ತ್ವೇಶರ ಎಣಿಕೆಯಲ್ಲಿ ಬಂದವನು. ಮಿತ್ರ (ಆದಿತ್ಯ) ಅವನಿಗಿಂತ ಉತ್ತಮ, ಹದಿನೇಳನೆಯ ಕಕ್ಷೆ ; ಸಪ್ತಋಷಿಗಳು (ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಇವರು ಸ್ವಾಯಂಭುವ ಮನ್ವಂತರದವರು ; ಮಹಾಭಾರತದ ಶಾಂತಿಪರ್ವದಲ್ಲಿ ಇವರ ಉಲ್ಲೇಖವಿದೆ ; ವೈವಸ್ವತ ಮನ್ವಂತರದಲ್ಲಿ ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ಅತ್ರಿ, ವಸಿಷ್ಠ, ಕಶ್ಯಪ ಇವರು ಸಪ್ತರ್ಷಿಗಳು).

ವಹ್ನಿ—ಪ್ರಧಾನಾಗ್ನಿ.

ಇನಜ—ಯಮಧರ್ಮ.

ಮನುಸುತೆಯು—ಶತರೂಪಾದೇವಿ.

ಪ್ರವಹನು—ಪ್ರವಹವಾಯು, ಭೂತವಾಯುವಿನ ಪ್ರಧಾನಾಭಿಮಾನಿ, ಜಡ.

ಕಕ್ಷಪ್ರಾಣ—ತೈಜಸಾಹಂಕಾರದಿಂದ ಉದ್ಭೂತವಾದ ಪ್ರಾಣ.

ಹನುಮ ಹೃತ್ಪದ್ಮವಾಸಿ—ಮಧ್ವಾಚಾರ್ಯರ ಹೃದಯದಲ್ಲಿ ನೆಲೆಸಿದ ಹರಿ.

೪೨

ಸಾವೇರಿ ಝಂಪೆ

ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ
ಹರಿ ಸರ್ವ ವಿಶ್ವಮಯಂ ಜಗತು ಪ

ಹರಿಯಲ್ಲದನ್ಯತ್ರ ದೈವಂಗಳಿಲ್ಲವೆಂದು
ಉರಗನ ಹೆಡೆಯನ್ನು ಪಿಡಿದು ಹೇಳುವೆನಯ್ಯ ಅ

ಜಗವ ಪುಟ್ಟಿಸುವ ಬ್ರಹ್ಮ ನಿನ್ನ ಮಗ
ಜಗವ ಸಂಹರಿಸುವ ರುದ್ರ ಮೊಮ್ಮಗನು
ಜಗದ ಪಾವನೆ ಭಾಗೀರಥಿ ನಿನ್ನ ಮಗಳಯ್ಯ
ಜಗದ ಜೀವರ ಮಾತೆ ನಿನ್ನರಸಿಯೊ ದೇವ ೧

ವಿಶ್ವತೋಮುಖ ನೀನೇ ವಿಶ್ವತಶ್ಚಕ್ಷು ನೀನೆ
ವಿಶ್ವತೋಬಾಹು ವಿಶ್ವಪಾದನು ನೀನೆ
ವಿಶ್ವಉದರ ನೀನೇ ವಿಶ್ವವ್ಯಾಪಕ ನೀನೆ
ವಿಶ್ವನಾಟಕ ಸೂತ್ರಧಾರಿಯೆ ವಿಷ್ಣುವೆ ೨

ಆಗಮ ನಿಗಮ ಪುರಾಣಶಾಸ್ತ್ರಂಗಳಲ್ಲಿ
ಯೋಗಿಗಳರಸಿ ನಿಮ್ಮ ಕಾಣದಿಪ್ಪರೊ
ನಾಗಶಯನ ಭೋಗಿ ಭೂಷಣವಂದಿತ
ಭಾಗವತ ಪ್ರಿಯ ಶ್ರೀ ಪುರಂದರವಿಠಲ ೩

ಹರಿಯೇ ಸರ್ವೋತ್ತಮ—ಸಕಲ ಜೀವ ಜಡ ಪ್ರಪಂಚದಲ್ಲಿ ಅವನಿಗೆ ಎಣೆಯಾದವರೂ ಇಲ್ಲ ಮಿಗಿಲಾದವರೂ ಇಲ್ಲ ( ನ ತತ್ಸಮಃ ನಾಭ್ಯಧಿಕಃ').

ಹರಿಯೇ ಪರದೇವತೆ—ದೇವತಾತಾರತಮ್ಯದಲ್ಲಿ ಎಲ್ಲದೇವತೆಗಳೂ ಅವನಿಗೆ ಅಧೀನರೆ ; ಉಳಿದೆಲ್ಲ ದೇವತೆಗಳಿಗೂ ಅವನೇ ದೇವತೆಯಾದುದರಿಂದ 'ಪರ' ದೇವತೆ.

ಹರಿ ಸರ್ವ—ಸರ್ವವ್ಯಾಪಿ.

'ವಿಶ್ವಮಯಂ ಜಗತ್'—ಇದು 'ವಿಷ್ಣುಮಯಂ ಜಗತ್' ಎಂದಿರಬೇಕು ; ವಿಶ್ವವೆನ್ನುವುದು ವಿಷ್ಣುವಿನ ಹೆಸರೆಂದು ಬೇಕಿದ್ದರೆ ಸಮಾಧಾನವನ್ನು ಹೇಳಬಹುದು (ಸಹಸ್ರನಾಮಸ್ತೋತ್ರದಲ್ಲಿ 'ವಿಶ್ವಂ ವಿಷ್ಣುರ್ವಷಟ್ಕಾರಃ' ಎಂದಿದೆ).

ಹರಿಯಲ್ಲದೆ ಅನ್ಯತ್ರ ದೈವಂಗಳಿಲ್ಲ—ಎಲ್ಲ ದೈವಗಳಿಗೂ ಹರಿಯೇ ಸತ್ತಾಪ್ರದ, ಪ್ರೇರಕ, ನಿಯಾಮಕ.

ಉರಗನ ಹೆಡೆಯನ್ನು ಪಿಡಿದು ಹೇಳುವೆನು—'ಹಾವಿನ ಹೆಡೆಯನ್ನು ಹಿಡಿದು ಹೇಳುವೆನು' ಎಂದರೆ ಅಂಜದೆ, ಅಳುಕದೆ ಶಪಥಮಾಡಿ ಹೇಳುತ್ತೇನೆ. (ಹರಿಯಲ್ಲದನ್ಯತ್ರ ದೈವಗಳುಂಟೆಂದು ಉರಗನ ಮುಂಡಿಗೆಯನ್ನಾರಾದರೆತ್ತಲಿ' —ಇದು ಪಾಠಾಂತರ. ಈ ಬಗೆಯ ಪೈಪೋಟಿಗೂ ತಾವು ಸಿದ್ಧ ಎಂಬರ್ಥ)

ಜಗವ ಪುಟ್ಟಿಸುವ ಬ್ರಹ್ಮ—ದೇವತಾತಾರತಮ್ಯದಲ್ಲಿ ಮೂರನೆಯ ಕಕ್ಷೆಯಲ್ಲಿರುವನು. ಮಹಾಪ್ರಳಯವಾದ ಮೇಲೆ ಹರಿಯು ಬ್ರಹ್ಮಾಂಡಜಲದಲ್ಲಿ ಹದಿನಾಲ್ಕು ಕೋಟಿಯೋಜನ ಪ್ರಕಾಶವನ್ನು ಬೀರುವ ಹದಿನಾಲ್ಕು ದಳಗಳ ಕಮಲವನ್ನು ಕಾಣಿಸಿ ಅದರಿಂದ ಬ್ರಹ್ಮನು ಹುಟ್ಟಿಕೊಳ್ಳುವಂತೆ ಮಾಡುತ್ತಾನೆ ; ಹದಿನಾಲ್ಕು ದಳಗಳಿಂದ ಹದಿನಾಲ್ಕು ಲೋಕಗಳು ಒದಗಿಬರುತ್ತವೆ. ತಾನು ಬ್ರಹ್ಮನ ಅಂತರ್ಯಾಮಿಯಾಗಿ ನಿಂತು ಜಗತ್ತಿನ ಸೃಷ್ಟಿವ್ಯಾಪಾರವನ್ನು ಬ್ರಹ್ಮನಿಂದ ಮಾಡಿಸುತ್ತಾನೆ.

ಜಗವ ಸಂಹರಿಸುವ ರುದ್ರ—ಐದನೆಯ ಕಕ್ಷೆಯಲ್ಲಿರುವ ದೇವತೆ : ಬ್ರಹ್ಮನಿಂದ ಹೊರಬಂದನಾಗಿ ವಿಷ್ಣುವಿಗೆ ಮೊಮ್ಮಗ.

ಭಾಗೀರಥಿ—ಗಂಗೆ, ವಿಷ್ಣುಪಾದಗಳಿಂದ ಹೊರಹೊಮ್ಮಿದಳೆಂದು ಪುರಾಣಕತೆ.

ಜಗದ ಜೀವರ ಮಾತೆ—ಜೀವಜಡಜಗತ್ತನ್ನು ವಿಷ್ಣುವಿನ ಆದೇಶದಂತೆ, ಅವನ ಬಲದಿಂದಲೇ, ಸೃಷ್ಟಿಮಾಡುವವಳು ರಮಾದೇವಿ, ಲಕ್ಷ್ಮಿ ; ಮೂಲಪ್ರಕೃತಿ ಮತ್ತು ಆದಿಶಕ್ತಿ. ಎರಡನೆಯ ಕಕ್ಷೆಯಲ್ಲಿರುವ ದೇವತೆ. ಪರಮಾತ್ಮನಂತೆ ನಿತ್ಯಳು, ಅಪ್ರಾಕೃತಳು, ಅವನೊಂದಿಗೆ ಅವಿನಾಭಾವ ಸಂಬಂಧದಲ್ಲಿರುವವಳು. ಹಾಗೆಂದೇ ಅವನ ಅರಸಿ (ರಾಣಿ).

ವಿಶ್ವತೋಮುಖ...—ಪುರುಷಸೂಕ್ತ ಮತ್ತು ನಾರಾಯಣಸೂಕ್ತಗಳಲ್ಲಿ ಬರುವ ಒಕ್ಕಣೆ : ಋಗ್ವೇದದಲ್ಲಿ 'ವಿಶ್ವತಶ್ಚಕ್ಷುರುತ ವಿಶ್ವತೋಮುಖಃ' ಎಂಬ ಮಾತಿದೆ. ವಿಷ್ಣುವು ಎಲ್ಲೆಲ್ಲೂ ಇರುವನೆಂದೂ, ಎಲ್ಲರ ಎಲ್ಲ ಅವಯವಗಳಲ್ಲೂ ಅವನೇ ಅಡಗಿದ್ದಾನೆಂದೂ, ಎಲ್ಲ ವ್ಯಾಪಾರಗಳೂ ಅವನ ಅಧೀನವಾಗಿಯೇ ಆಗಿವೆಯೆಂದೂ ತಾತ್ಪರ್ಯ.

ಆಗಮ—ಪಾಂಚರಾತ್ರವೇ ಮೊದಲಾದ ತಂತ್ರಶಾಸ್ತ್ರಗ್ರಂಥಗಳು.

ನಿಗಮ—ವೇದ ಮತ್ತು ಅದಕ್ಕೆ ಹೊಂದಿಕೊಂಡು ಬಂದ ಶಾಸ್ತ್ರ.

ಪುರಾಣಗಳು—ವೇದದ ಇಂಗಿತವನ್ನು ಸಾಮಾನ್ಯ ಜನರಿಗೆ ತಿಳಿಸಲು ಸಿದ್ಧವಾದ, ಉಪಬೃಂಹಣ ರೂಪವಾದ, ಗ್ರಂಥಗಳು : ವೇದವ್ಯಾಸರೇ ರಚಿಸಿದ್ದೆಂದು ಹದಿನೆಂಟು ಪುರಾಣಗಳ ಎಣಿಕೆಯಿದೆ.

ಭೋಗಿಭೂಷಣವಂದಿತ—ಹಾವನ್ನೇ ಆಭರಣವಾಗಿ ಉಳ್ಳ ಶಿವನಿಂದ ಪೂಜಿಸಲ್ಪಡುವವನು.

ಮೋಹನ ತ್ರಿವಿಡೆ

ಶ್ರೀ ಮಧ್ವರಾಯರ ಸೇವೆ ದೊರಕುವುದು
ಜನುಮ ಸಫಲ ಕಾಣಿರೊ
ಶ್ರೀಮದಾನಂದ ತೀರ್ಥರ ಪಾದವ ನೆನೆವರು
ಸಾಮಾನ್ಯ ಸುರರು ಕಾಣೆ ಬೊಮ್ಮನ ಆಣೆ ಪ

ಜಗತು ಸತ್ಯವು ಅಲ್ಲ ಜಡಜೀವ ಭೇದವಿಲ್ಲ
ಅಗುಣನು ಪರಬೊಮ್ಮನು
ಹೀಗೆ ನುಡಿದ ಜನರ ನಿಗಮಶಾಸ್ತ್ರದಿ ಗೆದ್ದು
ಜಗ ಸತ್ಯಾ ಸುಗುಣನು ಬ್ರಹ್ಮ ಎಂದು ಪೇಳುವ ೧

ಹರಿಸರ್ವೋತ್ತಮ ನಿತ್ಯ ತರುವಾಯ ರಮಾದೇವಿ
ತರುವಾಯ ವಿಧಿ ಪ್ರಾಣರು
ಸರಸ್ವತಿ ಭಾರತಿಗರುಡ ಅನಂತರುದ್ರ
ತರುವಾಯ ಆರುದೇವಿಗಳು ೨

ಸೌಪರ್ಣಿವಾರುಣಿದೇವಿ ಅಪರ್ಣಾದೇವಿಯರು ಸಮರು
ದ್ವಿಪದಿ ಮನ್ವಾದಿ ದೇವಿಗಳು
ಈಪರಿ ತಾರತಮ್ಯ ಜಪಧ್ಯಾನಾರ್ಚನೆಯಿಂದ
ಅಪವರ್ಗದನ ಸೇವೆಯ ಮಾಡಿರೋ ಎಂಬ ೩

ಒಂದೊಂದು ಯುಗದಲ್ಲಿ ಅನಂತಸೇವೆಯ ಮಾಡಿ
ಚಂದದಿಂದಲಿ ಲಾಲಿಸಿ
ಇಂದಿರಾರಮಣ ಗೋವಿಂದನೆ ದೈವವೆಂದು
ಸಂದೇಹವಿಲ್ಲದೆ ಸಾಧಿಸಿ ಮಾಯಾ ಜಯಿಸಿ ೪

ಹಿಮಸೇತುಪರಿಯಂತುದ್ಭವಿಸಿದ ಸುಜನರಿಗೆ
ಕ್ರಮದಿ ತತ್ತ್ವವ ಬೋಧಿಸಿ
ಕ್ರಮನೇಮಂಗಳ ಮಾಡಿ ಕಮಲನಾಭನ ಮೂರ್ತಿ
ಪ್ರೇಮದಿಂದಲಿ ಭಜಿಸಿ ಪೂಜಿಸಿರೆಂದು ೫

ಶ್ರೀಮದನಂತನೆ ಅನಂತಕಾಲಕೆ ಎಂದು
ಯಮಕಭಾರತ ತೋರಿಸಿ
ಸ್ವಾಮಿ ಸರ್ವಾಂತರ್ಯಾಮಿ ಸರ್ವಗುಣಪೂರ್ಣನೆಂದು
ಪ್ರೇಮಿ ಪುರಂದರವಿಠಲನ ದಾಸರಾದಾ ೬

ಸಾಮಾನ್ಯಸುರರು—ಮುಖ್ಯತತ್ತ್ವಾಭಿಮಾನಿಗಳಲ್ಲದ ಇತರ ದೇವತೆಗಳು.

ಬೊಮ್ಮನ ಆಣೆ—ಬ್ರಹ್ಮನಾಣೆ, ಎಂದರೆ ಕಂಡಿತ , ಶಪಥಮಾಡಿ ಹೇಳುವ ಬಗೆ.

ಜಗವು ಸತ್ಯವು ಅಲ್ಲ—ಜಗತ್ತು ಮಿಥ್ಯೆ.

ಅಗುಣನು ಪರಬೊಮ್ಮನು—ಪರಬ್ರಹ್ಮನು ನಿರ್ಗುಣ, ನಿರಾಕಾರ, ಅಗಮ್ಯ ಎಂಬ ವಾದ.

ನಿಗಮಶಾಸ್ತ್ರದಿ—ವೈದಿಕಪ್ರಮಾಣದಿಂದಲೇ.

ಹರಿ ಸರ್ವೋತ್ತಮ...—ಇಲ್ಲಿಂದ ಮುಂದೆ ಎರಡು ನುಡಿಗಳಲ್ಲಿ ದೇವತಾತಾರತಮ್ಯವನ್ನು ಹೇಳಿದ್ದಾರೆ.

ಒಂದೊಂದು ಯುಗದಲ್ಲಿ—ತ್ರೇತಾಯುಗದಲ್ಲಿ ಹನುಮನಾಗಿ, ದ್ವಾಪರಯುಗದಲ್ಲಿ ಭೀಮನಾಗಿ, ಕಲಿಯುಗದಲ್ಲಿ ಮಧ್ವಾಚಾರ್ಯರಾಗಿ ಹರಿಸೇವೆಯನ್ನು ನಡೆಸಿದರು.

ಮಾಯಾ ಜಯಿಸಿ—ಮಾಯಾವಾದಿಗಳನ್ನು ಗೆದ್ದು ; ಅಥವಾ ಐಕ್ಯಭ್ರಮ, ಸ್ವತಂತ್ರಾತ್ಮಭ್ರಮ, ಮೊದಲಾದುವು ಮಾಯೆಯೆನಿಸಿಕೊಳ್ಳುತ್ತವೆ, ಇವನ್ನು ಜಯಿಸಿ.

ಧಾತ್ರಿಮುದ್ರೆ—ಭೂಸ್ಪರ್ಶಮುದ್ರೆ ; ಬಲಗೈಯ ಬೆರಳುಗಳೆಲ್ಲವನ್ನೂ ಭೂಮಿಯ ಕಡೆ ಚಾಚುವುದು.

ಹಿಮಸೇತು ಪರಿಯಂತ—ಹಿಮಾಲಯದಿಂದ ರಾಮೇಶ್ವರದವರೆಗೆ.

ಯಮಕಭಾರತ—ಮಧ್ವಾಚಾರ್ಯರು ಬರೆದ ಮೂವತ್ತೇಳು ಗ್ರಂಥಗಳಲ್ಲಿ ಒಂದು. ಇದರಲ್ಲಿ 'ಲೌಕಿಕ ಚಿತ್ರಕವಿತೆ' ಎಂಬ ಚಮತ್ಕಾರ ಶೈಲಿಯ ರಚನೆ ಕಾಣುತ್ತದೆ. ವಾಸ್ತವವಾಗಿ ಭಾಗವತದ ಕತೆಯೇ ಹೇಳಲ್ಪಟ್ಟಿದ್ದರೂ, ಭಾರತದ ಸಂಕ್ಷೇಪವೂ ಅದರಲ್ಲಿ ಅಡಗಿದೆ. ಎಂಬತ್ತೊಂದು ಶ್ಲೋಕಗಳ ಈ ಗ್ರಂಥ 'ಯಮಕ' ಅಥವಾ ದ್ವಯಾರ್ಥವೆಂಬ ಜಾತಿಗೆ ಸೇರಿದ ರಚನೆ.

ಅಪವರ್ಗದನ—ಅಪವರ್ಗ (ಮೋಕ್ಷವನ್ನು) ದ (ದಯಪಾಲಿಸುವವ) ನ.

ನಟ್ಟ ರಘಂಪೆ

ಭಳಿರೆ ಭಳಿರೆ ಎನ್ನ ಸುಖವೆಂಬುದೇ ಸುಖವು
ಹಲಕಾಲಕಿದೆ ಇರಲೊ ಕಾವೇರಿರಂಗ ಪ

ತಂದೆ ನೀನೇ ಕೃಷ್ಣ ತಾಯಿ ಇಂದಿರಾದೇವಿ
ಮಂದಜಾಸನ ಎನಗೆ ಹಿರಿಯಣ್ಣನು
ಇಂದುಮುಖಿ ಶ್ರೀಸರಸ್ವತಿ ದೇವಿಯತ್ತಿಗೆಯು
ಎಂದೆಂದಿಗೂ ವಾಯುದೇವರೇ ಗುರುವು ೧

ಗುರುಪತ್ನಿ ಶ್ರೀಭಾರತಿಯು ನೋಡೆ ಮೇಲಾಗಿ
ಗರುಡಾಹಿ ರುದ್ರರಣ್ಣನ ಮಕ್ಕಳು
ಸುರರು ಸನಕಾದಿಗಳು ಪರಮ ಬಾಂಧವರೆನಗೆ
ಸ್ಥಿರವಾದ ವೈಕುಂಠವೆನಗೆ ಮಂದಿರವು ೨

ನಿನ್ನ ಪಾದಾಂಬುರುಹ ಭಜಿಸುವುದೆ ಸೌಭಾಗ್ಯ
ನಿನ್ನ ನಿರ್ಮಾಲ್ಯಗಳೆ ಭೋಗದ್ರವ್ಯ
ನಿನ್ನ ಕಥೆ ಕೇಳುವುದೆ ಮಂಗಳ ಸುವಾದ್ಯಗಳು
ನಿನ್ನಂಥ ಅರಸೆನಗೆ ಪುರಂದರವಿಠಲ ೩

[ಇದು ಪ್ರಸಂಗಾಂತರದಿಂದ ತಾರತಮ್ಯಸ್ತುತಿ. ತತ್ತ್ವೇಶರೆಲ್ಲ ತನ್ನ ಬಂಧು ಬಳಗ ಎಂದು ಸಾಧಕನು ಅರಿತುಕೊಂಡೊಡನೆ ಭವಬಂಧನದ ಕ್ಲೇಶವು ಕಡಿದು ಬೀಳುತ್ತದೆ; ಸುಖಾನುಭವ ಅದರ ಫಲ. ಸರ್ವೋತ್ತಮನಾದ, ಜಗತ್ತಿನ ಸೃಷ್ಟಿ ಸ್ಥಿತಿಗಳಿಗೆ ಮುಖ್ಯ ಕಾರಣನಾದ ಹರಿಯೇ ಜೀವನ ಅಂಶಿ, ಬಿಂಬ. ಮೂಲಪ್ರಕೃತಿಗೆ ನಿಯಾಮಕಳಾದ ಬ್ರಹ್ಮಾಂಡ ಸೃಷ್ಟಿಗೆ ಪರಾಧೀನ ಕಾರಣಳಾದ ರಮಾದೇವಿ ತಾಯಿ. ಬ್ರಹ್ಮನು ಜೀವರಾಶಿಯಲ್ಲಿ ಆದ್ಯನಾದುದರಿಂದ ಹಿರಿಯಣ್ಣ; ಅವನ ಹೆಂಡತಿ ವಾಗಭಿಮಾನಿದೇವತೆಯಾದ ಸರಸ್ವತಿಯು ಅತ್ತಿಗೆಯಾದಂತಾಯಿತು. ಬ್ರಹ್ಮನ ಸಮಕಕ್ಷೆಯಲ್ಲಿರುವ ವಾಯುವು ಜೀವೋತ್ತಮನಾಗಿ ಜ್ಞಾನ ಭಕ್ತಿಗಳನ್ನು ನೀಡುವವನಾಗಿ

ಗುರು. ವಾಯುಪತ್ನಿಯಾದ ಭಾರತಿಯು ಇನ್ನೊಬ್ಬಳು ಅತ್ತಿಗೆ. ಗರುಡ, ಶೇಷ, ರುದ್ರರು ಬ್ರಹ್ಮನ ಮಕ್ಕಳು ಅಲ್ಲಿಂದ ಕೆಳಗಿನ ಕಕ್ಷೆಯವರೆಲ್ಲ ನೆಂಟರು ವಿಷ್ಣುವಿನ ನೆಲೆಯಾದ ವೈಕುಂಠವೇ ಮುಕ್ತಜೀವರ ಸ್ಥಿರವಾದ ಮಂದಿರ ]

ಭಳಿರೆ ಭಳಿರೆ—'ಭಲಾಭಲಾ'.

ಮಂದಜಾಸನ—ಬ್ರಹ್ಮ.

ನಿರ್ಮಾಲ್ಯ—ಪೂಜೆಯನಂತರ ತೆಗೆದುಹಾಕಿದ ಹೂವು ಇತ್ಯಾದಿ.



# ಗುರುಸ್ತುತಿ

ದಾಸಕೂಟದಲ್ಲಿ ಗುರುವಿಗೆ ವಿಶೇಷವಾದ ಸ್ಥಾನವುಂಟು. 'ಗುರುಭಕುತಿ ಪ್ರಧಾನ ಸಾಧನ'ವೆಂದೂ, 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದೂ ಅವರ ತಿಳುವಳಿಕೆ. ಮಧ್ವಾಚಾರ್ಯರೂ ತಮ್ಮ ತಂತ್ರಸಾರದಲ್ಲಿ ಮೊದಲು ಗುರುಗಳನ್ನೂ ಅನಂತರ ತಾರತಮ್ಯ ಕ್ರಮದಲ್ಲಿ ದೇವತೆಗಳನ್ನೂ, ಅನಂತರ ಸರ್ವೋತ್ತಮನಾದ ಹರಿಯನ್ನೂ ನೆನೆಸಿಕೊಳ್ಳಬೇಕೆಂದು ಸೂಚಿಸಿದ್ದಾರೆ:

ಸ್ಮೃತ್ವಾ ಗುರುಂ ಪೂರ್ವ ಗುರುವಾದಿ ಮೂಲಗುರೂಂಸ್ತಥಾ ।
ದೇವತಾಸ್ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ ॥

ಭಗವತ್ಸ್ವರೂಪವಾಗಲಿ ಸಾಧನೆಯಾಗಲಿ ಯಾವ ಲೌಕಿಕ ಪ್ರಮಾಣದಿಂದಲೂ ಸಿದ್ಧವಾಗುವುದಲ್ಲ , ಅದನ್ನು ಬಲ್ಲವರಿಂದ ತಿಳಿದುಕೊಳ್ಳುವುದೊಂದೇ ದಾರಿ. ಹಾಗೆ ಅದನ್ನು ತಿಳಿಸಿಕೊಡುವವನು ಗುರು. ಲೌಕಿಕ ವಿದ್ಯೆಗಳನ್ನು ಕಲಿಸುವವನೂ ಗುರುವೇ, ಆದರೆ ಅಮುಖ್ಯಗುರು. ಮುಕ್ತಿಗೆ ನೆರವಾಗುವ ಬ್ರಹ್ಮವಿದ್ಯೆಯನ್ನು ಬೋಧಿಸುವವನೇ ಮುಖ್ಯಗುರು. ಅವನಿಂದ ತತ್ತ್ವೋಪದೇಶ ಮಾತ್ರವಲ್ಲದೆ ಮಂತ್ರೋಪದೇಶ ಮುದ್ರಾಂಕನಗಳೂ ದೊರೆತು ಶಿಷ್ಯನ ಸ್ವರೂಪೋದ್ಧಾರವಾಗುತ್ತದೆ. 'ಗುರುಸ್ಮರಣೆಯಿಂದ ಸಕಲ ವಿಪತ್ತು ಪರಿಹಾರ', 'ಸಕಲ ಸಂಪದ', 'ಹರಿ ಒಲಿದು ಪೊರೆವ' ಎಂದು ದಾಸರ ಶ್ರದ್ಧೆ.

ಸಂಪ್ರದಾಯದ ಪ್ರಕಾರ ತತ್ತ್ವೇಶರೆಲ್ಲ (ತಾರತಮ್ಯ ಕ್ರಮದಲ್ಲಿ ಹೇಳಿರುವವರು, ತತ್ತ್ವಾಭಿಮಾನಿ ದೇವತೆಗಳು) ಗುರುಗಳೇ ; ಇವರೆಲ್ಲರ ಮೂಲಕವೇ ಹರಿಯ ಒಲುಮೆ ದೊರಕುವುದು. ಅವತಾರದಲ್ಲಿ ದೇವತೆಗಳು, ಮಂತ್ರದ್ರಷ್ಟಾರರಾದ ಋಷಿಗಳು ಇವರೆಲ್ಲ ಪ್ರಮೇಯಜ್ಞಾನವನ್ನು ತಿಳಿಸಿಕೊಡುತ್ತಾರಾಗಿ ಗುರುಗಳೇ. ವಿಷ್ಣುವಿನ ಉಪಾಸಕರೆಲ್ಲರೂ ಗುರುಗಳೇ. ತಮಗಿಂತ ಉತ್ತಮರಾದವರೆಲ್ಲ ಗುರುಗಳೇ ಎಂದು ಒಂದು ಸೂಚನೆಯಿದೆ ('ಸ್ವೋತ್ತಮಾ ಗುರವಃ'). ಆದರೆ ಜೀವಿಯ ಸಾಧನೆಗೆ ಅವನ ದೇಶ, ಕಾಲ, ಯೋಗ್ಯತೆಗಳನ್ನನುಸರಿಸಿ ಜ್ಞಾನವನ್ನು ಬೋಧಿಸುವ ಅಧಿಕಾರಿವರ್ಗವೆಂದರೆ ಮಧ್ವಾಚಾರ್ಯರು ಮತ್ತು ಅವರ ಪರಂಪರೆಯಲ್ಲಿ ಬಂದವರು ಎಂದು ದಾಸರ ಶ್ರದ್ಧೆ. ವಿಜಯದಾಸರ ಸುಳಾದಿಯೊಂದರಲ್ಲಿ ವೇದವ್ಯಾಸ–ಮಧ್ವ – ಜಯತೀರ್ಥ – ವ್ಯಾಸರಾಯಸ್ವಾಮಿಗಳು–ವಿಜಯೀಂದ್ರವಾದಿರಾಜರು ಎಂದು ಹೇಳಿ ಅನಂತರ 'ಈ ಸುಜನ ಬಲ್ಲದು ಕಾಣೋ ಎಣಿಸು ಪುರಂದರದಾಸರ ಇವರೊಳು' ಎಂದು ಸೂಚಿಸಿದ್ದಾರೆ. ಹೀಗಾಗಿ ಪುರಂದರದಾಸರಿಗೆ ವ್ಯಾಸತೀರ್ಥರು ಗುರುಗಳು, ಪರಂಪರೆಯಲ್ಲಿ ಇತರರು ಪೂರ್ವಗುರುಗಳು, ಮಧ್ವಾಚಾರ್ಯರು ಆದಿಗುರು. ಮುಂದೆ ಕಾಣಿಸಿರುವ ಪದಗಳಲ್ಲೇನೋ ಪುರಂದರದಾಸರು ಗುರುವೆಂದರೇ ಮಧ್ವಾಚಾರ್ಯರೇ ಎಂದು ಬರೆದಿದ್ದಾರೆ. ಅವರು ಮಾಡಿರುವ ಗುರುಸ್ಮರಣೆ ಬಹುಮಟ್ಟಿಗೆ ಮಧ್ವಾಚಾರ್ಯರನ್ನು ಕುರಿತದ್ದೇ.

ಮಧ್ವಾಚಾರ್ಯರನ್ನು ಒಂದೆಡೆ ಅವರು ಮೂಲಗುರುಗಳೆಂದು ಒಕ್ಕಣಿಸಿದ್ದಾರೆ. ಆದರೆ ಸಂಪ್ರದಾಯದ ಕಲ್ಪನೆಯಲ್ಲಿ ಪರಮಾತ್ಮನೇ ಬ್ರಹ್ಮನಿಗ ಗುರು, ರುದ್ರನಿಗೆ ಪರಮಗುರು, ಇತರ ದೇವತೆಗಳಿಗೆ ಆದಿ ಗುರು, ಮನುಷ್ಯೋತ್ತಮರಿಗೆ ಮೂಲಗುರು. ತನ್ನಲ್ಲಿ ಅಂತರ್ಯಾಮಿ ಯಾಗಿ ಸ್ವರೂಪೋದ್ಧಾರಕನಾಗಿರುವ ಪರಮಾತ್ಮನೇ ಸ್ವೋತ್ತಮ ಮೂಲ ಗುರು. ತನ್ನಲ್ಲಿ ವಾಯುದೇವರು (ಎಂದರೆ ಮಧ್ವಾಚಾರ್ಯರು) ಪ್ರೇರಕ ನಾಗಿ ನಿಂತು, ಅವನಲ್ಲಿ ಅಂತರ್ಯಾಮಿಯಾಗಿ ನಿಯಾಮಕನಾಗಿರುವ ಪರಮಾತ್ಮನಿರುವುದರಿಂದ, ಮಾಧ್ಯಸ್ಥ್ಯ ಕಲ್ಪನೆಯಲ್ಲಿ ಮಧ್ವಾಚಾರ್ಯ ರನ್ನು ಮೂಲಗುರುಗಳೆಂದಿದ್ದಾರೆ. 'ಗುರುಕಾರುಣ್ಯದಿಂದ ಹರಿಪ್ರಸಾದ' ಎಂದು ಭಾವಿಸಿದಾಗ ಜೀವೋತ್ತಮನಾದ ವಾಯುದೇವರ ಪಾತ್ರ ಸ್ಪಷ್ಟ ವಾಗುತ್ತದೆ. ಗುರುವೇ ಮೋಕ್ಷಪ್ರದ, ಆದರೆ ಹರಿಯ ಅನುಜ್ಞೆಯಿಂದ. ಹರಿಯ ಸರ್ವೋತ್ತಮತ್ವವನ್ನೂ, ದೇವತಾತಾರತಮ್ಯದ ಸ್ವಾರಸ್ಯವನ್ನೂ, ಭಕ್ತಿ ಮೊದಲಾದ ಸಾಧನಾ ವಿವರಗಳನ್ನೂ ಎಲ್ಲರಿಗೆ ತಿಳಿಯಹೇಳಿರುವ ಭಾಷ್ಯಕಾರರು ಅವರ ಅನುಯಾಯಿಗಳೆಲ್ಲರೂ ಗುರುಗಳೆಂದಾಗಿರುವುದು ಸಹಜವೇ. ಅವರ ಉಪದೇಶವೇ ಸಚ್ಛಾಸ್ತ್ರವೆಂದು ಅವರ ಎಣಿಕೆ.

ಮುಂದಿನ ವಿಭಾಗದಲ್ಲಿ ಮಧ್ವಾಚಾರ್ಯರನ್ನು ಕುರಿತ ಪದಗಳಿವೆ ; ಈ ಪದಗಳಲ್ಲಿ ಅವರ ಅವತಾರತ್ರಯದ ಕಲ್ಪನೆ (ತ್ರೇತಾಯುಗದಲ್ಲಿ ಹನುಮಂತ, ದ್ವಾಪರಯುಗದಲ್ಲಿ ಭೀಮ, ಕಲಿಯುಗದಲ್ಲಿ ಮಧ್ವ) ಅಡಿಗಡಿಗೆ ಬರುತ್ತದೆ. ಕಡೆಯಲ್ಲಿ ತಮ್ಮ ದೀಕ್ಷಾಗುರುಗಳನ್ನು ಕುರಿತ ಒಂದು ಪದ ವಿದೆ ; ಇವರನ್ನು ಕುರಿತ ಇತರ ಪದಗಳು ಮೊದಲ ಸಂಪುಟದ 'ಜೀವನ ದರ್ಶನ' ವಿಭಾಗದಲ್ಲಿ ಸೇರಿವೆ. ಅವರ ಸಮಕಾಲಿಕರೂ, ದಾಸರಿಗೆ ಗುರು ಕಕ್ಷೆಯಲ್ಲಿದ್ದವರೂ ಆದ ರಘುನಾಥತೀರ್ಥರನ್ನು ಕುರಿತ ಒಂದು ಪದವಿದೆ. ಉಳಿದಂತೆ ಗುರುವಿನ ಹಿರಿಮೆಯನ್ನೂ ಅಗತ್ಯವನ್ನೂ ಸೂಚಿಸುವ ಒಂದೆರಡು ಪದಗಳೂ ಸೇರಿವೆ. ದಾಸರ ಮುಖ್ಯ ಅಭಿಪ್ರಾಯವೆಂದರೆ ಗುರುವಿನ ಮೂಲಕವೇ ಜ್ಞಾನ, ಸಾಧನೆ ಮತ್ತು ಪರಮಾತ್ಮನ ಪ್ರಸಾದ.

# ೭

## ನಟ್ಟ

ಶ್ರೀಪತಿಯ ನಾಭಿಕಮಲದಿ ಅಜ ಜನಿಸಿದನು
ಅಜನ ಮಾನಸಪುತ್ರರೇ ಸನಕಾದಿಗಳು
ಸನಕಾದಿಗಳ ಶಿಷ್ಯರೇ ದುರ್ವಾಸರು
ದುರ್ವಾಸರ ಶಿಷ್ಯರೇ ಪರತೀರ್ಥರು
ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞರು
ಸತ್ಯಪ್ರಜ್ಞರ ಶಿಷ್ಯರೇ ಪ್ರಾಜ್ಞತೀರ್ಥರು
ಪ್ರಾಜ್ಞತೀರ್ಥರ ಶಿಷ್ಯರೇ ಅಚ್ಯುತಪ್ರೇಕ್ಷರು
ಅಚ್ಯುತಪ್ರೇಕ್ಷರ ಕರಸಂಜಾತರೇ ಮಹಾಭಾಷ್ಯಕಾರರು
ಮಹಾಭಾಷ್ಯಕಾರರೇ ಗುರು ಮುಖ್ಯಪ್ರಾಣರು
ಗುರು ಮುಖ್ಯಪ್ರಾಣಪತಿ ನಮ್ಮ ಪುರಂದರವಿಠಲ

[ಈ ಪದದಲ್ಲಿ ಮಧ್ವಾಚಾರ್ಯರ ಪೂರ್ವಪರಂಪರೆಯ ಗುರುಗಳನ್ನು ಸ್ಮರಿಸಿದ್ದಾರೆ.]

ಶ್ರೀಪತಿಯು.. —ಲಕ್ಷ್ಮೀನಾರಾಯಣನ, ಹಂಸನಾಮಕಪರಮಾತ್ಮನ ಹೊಕ್ಕುಳೆಂಬ ತಾವರೆಯಿಂದ ಹೊರಬಂದವನು ಚತುರ್ಮುಖಬ್ರಹ್ಮ; ಅವನಿಗೆ ಸಾಮಾನ್ಯವಾದ, ಕರ್ಮಪ್ರಾಪ್ತವಾದ ಹುಟ್ಟು (ಲಿಂಗದೇಹಸಂಬಂಧ) ಇಲ್ಲದಿರುವುದರಿಂದ ಅವನು 'ಅಜ' (ಜನ್ಮವಿಲ್ಲವವನು').

ಮಾನಸಪುತ್ರರೇ...—ಅವನ ಮಾನಸಪುತ್ರರು (ಎಂದರೆ ಸ್ತ್ರೀಸಂಭೋಗವಿಲ್ಲದೆ, ಕೇವಲ ಸಂಕಲ್ಪದಿಂದ ಮೈದಳೆದವರು) ಸನಕನೇ ಮೊದಲಾದ ಮುನಿಗಳು. ಸನಕ, ಸನಂದನ, ಸನಾತನ, ಸನತ್ಸುಜಾತ ಮತ್ತು ಸನತ್ಕುಮಾರ ಎಂಬ ಐವರು.

ದುರ್ವಾಸರು...—ಅತ್ರಿಮಹರ್ಷಿ ಮತ್ತು ಅನಸೂಯಾ ಇವರ ಮಗ; ದತ್ತಾತ್ರೇಯನ ಸೋದರ. ಕಾಲಾಗ್ನಿರುದ್ರನ ಅಂಶದಿಂದ ಹುಟ್ಟಿದವನಾದುದರಿಂದ ಕ್ರೋಧಮೂರ್ತಿ. ಈ ಋಷಿಯು ಸನಕಾದಿ ಮುನಿಗಳ ಬಳಿ ಉಪದೇಶವನ್ನು ಪಡೆದವನು.

ಪರತೀರ್ಥರು—ದುರ್ವಾಸರ ಶಿಷ್ಯರು ; ಇವರ ವಿಚಾರ ತಿಳಿದಿಲ್ಲ. ವಾಡಿಕೆಯಲ್ಲಿರುವ ಮಾಧ್ವಗುರುಪರಂಪರಾಸ್ತೋತ್ರದಲ್ಲಿ 'ದುರ್ವಾಸಸೋ ಜ್ಞಾನನಿಧೀನ್' ಎಂದು ಹೇಳಿ, ದುರ್ವಾಸರಾದ ಮೇಲೆ ಜ್ಞಾನನಿಧಿ, ಜ್ಞಾನನಿಧಿಯಾದ ಮೇಲೆ ಇಂದ್ರವಾಹನ ತೀರ್ಥರು. ಅವರನಂತರ ಕೈವಲ್ಯತೀರ್ಥರು, ಅನಂತರ ಜ್ಞಾನೇಶರು, ಇವರ ಶಿಷ್ಯರು ಪರತೀರ್ಥರು ಎಂಬ ಒಕ್ಕಣೆಯಿದೆ. ದಾಸರು ದುರ್ವಾಸರ ನಂತರವೇ ಪರತೀರ್ಥರನ್ನು ಹೇಳಿರುವುದು ಇದಕ್ಕೆ ವಿರೋಧವಾಗಿದೆ.

ಸತ್ಯಪ್ರಜ್ಞರು—ಇವರ ವಿಚಾರವೂ ತಿಳಿಯದು.

ಪ್ರಾಜ್ಞತೀರ್ಥರು—ಇವರ ವಿಚಾರವೂ ತಿಳಿಯದು.

ಅಚ್ಯುತಪ್ರೇಕ್ಷರು—ಶಿವಬೆಳ್ಳಿ (ರೌಪ್ಯಪೀಠ) ಗ್ರಾಮದಲ್ಲಿ ಮಧ್ವಾಚಾರ್ಯರಿಗೆ ವಿದ್ಯಾಗುರುಗಳು. ಇವರು ಭಾಗವತಸಂಪ್ರದಾಯದವರಾಗಿದ್ದರೆಂದೂ ವಿಮುಕ್ತಾತ್ಮಯತಿಗಳ 'ಇಷ್ಟಸಿದ್ಧಿ' ಗ್ರಂಥವನ್ನು ಮಧ್ವಾಚಾರ್ಯರಿಗೆ ಪಾಠ ಹೇಳಿದರೆಂದೂ ತಿಳಿದುಬರುತ್ತದೆ. ಇವರ ವೇದಾಂತದ ನಿಲುವನ್ನು ಮಧ್ವಾಚಾರ್ಯರು ಒಪ್ಪದೆ ಇರಲು, ಇವರ ಸೂಚನೆಯ ಮೇರೆಗೆ ಆಚಾರ್ಯರು ಭಗವದ್ಗೀತಾಭಾಷ್ಯವನ್ನು ಬರೆದರೆಂದೂ ಪ್ರತೀತಿ. ಮಧ್ವಾಚಾರ್ಯರು ಪ್ರತಿಪಾದಿಸಿದ ತತ್ತ್ವವಾದವನ್ನು ಮೊದಲು ಅಂಗೀಕರಿಸಿದವರು ಅವರ ಗುರುಗಳಾದ ಅಚ್ಯುತಪ್ರೇಕ್ಷರೇ.

ಅಚ್ಯುತಪ್ರೇಕ್ಷರಿಗೆ ಮೊದಲು 'ಗುರುಪರಂಪರಾ ಸ್ತೋತ್ರ'ದಲ್ಲಿ, ಪ್ರಾಜ್ಞತೀರ್ಥರಾದ ಮೇಲೆ 'ಅನ್ಯಾನ್ ತದ್ವಶಜಾನ್ ಅಪಿ' ಎಂದು ಹೇಳಿ ಅಚ್ಯುತಪ್ರೇಕ್ಷತೀರ್ಥರ ಹೆಸರನ್ನು ಉಲ್ಲೇಖಿಸಲಾಗಿದೆ.

ಕರಸಂಜಾತರು—ಶಿಷ್ಯರು, ಸಂನ್ಯಾಸಾಶ್ರಮವನ್ನೂ ಮಧ್ವಾಚಾರ್ಯರು ಅಚ್ಯುತಪ್ರೇಕ್ಷರಿಂದಲೇ ಗ್ರಹಿಸಿದರು.

ಮಹಾಭಾಷ್ಯಕಾರರು—ಬ್ರಹ್ಮಸೂತ್ರಗಳಿಗೆ ಬಾದರಾಯಣ ಸಮ್ಮತವಾದ ಭಾಷ್ಯವನ್ನು ಬರೆದ ಮಧ್ವಾಚಾರ್ಯರು, ಇವರ ಆಶ್ರಮನಾಮ ಆನಂದತೀರ್ಥರೆಂದು. ಪೂರ್ಣಪ್ರಜ್ಞ, ದಶಪ್ರಮತಿ, ಸುಖತೀರ್ಥ ಮೊದಲಾದ ಇತರ ಹೆಸರುಗಳೂ ಇವೆ.

ಗುರುಮುಖ್ಯಪ್ರಾಣರು—ಮೂರನೆಯ ಕಕ್ಷೆಯಲ್ಲಿ ಬ್ರಹ್ಮನಿಗೆ ಅವರರಾಗಿ ಇರುವ ದೇವತಾವಿಶೇಷ, ವಾಯುದೇವರೆಂದೂ ಹೆಸರು. ಸಂಕರ್ಷಣನಾಮಕಪರಮಾತ್ಮ ಮತ್ತು ಜಯಾ ಇವರ ಮಗ, ಮೂಲವಾಯುವಾಗಿ ಕೃತಯುಗದಲ್ಲಿ ತೋರಿಕೊಂಡವನು. ಇವನಿಗೆ ಮೂರು ಅವತಾರಗಳೆಂದು ಪ್ರತೀತಿ ; ತ್ರೇತಾ

ಯುಗದಲ್ಲಿ ಹನುಮಂತ, ದ್ವಾಪರಯುಗದಲ್ಲಿ ಭೀಮ, ಕಲಿಯುಗದಲ್ಲಿ ಮಧ್ವಾಚಾರ್ಯರು. ಮಧ್ವಾಚಾರ್ಯರು ಗುರುಗಳೆಂದೇ ಪ್ರಸಿದ್ಧರು, ಸರ್ವಜೀವೋತ್ತಮರಾದುದರಿಂದ ಮತ್ತು ಹರಿಸರ್ವೋತ್ತಮತ್ವವನ್ನು ಜನರಿಗೆ ತಿಳಿಸಿದುದರಿಂದ.

ಗುರುಮುಖ್ಯಪ್ರಾಣಪತಿ—ವಾಯುದೇವರಿಗೆ ಅಂತರ್ಯಾಮಿಯಾಗಿ, ಪ್ರೇರಕನಾಗಿ, ನಿಯಾಮಕನಾಗಿ ಇರುವ ಹರಿ.



ಭೈರವಿ　　　　ಅಟ್ಟ

ಹರಿಯ ಚರಣವೆಂಬ ಸುರಧೇನುವನು
ಗುರುಬೋಧೆಯೆಂಬ ಕಣ್ಣಿಯಲಿ ಕಟ್ಟಿರಯ್ಯ　　ಪ

ಭಕುತಿಯೆಂಬ ಕರುವನೆ ಬಿಟ್ಟು ನಿರುತ ವಿ
ರಕುತಿಯೆಂಬ ಚೆನ್ನದಳಿಯ ಹಾಕಿ
ಯುಕುತವಾದ ನಿತ್ಯಕಾಯ ಚರಿಗೆಯೊಳು
ಮುಕುತಿನಾಮಾಮೃತ ಕರೆದುಕೊಳ್ಳಿರಯ್ಯ　　೧

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ
ಹಮ್ಮೆಂಬ ಕುರುಳನೆ ತಾಳಿ ಹಾಕಿ
ತಾಮಸ ಜ್ಞಾನಾಗ್ನಿ ಪುಟಗೈದು ಇಂದ್ರಿಯ
ನೇಮದ ನೀರ ಬೆರಸಿ ಕಾಯಲಿಡಿರೊ　　೨

ಶಾಂತಗುಣವೆಂಬ ಹದನರಿತು ಆರಿಸಿ ಮತ್ತೆ
ಭ್ರಾಂತಮನ ಮಜ್ಜಿಗೆಯ ಹೆಪ್ಪನಿಕ್ಕಿ
ಕಾಂತ ವಿಷ್ಣುಮಾಯಾ ಮಂಥದಿ ಶೋಧಿಸಿ ಸಿ
ದ್ಧಾಂತವೆಂಬ ಕಡಗೋಲ ನೇಣನೆ ಪಿಡಿದು　　೩

ಪರಬೊಮ್ಮನೆನಿಪ ಬೆಣ್ಣೆಯ ಮುದ್ದೆಯನೆ ತೆಗೆದು
ಶರಣಮಣಿಯೆಂಬ ತುಪ್ಪವನೆ ಕಾಸಿ
ಮರಣವೆಂಬ ನೊರೆ ತೆಗೆದೊಗೆದು ಅಮೃತವ
ನಿರುತ ಹೃದಯವೆಂಬ ಕೊಡವನೆ ತುಂಬಿರೊ　　೪

ಅನವರತ ಹರಿಸ್ಮರಣೆಯೆಂಬ ಬೀಸೂರಿಗೆ
ಅನುವಾಗಿ ಕುಳಿತುಕೊಂಡು ಸುಖದಿ ತೇಗಿ
ಚಿನುಮಯ ಚಿದಾನಂದ ಪುರಂದರವಿಠಲನ
ಅನುದಿನ ನೆನೆನೆನೆದು ಸುಖಿಯಾಗಿರಯ್ಯ　　೫

[ಗುರುವಿನ ಉಪದೇಶವೆಂಬ ಹಗ್ಗದಿಂದ, ಹರಿಚರಣವೆಂಬ ಹಸುವನ್ನು ಕಟ್ಟಿ, ಮುಕ್ತಿಸಾಮಾಮೃತವೆಂಬ ಹಾಲನ್ನು ಕರೆದು ಅದರಿಂದ ರುಚಿಯಾದ ಆನಂದವೆಂಬ ಭಕ್ಷ್ಯವನ್ನು ಮಾಡುವುದರ ರೂಪಕ ಈ ಪದದಲ್ಲಿದೆ.]

ಸುರಧೇನು—ಬಯಸಿದ್ದನ್ನು ಕೊಡುವ ಕಾಮಧೇನು.

ಕಣ್ಣಿ—ಹಸುವಿನ ಕೊರಳಿಗೆ ಕಟ್ಟುವ ಹಗ್ಗ.

ಚೆನ್ನತಳಿಯ ಹಾಕಿ—ಚೆನ್ನಾಗಿ ಧಳಿ ಹಾಕುವುದು, ಕೆಚ್ಚಲಿಗೆ ನೀರು ಚಿಮುಕಿಸುವುದು.

ಚರಿಗೆ—ಚೆಂಬು.

ಹಮ್ಮು—ಹೆಮ್ಮೆ, ಗರ್ವ (ಪರ್ಬು).

ಕುರುಳು—ಬೆರಣಿ

ತಾಳಿಹಾಕಿ—ರಾಶಿಮಾಡಿ (ಮರಾಠಿ 'ಧಾಳ್').

ಜಾನಾಗ್ನಿ—ಧ್ಯಾನವೆಂಬ ಬೆಂಕಿ.

ಇಂದ್ರಿಯನೇಮ—ಇಂದ್ರಿಯ ನಿಗ್ರಹ

ಮಂಥ—ಕಡೆಗೋಲು, ಮಂತು.

ಬೀಸೂರಿಗೆ—ಹೂರಿಗೆ, ಬೀಸುಂ+ಪೂರಿಗೆ, ಒಂದು ಬಗೆಯ ಭಕ್ಷ್ಯ.



ನಾದನಾಮಕ್ರಿಯ — ಆದಿ

ಗುರುವಿನ ಗುಲಾಮನಾಗುವ ತನಕ
ದೊರೆಯದಣ್ಣ ಮುಕುತಿ ಪ

ಪರಿಪರಿಶಾಸ್ತ್ರವನೇಕವನೋದಿ
ವ್ಯರ್ಥವಾಯಿತು ಭಕುತಿ ಅ

ಆರು ಶಾಸ್ತ್ರವನೋದಿದರಿಲ್ಲ ಮೂ
ರಾರು ಪುರಾಣವ ಮುಗಿಸಿದರಿಲ್ಲ
ಸಾರಿ ಸಜ್ಜನರ ಸಂಗವ ಮಾಡದೆ
ಧೀರನಾಗಿ ತಾ ಮೆರೆದರೆ ಇಲ್ಲ ೧

ಕೊರಳೊಳು ಮಾಲೆಯ ಧರಿಸಿದರಿಲ್ಲ
ಬೆರಳೊಳು ಜಪಮಣಿ ಎಣಿಸಿದರಿಲ್ಲ
ಮರುಳನಂತೆ ಶರೀರಕೆ ಬೂದಿಯ
ಒರಸಿಕೊಂಡು ತಾ ತಿರುಗಿದರಿಲ್ಲ ೨

ನಾರಿಯ ಭೋಗ ಅಳಿಸಿದರಿಲ್ಲ
ಶರೀರಕೆ ಸುಖವ ಬಿಡಿಸಿದರಿಲ್ಲ
ನಾರದ ವರದ ಶ್ರೀ ಪುರಂದರವಿಠಲನ
ಮರೆಯದೆ ಮನದೊಳು ಬೆರೆಯುವ ತನಕ ೩

ಆರು ಶಾಸ್ತ್ರವ—ಷಡ್ದರ್ಶನಗಳು : ಸಾಂಖ್ಯ–ಯೋಗ, ನ್ಯಾಯ–ವೈಶೇಷಿಕ ಮತ್ತು ಮೀಮಾಂಸಾ–ವೇದಾಂತ.

ಮೂರಾರು ಪುರಾಣವ—ಹದಿನೆಂಟು ಪುರಾಣಗಳು : ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಲೈಂಗ, ಗಾರುಡ, ನಾರದೀಯ, ಭಾಗವತ, ಆಗ್ನೇಯ, ಸ್ಕಾಂದ, ಭವಿಷ್ಯ, ಬ್ರಹ್ಮವೈವರ್ತ, ಮಾರ್ಕಂಡೇಯ, ವಾಮನ, ವರಾಹ, ಮಾತ್ಸ್ಯ, ಕೌರ್ಮ, ಬ್ರಹ್ಮಾಂಡ (ಭಾಗವತ, ೧೨, ೭, ೨೩).

ಧೀರನಾಗಿ ಪೇಳಿದರಿಲ್ಲ—ಸಭೆಯ ಮುಂದೆ ಪ್ರವಚನಮಾಡಿದರೆ.

ಮರುಳನಾಗಿ...—ಅವಧೂತನಂತೆ.

ನಾರಿಯ ಭೋಗ ಅಳಿಸಿದರೆ—ನೈಷ್ಠಿಕ ಬ್ರಹ್ಮಚರ್ಯೆಯನ್ನೋ ಸಂನ್ಯಾಸಾಶ್ರಮವನ್ನೋ ಕೈಗೊಂಡರೆ.

ಶರೀರಕೆ ಸುಖ ಬಿಡಿಸಿದರೆ—ಕೃಛ್ರ, ಚಾಂದ್ರಾಯಣ ಮೊದಲಾದ ವ್ರತ, ತಪಸ್ಸು, ಉಪವಾಸಗಳನ್ನು ಮಾಡಿ ಶರೀರವನ್ನು ಕಷ್ಟಕ್ಕೀಡುಮಾಡಿದರೆ.

ನಾರದವರದ—ದೇವರ್ಷಿಯಾದ ನಾರದನಿಗೆ ನಾರಾಯಣನು ಶ್ವೇತದ್ವೀಪದಲ್ಲಿ ಭಾಗವತಧರ್ಮವನ್ನು ಉಪದೇಶಿಸಿ ಉದ್ಧರಿಸಿದ ಹಿನ್ನೆಲೆ.



## ೧೦

ಮುಖಾರಿ | ಝಂಪೆ

ಈ ಮಹಿಯೊಳಗೆ ಗುರುಗಳೆನಿಪರೆಲ್ಲ ನಮ್ಮ
ಶ್ರೀಮದಾಚಾರ್ಯ ಗುರುಶಿಖಾಮಣಿಗೆ ಸರಿಯೆ ಪ

ಈಯಖಿಲ ಜಗದೊಡೆಯ ಎಂಟುಗುಣ ಶ್ರುತಿ ಪೌರು
ಷೇಯ ಎಂಬೀ ಕುಶಾಸ್ತ್ರಿಗಳೆಲ್ಲರು
ಶ್ರೀಯರಸ ಪೂರ್ಣಗುಣ ಶ್ರುತಿನಿತ್ಯವೆಂಬ ಸ
ನ್ನ್ಯಾಯರತ್ನಾಕರಾನಂದತೀರ್ಥರಿಗೆಣೆಯೆ ೧

ದೈವವಿಲ್ಲವು ವಿಶ್ವ ಜೀವಕರ್ತೃಕವೆಂಬ
ದೈವಹೀನರು ದುರ್ಮತದ ಗುರುಗಳ
ದೈವವುಂಟು ಜಗಕೆ ಕರ್ತೃವೆಂಬ ಪ್ರಮಾ
ಣಾವಳಿಯೊಳರಸ ಪೂರ್ಣಪ್ರಜ್ಞರಿಗೆಣೆಯೆ ೨

ವೇದವೇದಾರ್ಥ ಹುಸಿ ವಿಷ್ಣು ತಾನೆಂಬ ದು
ರ್ವಾದಿಗಳು ತಮ್ಮ ದುರ್ವಳರ ಕೂಡಿ
ವೇದ ಸಮಸ್ತ ನಿತ್ಯ ವಿಷ್ಣುಪರವೆಂದೊರೆವ
ವೈದಿಕಾಚಾರ್ಯ ಪೂರ್ಣಪ್ರಜ್ಞರಿಗೆಣೆಯೆ ೩

ಜ್ಞಾನಕೊಂದೊಂದೆರಡು ಶಾಸ್ತ್ರವ ರಚಿಸಿ ಭ್ರಮದ
ಜ್ಞಾನದಿಂದಲಿ ಹೀನಮಾನುಜರೆಲ್ಲ
ನಾನಾ ನಿಗಮ ಶಾಸ್ತ್ರ ನವ್ಯಜಲರುಹ ಚಂಡ
ಭಾನುವೆನಿಸಿದ ದಶಪ್ರಮತಿ ಗುರುಗಳಿಗೆಣೆಯೆ ೪

ಗುರುಗಳೆನಿಸಿಕೊಂಬ ಭರದಲನ್ಯೋನ್ಯ ಮ
ತ್ಸರದ ಶಾಸ್ತ್ರ ವಿರಚಿಪ ಸಡಗರೆಲ್ಲ
ಸಿರಿ ಪುರಂದರವಿಠಲ ಪರಿತುಷ್ಟಿಗಾಗಿ ಸುಜ
ನರ ಪೊರೆವ ಗುರು ನಂದತೀರ್ಥರಿಗೆಣೆಯೆ ೫

ಜಗದೊಡೆಯ ಎಂಟು ಗುಣ—ಆತ್ಮನ ಎಂಟು ಗುಣಗಳನ್ನೇ ಪರಮಾತ್ಮನೂ ಹೊಂದಿದ್ದಾನೆಂಬ ವಾದ. ಆತ್ಮನ ಎಂಟು ಗುಣಗಳು ಇವು—ಅಪಹತಪಾಪ್ಮಾ, ವಿರಜ, ವಿಮೃತ್ಯು, ವಿಶೋಕ, ವಿಜಘುತ್ಸ, ಅಪಿಪಾಸ, ಸತ್ಯಕಾಮ, ಸತ್ಯ ಸಂಕಲ್ಪ. ಔಪನಿಷದ ದರ್ಶನದಲ್ಲಿ ಕೆಲವರು ಈ ದೃಷ್ಟಿಯನ್ನು ಹೊಂದಿದ್ದಾರೆ.

ಶ್ರುತಿ ಪೌರುಷೇಯ—ವೇದಗಳು ಮನುಷ್ಯರಿಂದ ಬರೆಯಲ್ಪಟ್ಟ ಗ್ರಂಥಗಳು, ಆದುದರಿಂದ ಅವುಗಳಲ್ಲಿ ಮನುಷ್ಯಬುದ್ಧಿಗೆ ಸಹಜವಾದ ಲೋಪದೋಷಗಳು ತುಂಬಿವೆ, ಅವನ್ನು ಪ್ರಮಾಣವೆಂದು ಪರಿಗಣಿಸಲಾಗದು ಎಂಬ ಲೋಕಾಯತರ ವಾದ.

ಕುಶಾಸ್ತ್ರಗಳು—ತಮ್ಮ ಸ್ವಂತ ಆಲೋಚನೆಗಳನ್ನೇ ಶಾಸ್ತ್ರವೆಂದು ಬೋಧಿಸುವವರು.

ಸನ್ನ್ಯಾಯರತ್ನಾಕರ—ಸತ್ + ನ್ಯಾಯ, ಬಾದರಾಯಣರ ಬ್ರಹ್ಮಸೂತ್ರಗಳಲ್ಲಿ ಶಾಸ್ತ್ರಸಮ್ಮತವಾದ ಯುಕ್ತಿಯಿಂದ ಪ್ರತಿಪಾದಿತವಾದ ಪ್ರಮೇಯಗಳನ್ನು 'ನ್ಯಾಯ'ವೆಂದು ಕರೆಯುತ್ತಾರೆ ; ಬ್ರಹ್ಮಸೂತ್ರಗಳಿಗೆ ನ್ಯಾಯಪ್ರಸ್ಥಾನವೆಂದೇ ಹೆಸರು ಅನ್ಯಥಾಜ್ಞಾನ, ಸಂಶಯ, ಭ್ರಮೆ ಮೊದಲಾದ ದೋಷಗಳಿಲ್ಲದೆ ಈ ನ್ಯಾಯವನ್ನು ನಿರೂಪಿಸಿದರೆ ಅದು ಸತ್ ನ್ಯಾಯ, ಎಂದರೆ ಶುದ್ಧವಾದ ವೇದಾಂತತಾತ್ಪರ್ಯ. ಇದಕ್ಕೆ ಸಮುದ್ರದಂತೆ (ರತ್ನಾಕರ) ಅಪಾರವಾದ ಆಸರೆಯಂತೆ ಇರುವವರು ಭಾಷ್ಯಕಾರರಾದ ಮಧ್ವಾಚಾರ್ಯರು (ಆನಂದತೀರ್ಥರು) ಇವರು ಬರೆದ 'ನ್ಯಾಯವಿವರಣ'ವೆಂಬ ಗ್ರಂಥವೂ ಪ್ರಸಿದ್ಧವಾಗಿದೆ

ದೈವವಿಲ್ಲವು—ನಾಸ್ತಿಕವಾದ ; ಲೋಕಾಯುತ, ಚಾರ್ವಾಕ, ಬಾರ್ಹಸ್ಪತ್ಯ ದೃಷ್ಟಿಗಳು.

ವಿಶ್ವ ಜೀವಕರ್ತೃಕ—ದೃಷ್ಟಿಸೃಷ್ಟಿವಾದ.

ಪ್ರಮಾಣಾವಳಿ—ಶ್ರುತಿಸಿದ್ಧವಾದ ಪ್ರಮಾಣಗಳ ಸಮೂಹ ; 'ಅಸ್ತೀತಿ ಚೇದ್ವೇದ', 'ವಿಶ್ವಸ್ಯ ಯೋನಿಃ' ಮೊದಲಾದುವು.

ಪೂರ್ಣಪ್ರಜ್ಞರು—ಮಧ್ವಾಚಾರ್ಯರ ಹೆಸರುಗಳಲ್ಲಿ ಒಂದು ; ಮುಂದೆ ಬರುವ ದಶಪ್ರಮತಿ, ನಂದತೀರ್ಥ ಎಂಬುವೂ ಅವರ ಹೆಸರುಗಳೇ.

ವೇದವೇದಾರ್ಥ—ನಾಲ್ಕು ವೇದಗಳು, ಅವುಗಳ ತಾತ್ಪರ್ಯವನ್ನು ವಿವರಿಸಲೆಂದು (ಉಪಬೃಂಹಣ) ಸಿದ್ಧವಾದ ಶಾಸ್ತ್ರಗ್ರಂಥಗಳು, ಪುರಾಣಗಳು.

ದುರ್ವಳರು—ದುರ್ಬಲರ, ಪರಮಪಾಪಿಗಳು.

ವೇದಸಮಸ್ತ ನಿತ್ಯ—ಇಡೀ ವೇದವು ದಿಟವಾದುದು, ಅಪೌರುಷೇಯವಾದುದು, ಕೆಲವು ಭಾಗಗಳು ಮಾತ್ರ ಉಪಾದೇಯ ಎನ್ನಲಾಗದು. ವೇದ ವಾಙ್ಮಯದಲ್ಲಿ ಮಂತ್ರಬ್ರಾಹ್ಮಣಗಳಷ್ಟೇ ಅಪೌರುಷೇಯವಾದುವು, ಉಪನಿಷತ್ತುಗಳು

ಬರಿಯ ಅರ್ಥವಾದ ಎಂದು ಹೇಳುವ ಮೀಮಾಂಸಕರ ಮತ್ತು ಉಪನಿಷತ್ತುಗಳಷ್ಟೇ (ವೇದಾಂತ) ಪ್ರಮಾಣ, ಉಳಿದ ಭಾಗಗಳು (ಕರ್ಮಕಾಂಡ) ಆಯಾ ಅಧಿಕಾರಿಗಳಿಗೆ ಅಂತಃಕರಣಶುದ್ಧಿಗಾಗಿ ಹೇಳಿದವು ಅಷ್ಟೆ ಎಂದು ಹೇಳುವ ಔಪನಿಷದ ವಾದಿಗಳ ನಿಲುವನ್ನು ಇಲ್ಲಿ ಜರಿದಿದ್ದಾರೆ

ವಿಷ್ಣುಪರೆ—ಪರಮಶ್ರುತಿಯ ಪ್ರಕಾರ ವಿಷ್ಣುವು ಸರ್ವೋತ್ತಮನಾದವನು.

ಜ್ಞಾನಕೊಂದೊಂದು . —ವೇದದ ಮಹಾತಾತ್ಪರ್ಯವು ಜ್ಞಾನದಲ್ಲಿದೆ ಎಂಬ ದೃಷ್ಟಿಯನ್ನು ಹಿಡಿದು ಅದರ ಪ್ರತಿಪಾದನೆಗಾಗಿ ಸಿದ್ಧವಾದ ಶಾಸ್ತ್ರಗಳು (ನ್ಯಾಯ, ವೈಶೇಷಿಕ, ಸಾಂಖ್ಯ ಮೊದಲಾದುವು), ಇಲ್ಲಿ ವಿಹಿತಕರ್ಮಕ್ಕಾಗಲಿ ಭಕ್ತಿಗಾಗಲಿ ಉಪಾಸನೆಗಾಗಲಿ ಅಷ್ಟು ಬೆಲೆಯಿಲ್ಲ.

ನವ್ಯಜಲರುಹಚಂಡಭಾನು—ಆಗತಾನೆ ತೋರಿಕೊಂಡ ತಾವರೆಹೂವಿಗೆ ಸೂರ್ಯನಿದ್ದಂತೆ.

ಸಡಗರೆಲ್ಲ—ಸಡಗರವೆಲ್ಲ. ಒಬ್ಬೊಬ್ಬ ಗುರುವೂ ಇನ್ನೊಬ್ಬನ ಮೇಲಣ ಅಸೂಯೆಯಿಂದ ಶಾಸ್ತ್ರಗಳನ್ನು ರಚಿಸಿದಾಗ, ಶಾಸ್ತ್ರಗಳು ಕೇವಲ ಪರಮತಖಂಡನೆಗೆಂದು ಆದಾಗ ಅದು ಬರಿಯ ಸಡಗರ ; ಉದ್ವೇಗಪೂರ್ಣವಾದುದು.

ಸಿರಿಪುರಂದರವಿಠಲಪರಿತುಷ್ಟಿಗಾಗಿ—ಮಧ್ವಾಚಾರ್ಯರು ಶಾಸ್ತ್ರಗ್ರಂಥಗಳನ್ನು ರಚಿಸಿ ಗುರುಗಳೆಂದಾದದ್ದು ಹರಿಯನ್ನು ಪ್ರೀತಿಪಡಿಸಲೆಂದು; ಉಳಿದಂತೆ ಯಾವ ಲೌಕಿಕಪ್ರಸಕ್ತಿಯಾಗಲಿ, ಬಯಕೆಯಾಗಲಿ, ರಾಗದ್ವೇಷಗಳಾಗಲಿ ಅವರಿಗಿರಲಿಲ್ಲವೆಂದು ದಾಸರ ಅಭಿಪ್ರಾಯ.



ಮುಖಾರಿ ಅಟ್ಟ

ಆಚಾರಿಯರೆಂಬವರ ಇರವ ನೋಡಿ ಪ

ಆಚಾರ ಬಲ್ಲವರೆ ಆಚಾರಿಯರು ಅ

ಆ ಎಂದರೆ ಅತಿ ತತ್ತ್ವವ ತಿಳಿದವರು
ಅದುಳಿದ ಮತ ಧ್ವಂಸ ಮಾಡುವರು
ಅತಿಥಿ ಅಭ್ಯಾಗತರಿಗೆ ಅನ್ನವನ್ನೆ ಇಕ್ಕುವರು
ಆಯುತ ವೃತ್ತಿಯನ್ನೆ ಮಾಡುವರು ೧

ಚಾ ಎಂದರೆ ಚಂಚಲಾತ್ಮವನೆ ಅಳಿದವರು
ಚೆನ್ನಾಗಿ ವೇದಶಾಸ್ತ್ರವನೆ ಓದಿದವರು
ಚಲನೆಯಿಲ್ಲದೆ ಗುರುಹಿರಿಯರಿಗೆ ಎರಗುವರು
ಚಾನಸ ಬಿಟ್ಟವರು ಆಚಾರಿಯರು ೨

ರು ಎಂದರೆ ಋಣವ ಮಾಡದಿದ್ದವರು
ರಿಪುಮಿತ್ರ ಸಮರೆಂದು ಕಾಂಬುವರು
ರೌಪ್ಯ ಸೌವರ್ಣವನು ವೃತ್ತಿಕೆಯೆಂದು ನೋಡುವರು
ರಮಾಧವ ಪುರಂದರವಿಠಲನ ಬಲ್ಲವರೇ ಆಚಾರಿಯರು ೩

[ಆಚಾರ್ಯ ಎನ್ನುವ ಮಾತಿಗೆ ಅಕ್ಷರಗಳನ್ನು ಹಿಡಿದು ಅರ್ಥವನ್ನು ಹೇಳಿದ್ದಾರೆ.]

ಅತಿತತ್ತ್ವ—ಎಲ್ಲ ತತ್ತ್ವಗಳಿಂದ ಮಿಗಿಲಾದ ತತ್ತ್ವ, ಹರಿ.

ಅಳಿದುಳಿದ ಮತ—ಹರಿಸರ್ವೋತ್ತಮತ್ವವನ್ನು ಒಪ್ಪದ ಧರ್ಮ.

ಆಯುತ—ಆಯುಕ್ತ, ತಮಗೆ ವಿಧಿಸಲ್ಪಟ್ಟ, ವಿಹಿತವಾದ.

ಚಂಚಲಾತ್ಮವನೆ—ಚಂಚಲವಾದ ಮನಸ್ಸನ್ನು.

ಚಲನೆಯಿಲ್ಲದೆ—ಎಡೆಬಿಡದೆ.

ಚಾನಸ—'ಛಾಂದಸ' ಎಂಬ ಸಂಸ್ಕೃತಮಾತಿನ ಕನ್ನಡರೂಪ. ಛಾಂದಸರೆಂದರೆ ತೀರ ಬಿಗಿಯಾದ ಮನೋವೃತ್ತಿಯುಳ್ಳವರು ; ಹೀಗೆಯೇ ಇರಬೇಕು, ಹಾಗೆಯೇ ನಡೆಯಬೇಕು, ಇದಕ್ಕೆ ಎಳ್ಳಷ್ಟೂ ತಪ್ಪಬಾರದು ಎಂದು ಕಟ್ಟುನಿಟ್ಟಾದ ಆಚರಣೆಯುಳ್ಳವರು ತೀರ ಕರ್ಮಠರೆಂದು ತಾತ್ಪರ್ಯ ; ಇವರಿಗೆ ಕರ್ಮ ದಿಂದಲೇ ಮೋಕ್ಷವೆನ್ನುವ ಹಟ.

ರಿಪುಮಿತ್ರಸಮರೆಂದು ..—ಹಗೆಗಳೂ ಸ್ನೇಹಿತರೂ ಒಂದೇ ಎಂದು ಬಗೆದು, ಯಾರಲ್ಲೂ ಅತಿಯಾದ ಪ್ರೀತಿಯನ್ನಾಗಲಿ ಅತಿಯಾದ ದ್ವೇಷವನ್ನಾಗಲಿ ಮಾಡದವರು.

ರೌಪ್ಯಸುವರ್ಣವನು ಮೃತ್ತಿಕೆಯೆಂದು...—ಬೆಳ್ಳಿ ಬಂಗಾರಗಳನ್ನು ಮಣ್ಣಿಗೆ ಸಮ ವೆಂದು ಕಾಣುವರು.



೧೨

ಶಂಕರಾಭರಣ ಆದಿ

ಮಾರುತವತಾರನೀತ ನಮ್ಮ ಗುರು ಕಾಣಿರೋ
ಭಾರತಿಯ ರಮಣನೇ ಮೂಲಗುರು ಕಾಣಿರೊ ಪ

ಸಂತತಿ ಸಹಿತ ರಾವಣಬಲವ ತರಿದ
ಹೊಂತಕಾರಿ ಹನುಮಂತ ನಮ್ಮ ಗುರು ಕಾಣಿರೊ
ಅಂತಕನ ಪುರಿಗೆ ಕೌರವರನು ಕಳುಹಿದ
ವಂಥದೊಳು ಭೀಮಸೇನ ಮೂಲಗುರು ಕಾಣಿರೊ ೧

ಯತಿರೂಪಿನಲಿ ಬಂದು ಕ್ಷಿತಿಯ ಮೇಲೆ ನಿಂದು ದು
ರ್ಮತವ ಖಂಡಿಸಿದಾತ ನಮ್ಮಗುರು ಕಾಣಿರೊ
ಶ್ರುತಿಗೆ ಸಮ್ಮತವಾದ ಮತವ ಸ್ಥಾಪಿಸಿ ಮುಕ್ತಿ
ಪಥವ ತೋರಿಸಿದಾತ ಮೂಲಗುರು ಕಾಣಿರೊ ೨

ಹೇಮ ಭೂಮಿಯ ಕಾಮಿನಿಯ ವ್ರಾತವನುಳಿದು ನಿ
ಸ್ಸೀಮನೆನಿಸಿದಾತ ನಮ್ಮ ಗುರು ಕಾಣಿರೊ
ರಾಮಚಂದ್ರ ಪುರಂದರವಿಠಲನ ದಾಸರಾದ
ಶ್ರೀಮಧ್ವಾಚಾರ್ಯರೆ ನಮ್ಮ ಗುರು ಕಾಣಿರೊ ೩

ಮಾರುತವತಾರ—ಮಾರುತನ ಅವತಾರ.

ಸಂತತಿ ಸಹಿತ—ರಾವಣನ ಒಬ್ಬ ಮಗನಾದ ಅಕ್ಷಯಕುಮಾರನನ್ನು ತಾನೇ ಕೊಂದು, ಇನ್ನೊಬ್ಬ ಮಗನಾದ ಇಂದ್ರಜಿತ್ತಿನ ಸಾವಿಗೆ ನೆರವಾದವನು.

ಹೊಂತಕಾರಿ—ನಾನಾ ಉಪಾಯಗಳನ್ನು ಬಲ್ಲವನು.

ಅಂತಕನ ಪುರಿಗೆ—ಯಮನ ಪಟ್ಟಣಕ್ಕೆ.

ಹೇಮ ಭೂಮಿಯ ಕಾಮಿನಿಯ ವ್ರಾತವನುಳಿದು—ಹೊನ್ನು, ಮಣ್ಣು, ಹೆಣ್ಣು ಇವುಗಳ ಗುಂಪಿನಿಂದ ದೂರವಾಗಿದ್ದು.

ಆನಂದಭೈರವಿ ಏಕ

ಇದಿರ್‍ಯಾರೋ ಗುರುವೇ ಸಮರ್‍ಯಾರೋ ಪ
ಮದನಜನಕ ಪ್ರಿಯ ಗುರು ಮಧ್ವರಾಯಾ ಅ

ಸನ್ನುತ ಮಹಿಮ ಪ್ರಸನ್ನವದನ ನಿನ
ಗನ್ಯನಲ್ಲವೊ ನೀ ಎನ್ನ ರಕ್ಷಿಸಬೇಕೊ
ನಿನ್ನ ನೋಡಿದವರು ಧನ್ಯರಾಗುವರು
ಎನ್ನ ದಯಾಮೂರ್ತಿ ಮನ್ನಿಸಿ ನೋಡೋ ೧

ದುರ್ಜನರನು ಗರ್ಜನದಿಂದ ಓಡಿಸಿ
ಸಜ್ಜನರನು ಸಂರಕ್ಷಿಸಿದಾತನೆ
ಈ ಜಗದಲ್ಲಿ ಮಧ್ಯಗೇಹರ ಪತ್ನಿಯ
ಪೂಜ್ಯ ಜಠರದಲ್ಲಿ ಜನಿಸಿದ ಧೀರ ೨

ವೇದಶಾಸ್ತ್ರಗಳಿಂದ ಮಾಯಿಗಳ ಖಂಡಿಸಿ
ಸಾಧಿಸಿ ಹರಿಯೆ ಸರ್ವೋತ್ತಮನೆಂತೆಂದು
ಮೋದಭರಿತವಾದ ದಿವ್ಯಶಾಸ್ತ್ರವ ಮಾಡಿದ
ಮೋದ ತೀರ್ಥ ಪುರಂದರವಿಠ್ಠಲ ದಾಸ ೩

ಇದಿರ್‍ಯಾರೋ—ನಿನ್ನ ಮುಂದೆ ನಿಲ್ಲಬಲ್ಲವರು ಯಾರು ; ನಿನಗೆ ಯಾರೂ ಎಣೆಯಿಲ್ಲ, ಸರಿಸಾಟಿಯಿಲ್ಲ.

ಮಾರಜನಕಪ್ರಿಯ—ಮನ್ಮಥನ ತಂದೆಯಾದ ನಾರಾಯಣನಿಗೆ ಪ್ರಿಯನಾದವನೇ.

ನಿನಗನ್ಯನಲ್ಲ—ನೀನು ನನ್ನ ಮುಖ್ಯಪ್ರಾಣನಾಗಿ ನನ್ನೊಳಗೇ ಇರುವೆಯಾದ್ದರಿಂದ ನಾನು ನಿನಗೆ ಬೇರೆಯವನಲ್ಲ ; ನಿನ್ನ ಆಶ್ರಿತನೇ.

ಮನ್ನಿಸಿ—ನಿನ್ನವನೆಂಬ ಅಭಿಮಾನದಿಂದ.

ಮಧ್ಯಗೇಹರ ಪತ್ನಿಯ—ಶಿವಬೆಳ್ಳಿ (ರೌಪ್ಯಪೀಠ) ಎಂಬ ಗ್ರಾಮದಲ್ಲಿ ಪಾಜಕವೆಂಬೆಡೆಯಲ್ಲಿ ನಡ್ಡಂತಿಲ್ಲಾಯವೆಂಬ ತುಳುಮನೆತನಕ್ಕೆ ಸೇರಿದ ಬ್ರಾಹ್ಮಣನ

ಮಗನಾಗಿ ಮಧ್ವಾಚಾರ್ಯರು ಹುಟ್ಟಿದರು. ನಡ್ಡಂತಿಲ್ಲಾಯ ಎಂಬ ತುಳು ಮಾತನ್ನು ಸಂಸ್ಕೃತದಲ್ಲಿ 'ಮಧ್ಯಗೇಹ'ವೆಂದು ಮಾಡಿದ್ದಾರೆ. ಇದು ವ್ಯಕ್ತಿನಾಮವಲ್ಲ, ಕುಲನಾಮ. ಇವರ ದಿಟವಾದ ಹೆಸರೇನೋ ತಿಳಿಯದು.

ಮಾಯಿಗಳ—ಮಾಯಾವಾದವನ್ನು ಹಿಡಿದವರ.

ಮೋದತೀರ್ಥ—ಮಧ್ವಾಚಾರ್ಯರಿಗೆ 'ಆನಂದತೀರ್ಥ'ರೆಂದೂ ಹೆಸರಿದೆ ; ಇಲ್ಲಿನ ಆನಂದವನ್ನು ಮೋದವೆಂದು ಪರ್ಯಾಯವಾಗಿ ಒಕ್ಕಣಿಸಿದ್ದಾರೆ.



## ೧೪

ಕಲ್ಯಾಣಿ — ಅಟ್ಟ

ಗುರುರಾಯರ ನಂಬಿರೊ ಮಾರುತಿಯೆಂಬ
ಗುರುರಾಯರ ನಂಬಿರೊ ಪ

ಗುರುರಾಯರ ನಂಬಿ ಬಿಡದೆ ಯಾವಾಗಲು
ದುರಿತವ ಕಳೆದು ಸದ್ಗತಿಯ ಪಡೆವರೆಲ್ಲ ಅ

ವನಧಿಯ ಮನೋವೇಗದಿ ಲಂಘಿಸಿ ಮಹಿ
ತನುಜೆ ಶೋಕವ ತರಿದು
ವನವ ಬೇರೊಡನೆ ಕಿತ್ತೀಡಾಡಿ ಎದುರಾದ
ದನುಜರ ಸದೆದು ಲಂಕೆಯ ತನ್ನ ಸಖಗಿತ್ತ ೧

ಕೌರವ ಬಕ ಹಿಡಿಂಬ ಕೀಚಕರೆಂಬ
ದುರುಳ ಸಂತತಿ ನೆಗ್ಗೊತ್ತಿ
ಘೋರಪಾತಕಿ ದುಶ್ಯಾಸನನ ರಕುತವ
ಹೀರಿ ಮುದದಿ ಮುರವೈರಿಯ ಭಜಿಸಿದ ೨

ಜೀವೇಶರೊಂದೆಂಬುವ ದುರ್ವಾದಿಯ ಅ
ಭಾವ ಶಾಸ್ತ್ರಗಳೋಡಿಸಿ
ಕೋವಿದರಿಗೆ ಸದ್ಭಾಷ್ಯವ ತೋರಿದ
ದೇವ ಪುರಂದರವಿಠಲ ಸೇವಕರಾದ ೩

[ಸಮುದ್ರವನ್ನು ಲಂಘಿಸಿ ದುಷ್ಟದಾನವರನ್ನು ಸದೆದು ಲಂಕೆಯನ್ನು ವಿಭೀಷಣನಿಗೆ ಕೊಡಿಸಿದ ಆಂಜನೇಯ, ಕೌರವ ದುಶ್ಯಾಸನ ಹಿಡಿಂಬ ಕೀಚಕ ಮೊದಲಾದ ದುಷ್ಟರ ಮೇಲೆ ದಾಳಿ ಮಾಡಿದ ಭೀಮ, ದುರ್ವಾದಿಗಳ ದುರ್ವಾಖ್ಯಾನಗಳ ದಾಳಿಯನ್ನೆದುರಿಸಿ ಸದ್ಭಾಷ್ಯವನ್ನು ಬರೆದ ಮಧ್ವಮುನಿ ಇವರು ಮೂವರ ಗುರಿಯೂ ಒಂದೇ ಆಗಿತ್ತೆಂಬ ಭಾವ ಈ ಕೀರ್ತನೆಯಲ್ಲಿ ವ್ಯಕ್ತಗೊಂಡಿದೆ.]

ವನಧಿ—ನೀರಿನ (ವನ) ನೆಲೆ (ಧಿ), ಸಮುದ್ರ.

ಮಹಿ ತನುಜೆ—ಸೀತೆ.

ತರಿದು—ಹೋಗಲಾಡಿಸಿ.

ವನವ—ಲಂಕೆಯಲ್ಲಿ ಅರಸನ ಉದ್ಯಾನವಾಗಿದ್ದ ಅಶೋಕವನವನ್ನು.

ತನ್ನ ಸಖಗೆ—ವಿಭೀಷಣನಿಗೆ ; ಲಂಕಾರಾಜ್ಯದ ಆಧಿಪತ್ಯವು ಅವನಿಗೆ ದೊರಕುವಂತೆ ಮಾಡಿದ.

ನೆಗ್ಗೊತ್ತಿ—ಹಾಳುಮಾಡಿ.

ಘೋರಪಾತಕಿ—ತುಂಬಿದ ಸಭೆಯಲ್ಲಿ ದ್ರೌಪದಿಯ ಮಾನಭಂಗಮಾಡಲು ಯತ್ನಿಸಿದ್ದು ದುಃಶಾಸನನ ಘೋರಪಾತಕ.

ಮುರವೈರಿ—ಮುರನೆಂಬ ರಾಕ್ಷಸನನ್ನು ಕೊಂದ ಕೃಷ್ಣ.

ಜೀವೇಶರೊಂದೆಂಬುವ—ಜೀವಾತ್ಮ ಪರಮಾತ್ಮರಲ್ಲಿ ಭೇದವಿರದೆಂಬ.

ದುರ್ವಾದಿಯಭಾವಶಾಸ್ತ್ರಗಳೋಡಿಸಿ—ಕುಯುಕ್ತಿಯ ವಾದಿಗಳ ಅಭಾವಶಾಸ್ತ್ರಗಳನ್ನು (ಪರಮಾತ್ಮನೆಂಬ ತತ್ತ್ವವೇ ಬೇರೆಯಾಗಿ ಇರದೆಂಬುದು ಅಭಾವ ಶಾಸ್ತ್ರ, ಶೂನ್ಯಸಿದ್ಧಾಂತ) ಖಂಡಿಸಿ.

ಕೋವಿದರಿಗೆ—ತಿಳುವಳಿಕೆಯುಳ್ಳವರಿಗೆ.

ಸದ್ಭಾಷ್ಯವ—ಬಾದರಾಯಣರ ಆಶಯವನ್ನು ಸರಿಯಾಗಿ ತಿಳಿಸುವ ಭಾಷ್ಯವನ್ನು.



ಕಾಂಬೋದಿ | ರೂಪಕ

ಮುಖ್ಯಪ್ರಾಣ ಎನ್ನ ಮೂಲಗುರುವೆ ಪ

ರಕ್ಕಸಾಂತಕ ಶ್ರೀ ರಾಮನ ನಿಜ ದಾಸ ಅ

ತಂದೆ ನೀನೆ ಎನಗೆ ತಾಯಿ ನೀನೆ ಎನಗೆ ಬಂಧು ನೀನೆ ಎನಗೆ ಬಳಗ ನೀನೆ
ಎಂದೆಂದಿಗೂ ನಮ್ಮೆಲ್ಲರ ರಕ್ಷಿಪನು ನೀನೆ ೧

ತಾತ ನೀನೆ ಎನಗೆ ಕರ್ತ ನೀನೆ ಎನಗೆ
ವಿತ್ತ ನೀನೆ ಎನಗೆ ವಿಭವ ನೀನೆ
ಸತ್ಯ ನೀನೆ ಸದಾಚಾರವು ನೀನೆ ೨

ಸುಖವು ನೀನೆ ಎನಗೆ ಸುಲಭ ನೀನೇ
ಏಕಾಂತ ಶ್ರೀ ಪುರಂದರವಿಠಲನ ಭಕುತ ನಿಜದಿ ನೀನೇ ೩

ಮೂಲಗುರು—ತಮ್ಮ ದೀಕ್ಷಾಗುರುಗಳಾದ ವ್ಯಾಸರಾಯಸ್ವಾಮಿಗಳ ಗುರು ಪರಂಪರೆಗೆ ಮೂಲರಾದವರು, ಮಧ್ವಾಚಾರ್ಯರು.

ರಕ್ಕಸಾಂತಕ—ರಾವಣನನ್ನು ಸಂಹರಿಸಿದ.

ತಂದೆ ನೀನೆ ..—'ಗುರುರ್ಮಾತಾ ಗುರುಃ ಪಿತಾ ಗುರುರೇವ ಸ್ವಬಾಂಧವಾಃ' ಎನ್ನುವುದರ ಛಾಯೆ.

ಕರ್ತ—ನನ್ನಿಂದ ಕೆಲಸಮಾಡಿಸುವ ಪ್ರೇರಕ ; ನನ್ನೊಳಗಿದ್ದು ಕೆಲಸವನ್ನು ಮಾಡಿಸುವ ತತ್ತ್ವಾಭಿಮಾನಿ.

ವಿತ್ತ—ಹಣ, ಸಂಪತ್ತು.

ಏಕಾಂತ ಶ್ರೀಪುರಂದರವಿಠಲನ ಭಕುತ—ಶ್ರೀ ಪುರಂದರವಿಠಲನ ಏಕಾಂತ ಭಕ್ತ ಎಂದು ಅನ್ವಯ. ಮೊದಲ ಎರಡು ಕಕ್ಷೆಗಳಲ್ಲಿ ನಿತ್ಯರಾದ, ಮುಕ್ತರಾದ ಲಕ್ಷ್ಮೀನಾರಾಯಣರಿದ್ದು, ಮೂರನೆಯ ಕಕ್ಷೆಯಲ್ಲೇ ವಾಯುವು ಜೀವೋತ್ತಮನಾಗಿ ಇರುವುದರಿಂದ ಅವರೊಂದಿಗೆ ನೇರವಾದ ನೆಂಟುಳ್ಳವನು. ಉಳಿದೆಲ್ಲ ದೇವತೆಗಳೂ ಜೀವರೂ ವಾಯುವಿನ ಮೂಲಕವೇ ವಿಷ್ಣುಪ್ರಸಾದವನ್ನು ಗಳಿಸಿಕೊಳ್ಳುವರು.

೧೬

ಸೌರಾಷ್ಟ್ರ                                                                 ಅಟ್ಟ

ನೆನೆವೆನು ಅನುದಿನ ನಿಮ್ಮ ಮಹಿಮೆಯನು ಮಧ್ವರಾಯಾ ಪ

ಸನಕಾದಿ ಮುನಿವೃಂದ ಸೇವಿತ ಪಾದಾಬ್ಜ ಮಧ್ವರಾಯಾ ಅ

ಕಲಿಮಲದಿಂ ಜ್ಞಾನ ಕಲುಷಿತವಾಗಲು ಮಧ್ವರಾಯಾ
ನಳಿನಾಕ್ಷನಾಜ್ಞದಿ ಇಳೆಯೊಳಗುದಿಸಿದೊ ಮಧ್ವರಾಯಾ ೧

ಗೋವಿತ್ತ ವಿಪ್ರಗೆ ನಿರುತ ಮೋಕ್ಷವನಿತ್ತೆ ಮಧ್ವರಾಯಾ
ಜೀವೇಶರೊಂದೆಂಬ ಮತವ ಭೇದಿಸಿದೆ ಮಧ್ವರಾಯಾ ೨

ಸೂತ್ರಾರ್ಥಗಳೆನ್ನೆಲ್ಲ ವೇತೃಗಳಿಗೆ ತಿಳಿಸಿ ಮಧ್ವರಾಯಾ
ಶಾಸ್ತ್ರದ ತಾತ್ಪರ್ಯ ಪ್ರಕರಣ ರಚಿಸಿದೆ ಮಧ್ವರಾಯಾ ೩

ಸುಜನರ ಹೃದಯದಿ ಸೇರಿದ್ದ ತಮಸಿಗೆ ಮಧ್ವರಾಯಾ
ನಿಜಜ್ಞಾನ ರವಿಯಂತೆ ಕಿರಣವ ಹರಡಿದೆ ಮಧ್ವರಾಯಾ ೪

ವ್ಯಾಸದೇವರಿಗಭಿವಂದಿಸಿ ಬದರಿಯಲಿ ಮಧ್ವರಾಯಾ
ಶ್ರೀಶ ಪುರಂದರವಿಠಲ ದಾಸನಾದೆ ಮಧ್ವರಾಯಾ ೫

ನಳಿನಾಕ್ಷನಾಜ್ಞದಿ—ವಿಷ್ಣುವಿನ ಅಣತಿಯಂತೆ.

ಗೋವಿತ್ತ ವಿಪ್ರಗೆ...—ಮಧ್ವಾಚಾರ್ಯರು ಮಗುವಾಗಿದ್ದಾಗ ಅವರ ಸಲುವಾಗಿ ಹಾಲನ್ನು ಒದಗಿಸಲು ಪೂರ್ವಾಲಯದ ಬಲ್ಲಾಳರು ಮಧ್ವಾಚಾರ್ಯರ ತಂದೆಗೆ ಹಸುವೊಂದನ್ನು ಕೊಟ್ಟರೆಂದೂ ಅದರ ಫಲವಾಗಿ ಅವರಿಗೆ ಮುಕ್ತಿ ದೊರಕಿತೆಂದೂ ಕತೆ (ಮಧ್ವವಿಜಯ, 2ನೇ ಸರ್ಗ, 30).

ಜೀವೇಶರೊಂದೆಂಬ...—ಜೀವಾತ್ಮನಿಗೂ ಪರಮಾತ್ಮನಿಗೂ ಭೇದವಿರದು ಎಂಬ ಸಿದ್ಧಾಂತವನ್ನು ಖಂಡಿಸಿದೆ.

ಕಾಂಬೋದಿ　　　　　　　　　　　　　　　　　　　　　　　　　　　　ರೂಪಕ

ಮುಖ್ಯಪ್ರಾಣ ಎನ್ನ ಮೂಲಗುರುವೆ　　ಪ

ರಕ್ಕಸಾಂತಕ ಶ್ರೀ ರಾಮನ ನಿಜ ದಾಸ　　ಅ

ತಂದೆ ನೀನೆ ಎನಗೆ ತಾಯಿ ನೀನೆ ಎನಗೆ ಬಂಧು ನೀನೆ ಎನಗೆ ಬಳಗ ನೀನೆ
ಎಂದೆಂದಿಗೂ ನಮ್ಮೆಲ್ಲರ ರಕ್ಷಿಪನು ನೀನೆ　　೧

ತಾತ ನೀನೆ ಎನಗೆ ಕರ್ತ ನೀನೆ ಎನಗೆ
ವಿತ್ತ ನೀನೆ ಎನಗೆ ವಿಭವ ನೀನೆ
ಸತ್ಯ ನೀನೆ ಸದಾಚಾರವು ನೀನೆ　　೨

ಸುಖವು ನೀನೆ ಎನಗೆ ಸುಲಭ ನೀನೇ
ಏಕಾಂತ ಶ್ರೀ ಪುರಂದರವಿಠಲನ ಭಕುತ ನಿಜದಿ ನೀನೇ　　೩

ಮೂಲಗುರು—ತಮ್ಮ ದೀಕ್ಷಾಗುರುಗಳಾದ ವ್ಯಾಸರಾಯಸ್ವಾಮಿಗಳ ಗುರು ಪರಂಪರೆಗೆ ಮೂಲರಾದವರು, ಮಧ್ವಾಚಾರ್ಯರು.

ರಕ್ಕಸಾಂತಕ—ರಾವಣನನ್ನು ಸಂಹರಿಸಿದ.

ತಂದೆ ನೀನೆ ..—'ಗುರುರ್ಮಾತಾ ಗುರುಃ ಪಿತಾ ಗುರುರೇವ ಸ್ವಬಾಂಧವಾಃ' ಎನ್ನುವುದರ **ಛಾಯೆ.**

ಕರ್ತ—ನನ್ನಿಂದ ಕೆಲಸಮಾಡಿಸುವ ಪ್ರೇರಕ ; ನನ್ನೊಳಗಿದ್ದು ಕೆಲಸವನ್ನು ಮಾಡಿಸುವ ತತ್ತ್ವಾಭಿಮಾನಿ.

ವಿತ್ತ—ಹಣ, ಸಂಪತ್ತು.

ಏಕಾಂತ ಶ್ರೀಪುರಂದರವಿಠಲನ ಭಕುತ—ಶ್ರೀ ಪುರಂದರವಿಠಲನ ಏಕಾಂತ ಭಕ್ತ ಎಂದು ಅನ್ವಯ. ಮೊದಲ ಎರಡು ಕಕ್ಷೆಗಳಲ್ಲಿ ನಿತ್ಯರಾದ, ಮುಕ್ತರಾದ ಲಕ್ಷ್ಮೀನಾರಾಯಣರಿದ್ದು, ಮೂರನೆಯ ಕಕ್ಷೆಯಲ್ಲೇ ವಾಯುವು ಜೀವೋತ್ತಮನಾಗಿ ಇರುವುದರಿಂದ ಅವರೊಂದಿಗೆ ನೇರವಾದ ನೆಂಟುಳ್ಳವನು. ಉಳಿದೆಲ್ಲ ದೇವತೆಗಳೂ ಜೀವರೂ ವಾಯುವಿನ ಮೂಲಕವೇ ವಿಷ್ಣುಪ್ರಸಾದವನ್ನು ಗಳಿಸಿಕೊಳ್ಳುವರು.

ಸೌರಾಷ್ಟ್ರ ಅಟ್ಟ

ನೆನೆವೆನು ಅನುದಿನ ನಿಮ್ಮ ಮಹಿಮೆಯನು ಮಧ್ವರಾಯಾ ಪ

ಸನಕಾದಿ ಮುನಿವೃಂದ ಸೇವಿತ ಪಾದಾಬ್ಜ ಮಧ್ವರಾಯಾ ಅ

ಕಲಿಮಲದಿಂ ಜ್ಞಾನ ಕಲುಷಿತವಾಗಲು ಮಧ್ವರಾಯಾ
ನಳಿನಾಕ್ಷನಾಜ್ಞದಿ ಇಳೆಯೊಳಗುದಿಸಿದೊ ಮಧ್ವರಾಯಾ ೧

ಗೋವಿತ್ತ ವಿಪ್ರಗೆ ನಿರುತ ಮೋಕ್ಷವನಿತ್ತೆ ಮಧ್ವರಾಯಾ
ಜೀವೇಶರೊಂದೆಂಬ ಮತವ ಭೇದಿಸಿದೆ ಮಧ್ವರಾಯಾ ೨

ಸೂತ್ರಾರ್ಥಗಳನ್ನೆಲ್ಲ ವೇತೃಗಳಿಗೆ ತಿಳಿಸಿ ಮಧ್ವರಾಯಾ
ಶಾಸ್ತ್ರದ ತಾತ್ಪರ್ಯ ಪ್ರಕರಣ ರಚಿಸಿದೆ ಮಧ್ವರಾಯಾ ೩

ಸುಜನರ ಹೃದಯದಿ ಸೇರಿದ್ದ ತಮಸಿಗೆ ಮಧ್ವರಾಯಾ
ನಿಜಜ್ಞಾನ ರವಿಯಂತೆ ಕಿರಣವ ಹರಡಿದೆ ಮಧ್ವರಾಯಾ ೪

ವ್ಯಾಸದೇವರಿಗಭಿವಂದಿಸಿ ಬದರಿಯಲಿ ಮಧ್ವರಾಯಾ
ಶ್ರೀಶ ಪುರಂದರವಿಠಲ ದಾಸನಾದೆ ಮಧ್ವರಾಯಾ ೫

ನಳಿನಾಕ್ಷನಾಜ್ಞದಿ—ವಿಷ್ಣುವಿನ ಅಣತಿಯಂತೆ.

ಗೋವಿತ್ತ ವಿಪ್ರಗೆ...—ಮಧ್ವಾಚಾರ್ಯರು ಮಗುವಾಗಿದ್ದಾಗ ಅವರ ಸಲುವಾಗಿ ಹಾಲನ್ನು ಒದಗಿಸಲು ಪೂರ್ವಾಲಯದ ಬಲ್ಲಾಳರು ಮಧ್ವಾಚಾರ್ಯರ ತಂದೆಗೆ ಹಸುವೊಂದನ್ನು ಕೊಟ್ಟರೆಂದೂ ಅದರ ಫಲವಾಗಿ ಅವರಿಗೆ ಮುಕ್ತಿ ದೊರಕಿತೆಂದೂ ಕತೆ (ಮಧ್ವವಿಜಯ, 2ನೇ ಸರ್ಗ, 30).

ಜೀವೇಶರೊಂದೆಂಬ...—ಜೀವಾತ್ಮನಿಗೂ ಪರಮಾತ್ಮನಿಗೂ ಭೇದವಿರದು ಎಂಬ ಸಿದ್ಧಾಂತವನ್ನು ಖಂಡಿಸಿದೆ.

ಸೂತ್ರಾರ್ಥಗಳನ್ನೆಲ್ಲ—ಬಾದರಾಯಣರು ರಚಿಸಿದ, ವೇದಾಂತದ ನ್ಯಾಯಪ್ರಸ್ಥಾನ ವೆನಿಸಿದ, ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದು, ತಿಳಿಯಬೇಕೆಂಬ ಬಯಕೆ ಯುಳ್ಳವರಿಗೆ (ವೇತೃ, ಜಿಜ್ಞಾಸು) ತಿಳಿಸಿದೆ

ಶಾಸ್ತ್ರದ ತಾತ್ಪರ್ಯ ಪ್ರಕರಣ—ಶಾಸ್ತ್ರಗ್ರಂಥಗಳು (ಬ್ರಹ್ಮಸೂತ್ರಭಾಷ್ಯ, ಅನು ವ್ಯಾಖ್ಯಾನ, ಅಣುಭಾಷ್ಯ, ನ್ಯಾಯವಿವರಣ), ತಾತ್ಪರ್ಯಗ್ರಂಥಗಳು (ಭಾರತತಾತ್ಪರ್ಯ ನಿರ್ಣಯ, ಗೀತಾತಾತ್ಪರ್ಯ ನಿರ್ಣಯ, ಭಾಗವತ ತಾತ್ಪರ್ಯ ನಿರ್ಣಯ), ಪ್ರಕರಣಗ್ರಂಥಗಳು (ವಿಷ್ಣುತತ್ತ್ವ ವಿನಿರ್ಣಯ, ತತ್ತ್ವಸಂಖ್ಯಾನ ಮೊದಲಾದ ಹತ್ತು).

ತಮಸಿಗೆ—ಕತ್ತಲೆಗೆ, ಅಜ್ಞಾನ, ಅನ್ಯಥಾಜ್ಞಾನ, ಸಂಶಯ, ಭ್ರಾಂತಿ ಮೊದಲಾದುವು.

ಬದರಿಯಲಿ—ಮಧ್ವಾಚಾರ್ಯರು ಹಿಮಾಲಯದ ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿ, ಅಲ್ಲಿ ಹಿರಿಯ ಬದರಿ ಎಂಬಲ್ಲಿ ವೇದವ್ಯಾಸರನ್ನು ಕಂಡು ಅವರಿಂದ ಆಜ್ಞಾಪ್ತರಾಗಿ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿದರೆಂದು 'ಮಧ್ವವಿಜಯ' ಗ್ರಂಥದಲ್ಲಿ ಹೇಳಿದೆ (ಆರನೆಯ ಸರ್ಗ)



ಶಂಕರಾಭರಣ ಏಕ

ಮಧ್ವರಾಯಾ ಗುರು ಮಧ್ವರಾಯಾ
ಮಧ್ವರಾಯಾ ಗುರು ಮಧ್ವರಾಯಾ ಪ

ರಾಮಾವತಾರದಲೊಮ್ಮೆ ಮಧ್ವರಾಯಾ
ಆ ಮಹಾ ಹನುಮನಾದೆ ಮಧ್ವರಾಯಾ
ವಾಮಮುಷ್ಟಿಲಿ ರಾವಣನ ಗೆಲಿದೆ ಮಧ್ವರಾಯಾ
ಕಾಮಿತಾರ್ಥ ಸುರರಿಗಿತ್ತೆ ಮಧ್ವರಾಯಾ ೧

ಕೃಷ್ಣಾವತಾರದೊಳೊಮ್ಮೆ ಮಧ್ವರಾಯಾ
ದುಷ್ಟಕುಲಕೆ ಭೀಮನಾದೆ ಮಧ್ವರಾಯಾ
ಕುಟ್ಟಿದೆ ಕೌರವರನ್ನೆಲ್ಲ ಮಧ್ವರಾಯಾ ಶ್ರೀ
ಕೃಷ್ಣನ ಪ್ರೀತಿಯ ಪಡೆದೆ ಮಧ್ವರಾಯಾ ೨

ಧರೆಯೊಳು ಯತಿಯಾಗಿ ಜನಿಸಿದೆ ಮಧ್ವರಾಯಾ
ಗುರುವ್ಯಾಸರ ಹಿತವ ಪಡೆದೆ ಮಧ್ವರಾಯಾ
ದುರುಳ ಮಾಯ್ಯಮತವ ಮುರಿದೆ ಮಧ್ವರಾಯಾ
ಪುರಂದರವಿಠಲನ ದಾಸನಾದೆ ಮಧ್ವರಾಯಾ ೩

[ಇದರಲ್ಲಿ ಹನುಮ-ಭೀಮ-ಮಧ್ವರೆಂಬ ಅವತಾರತ್ರಯದ ವರ್ಣನೆಯಿದೆ. ರಾಮಾವತಾರದಲ್ಲಿ ಹನುಮಂತನಾಗಿ ರಾಮನ ಪ್ರೀತಿಯನ್ನೂ, ಕೃಷ್ಣಾವತಾರದಲ್ಲಿ ಭೀಮನಾಗಿ ಕೃಷ್ಣನ ಪ್ರೀತಿಯನ್ನೂ, ಕಲಿಯುಗದಲ್ಲಿ ಮಧ್ವಾಚಾರ್ಯರಾಗಿ ನಾರಾಯಣನ ಅವತಾರವೇ ಆದ ವೇದವ್ಯಾಸರ ಪ್ರೀತಿಯನ್ನೂ ಪಡೆದುಕೊಂಡರೆಂದು ತಾತ್ಪರ್ಯ.]

ವಾಮಮುಷ್ಟಿಲಿ...—ರಾಮರಾವಣರಿಗೆ ನಡೆದ ಯುದ್ಧಸಂದರ್ಭದಲ್ಲಿ ರಾವಣನನ್ನು ತನ್ನ ಎಡಗೈ ಮುಷ್ಟಿಯಿಂದ ಹೊಡೆದು ಅವನು ತತ್ತರಿಸುವಂತೆ ಮಾಡಿದನು.
ಕಾಮಿತಾರ್ಥ...—ದೇವತೆಗಳಿಗೆ ಪ್ರಿಯವಾಗಿದ್ದ ರಾವಣವಧೆಯನ್ನು ರಾಮನಿಂದ

ಮಾಡಿಸಿದವನು ಹನುಮಂತ; ಸೀತೆಯ ಸುಳುಹನ್ನು ಪಡೆದುಕೊಂಡು ರಾವಣನ ಸುದ್ದಿಯನ್ನು ರಾಮನಿಗೆ ತಂದವನು.

ಗುರುವ್ಯಾಸರ ಹಿತವ...—ಉತ್ತರ ದೇಶದ ಯಾತ್ರೆ ಮಾಡಿ ಮಧ್ವಾಚಾರ್ಯರು ಹಿರಿಯ ಬದರಿಯಲ್ಲಿ ವೇದವ್ಯಾಸರನ್ನು ಕಂಡು ಅವರನ್ನು ಪ್ರೀತಿಪಡಿಸಿದರೆಂಬ ವಿವರ ಮಧ್ವವಿಜಯದಲ್ಲಿದೆ.

ಮಾಯಮತವ...—ಜಗತ್ತೆಲ್ಲವೂ ಮಾಯೆ, ಮಿಥ್ಯೆ ಎಂಬ ವಾದವನ್ನು.



ಸುವ್ವಿಮಟ್ಟು

ಮಧ್ವರಾಯರ ನೆನೆದು ಶುದ್ಧರಾಗಿರೊ ಪ

ಹೊದ್ದಿ ವೈಷ್ಣವ ಮತವ ಭವಾಬ್ಧಿ ದಾಟಿರೊ ಅ

ಉದಯದಲ್ಲಿ ಏಳುವಾಗ ಮುದದಿ ಸ್ನಾನಮಾಡುವಾಗ
ಒದಗಿ ನಿತ್ಯಕರ್ಮಗಳನು ನಡೆಸುವಾಗ
ಹೃದಯದಲ್ಲಿ ಬೀಜಾಕ್ಷರ ಮಂತ್ರಗಳನು ಜಪಿಸುವಾಗ
ಸದಮಲಾನಂದ ಹನುಮನನ್ನು ನೆನೆಯಿರೊ ೧

ಕಾಮವಿಲ್ಲದ ಹರಿಯ ಪೂಜೆ ವೈಶ್ವದೇವ ಮಾಡುವಾಗ
ಪ್ರೇಮದಿ ವೈಷ್ಣವೋತ್ತಮರ ಅರ್ಚಿಸುವಾಗ
ಆ ಮಹಾ ಭಕ್ಷ್ಯಭೋಜ್ಯ ಆರೋಗಣೆ ಮಾಡುವಾಗ
ನೇಮದಿಂದ ಕೌರವಾಂತಕ ಭೀಮಸೇನನ ನೆನೆಯಿರೊ ೨

ಕರಗಳನು ತೊಳೆದು ತೀರ್ಥ ತುಳಸೀದಳವನೀಯುವಾಗ
ಪರಿಪರಿಯ ಪುಷ್ಪ ವೀಳ್ಯ ಅರ್ಪಿಸುವಾಗ
ಸರುವರಂತರ್ಯಾಮಿ ನಮ್ಮ ಪರಮಗುರು ಮಧ್ವಾಂತರಾತ್ಮಕ
ಸಿರಿ ಪುರಂದರವಿಠ್ಠಲಗೆ ಸಮರ್ಪಣೆ ಮಾಡಿರೊ ೩

ಹೊದ್ದಿ—ಹೊಂದಿ, ಪಡೆದುಕೊಂಡು.

ಸದಮಲಾನಂದ—ಸತ್ (ತತ್ತ್ವವಾದಕ್ಕೆ ಅನುಕೂಲವಾದ), ಅಮಲ (ಪ್ರಾಪಂಚಿಕ ಪ್ರಯೋಜನಗಳು ಯಾವುವೂ ಇರದೆ ಭಗವತ್ಪ್ರೀತಿಯೇ ಉದ್ದೇಶವಾಗಿರುವ) ಆನಂದ (ಭಗವಂತನ ಸೇವೆಯಲ್ಲಿ ದೊರಕುವ ಸುಖ).

ಕಾಮವಿಲ್ಲದೆ—ಲೌಕಿಕ ಪ್ರಯೋಜನಗಳ ಅಪೇಕ್ಷೆಯಿಲ್ಲದೆ ; ನಿಷ್ಕಾಮವಾದ.

ವೈಶ್ವದೇವ—ಆಚಾರಶೀಲರಾದ ಬ್ರಾಹ್ಮಣಗೃಹಸ್ಥರು ಮಾಡಬೇಕಾದ ಪಂಚ ಯಜ್ಞಗಳಲ್ಲಿ ಒಂದು : ವಿಶ್ವದೇವತಾಗಣಕ್ಕೆ ಸಲ್ಲಿಸುವ ಎಡೆ. ದೇವತಾ ಪೂಜೆಯನಂತರ ಆರೋಗಣೆಯ ಮೊದಲು ನಡೆಯಬೇಕಾದ ವಿಧಿ.

ಸರುವರಂತರ್ಯಾಮಿ—ಸರ್ವಾಂತರ್ಯಾಮಿ, ಎಲ್ಲರ ಒಳಗೂ ನಿಯಾಮಕನಾಗಿ ಇರುವ.

ಪರಮಗುರು—ದೀಕ್ಷೆಯನ್ನು ಕೊಟ್ಟ ವ್ಯಾಸತೀರ್ಥರು ಗುರುಗಳು ; ಅವರ ಪರಂಪರೆಯ ಮೂಲಗುರು ಮಧ್ವಾಚಾರ್ಯರು. ಅವರ ಅಂತರ್ಯಾಮಿಯಾಗಿರುವ ನಾರಾಯಣ.



ರೇಗುಪ್ತಿ ಝಂಪೆ

ಮತದೊಳಗೆ ಒಳ್ಳೆ ಮತ ಮಧ್ವಮತವು
ರಘುಪತಿ ಪೂಜಾ ವಿಧಾನಕೆ ಪಾವನ ಮತವು ಪ

ನಾರಾಯಣನ ನಾಮಸ್ಮರಣೆ ನಂಬಿದ ಮತವು
ವೇದ ಪಾರಾಯಣಕೆ ಅನುಕೂಲ ಮತವು
ತಾರತಮ್ಯದಿ ಉದ್ಧರಿಸಿ ಶ್ರುತಿಗಳನೊರೆದ
ಧಾರಿಣಿಸುರರ ಸಂತೋಷದ ಮತವು ೧

ಅಕಳಂಕ ಶ್ರೀಹರಿಗೆ ವಜ್ರಾಂಗಿಯ ಮತವು
ಸಕಲ ದೇಶಕ್ಕೆ ಸನ್ಮತವಾದ ಮತವು
ಅಕುಟಿಲ ಶುಕ ಸನಕಾದಿ ಮುನೀಂದ್ರರ
ನಿಖಿಳ ಕ್ರಿಯ ಪದವೀವ ನಿರ್ಮಲ ಮತವು ೨

ಸರಸ ಸದ್ಗುಣ ಸತ್ಯ ಸಾತ್ವಿಕವೀ ಮತವು
ಗುರು ಶಿಷ್ಯರಿಗೆ ಅನುಕೂಲ ಮತವು
ಪರಮತ ಖಂಡಿಸಿ ಪಂಡಿತರು ಪೇಳಿದ
ಪುರಂದರವಿಠಲನ ಮತವೆ ಹನುಮನ ಮತವು ೩

ನಾರಾಯಣನ ನಾಮಸ್ಮರಣೆ ನಂಬಿದ ಮತವು—ಮಾಧ್ವಸಂಪ್ರದಾಯದಲ್ಲಿ ಭಾಗವತಪಂಥದ ಹರಿನಾಮಸ್ಮರಣೆ, ಸಂಕೀರ್ತನಗಳಿಗೆ ಪ್ರಾಶಸ್ತ್ಯವಿದೆ.

ಪಾರಾಯಣಕೆ—ಹರಿಯೇ ಪರಮಗತಿ (ಪರ-ಅಯನ) ಎಂದು ನಂಬಿ, ಅವನನ್ನೇ ಆಶ್ರಯಿಸುವುದು ಪಾರಾಯಣ.

ತಾರತಮ್ಯದಿ...—ದೇವತಾತಾರತಮ್ಯದಿಂದ ಹರಿಸರ್ವೋತ್ತಮತ್ವವನ್ನು ಸಮರ್ಥಿಸಿ.

ಶ್ರುತಿಗಳನೊರೆದ ಧಾರಿಣಿಸುರರ...—ಶ್ರುತಿಸ್ಮೃತೀತಿಹಾಸಪುರಾಣಗಳಿಂದ ಇದನ್ನು ತಿಳಿಯ ಹೇಳುವ ಬ್ರಾಹ್ಮಣರ.

ಅಕಳಂಕ ಹರಿಗೆ ವಜ್ರಾಂಗಿಯ—ದೋಷವಿವರ್ಜಿತನಾದ ಹರಿಗೆ ವಜ್ರಗಳ ಉಡುಗೆ, ಎಂದರೆ ಭೂಷಣಪ್ರಾಯವಾದುದು.

ಮುದ್ರಾಂಕಿತ—ಭಾಗವತ ಪಂಥದಲ್ಲಿ ದ್ವಾದಶನಾಮಗಳ ಧಾರಣೆ, ಗುರುಮಂತ್ರ, ತುಳಸೀಮಾಲೆಯ ಧಾರಣೆ ಇವೆಲ್ಲ ಇದ್ದರೂ ತಪ್ತಮುದ್ರಾಂಕನದ ಪದ್ಧತಿಯಿಲ್ಲ ; ಅದು ಮಾಧ್ವಸಂಪ್ರದಾಯದ ವಿಶೇಷ.

ಅಕುಟಿಲ—ದೋಷವನ್ನರಿಯದ, ಮಾಯೆಯಿಂದ ದೂರರಾದ.

ಪಂತುವರಾಳಿ ಆದಿ

ಮಧ್ವಮುನಿಯೆ ಗುರು ಮಧ್ವಮುನಿಯೆ ಪ

ಮಧ್ವಮುನಿ ನಮ್ಮೆಲ್ಲರ ಉದ್ಧರಿಸುವ ಕಾಣಿರೊ ಅ

ಅಂದು ಹನುಮಂತನಾಗಿ ಬಂದ ರಾಮ ಪದಾರ
ವಿಂದದಿ ನೆರೆದು ತುಂಬಿಯಂದದಿ ಶೋಭಿಸಿದ ೧

ಏಣಾಂಕವಂಶದಿ ಪುಟ್ಟಿ ಕ್ಷೋಣೀಪಾಲಕ ಶಿರೋ
ಮಾಣಿಕ್ಯವಾಗಿ ಹರಿಗೆ ಪ್ರಾಣನೆಂದೆನಿಸಿಕೊಂಬ ೨

ಕಟ್ಟಕಡೆಯಲ್ಲಿ ಯೋಗದಿಟ್ಟನಾಗಿ ಪುರಂದರ
ವಿಠ್ಠಲಗಾವಾಸವಾದ ಪೆಟ್ಟಿಗೆಯೊಲೊಪ್ಪುವಂಥ ೩

ಅಂದು—ತ್ರೇತಾಯುಗದಲ್ಲಿ.

ತುಂಬಿಯಂದದಿ—ದುಂಬಿಯಂತೆ, ಭ್ರಮರದಂತೆ (ಹನುಮಂತನನ್ನು ಕುರಿತು).

ಏಣಾಂಕವಂಶದಿ—ಚಂದ್ರವಂಶದಲ್ಲಿ.

ಕ್ಷೋಣೀಪಾಲಕ ಶಿರೋಮಾಣಿಕ್ಯವಾಗಿ—ಭೂಮಿಯನ್ನು ಕಾಪಿಡುವ ರಾಜರಲ್ಲಿ ಶ್ರೇಷ್ಠನಾಗಿ (ಭೀಮನನ್ನು ಕುರಿತು).

ಹರಿಗೆ ಪ್ರಾಣ—ಕೃಷ್ಣನಿಗೆ ಪ್ರಿಯ.

ಕಟ್ಟಕಡೆಯಲ್ಲಿ—ಕಲಿಯುಗದಲ್ಲಿ.

ಯೋಗದಿಟ್ಟನಾಗಿ—ಸಂನ್ಯಾಸಯೋಗದಲ್ಲಿ ಸ್ಥಿರನಾಗಿ : ಅಷ್ಟಾಂಗಯೋಗದಲ್ಲಿ ಹಿರಿಯನಾಗಿ (ಧೃಷ್ಟ).

ವಿಠ್ಠಲಗಾವಾಸವಾದ ಪೆಟ್ಟಿಗೆಯೊಲು—ಹರಿಗೆ ನೆಲೆಮನೆಯಾಗುವ ಹೃದಯ.

ಭೂಪಾಳಿ ಝಂಪೆ

ಶ್ರೀ ತತ್ತ್ವವಾದ ಮತವ
ಶ್ರೀ ತತ್ತ್ವವಾದ ಮತವಾರ್ಧಿ ಶುಭಚಂದ್ರಮನ
ಭೂತಳದೊಳಪ್ರತಿಮನೆನಿಪ ಶ್ರೀಯತಿವರನ
ಪ್ರೀತಿಯಿಂ ಭಜಿಸೆ ಇಷ್ಟಾರ್ಥವನು ಸಲ್ಲಿಸುವ ವಾತದೇವನ ಭಜಿಸಿರಯ್ಯ ಪ

ಶ್ರೀಮಾರುತನು ತ್ರೇತೆಯಲಿ ಹನುಮನೆಂದೆನಿಸಿ
ತಾ ಮುದದಿ ಅಂಜನಾದೇವಿ ಗರ್ಭದಿ ಜನಿಸಿ
ರಾಮನ ಪದಾಂಬುಜವ ಭಜಿಸಿ ಸದ್ಭಕ್ತಿಯಲಿ ಸ್ವಾಮಿಯಾಜ್ಞೆಯನೆ ಕೊಂಡು
ನೇಮದಿಂ ಸಾಗರವ ದಾಟಿ ಲಂಕೆಯ ಪೊಕ್ಕು
ಪ್ರೇಮದಿಂದೊಯ್ದು ಮುದ್ರಿಕೆಯ ಜಾನಕಿಗೆ ಕೊಟ್ಟು
ಆ ಮಹದ್ವನದ ದನುಜರನೆಲ್ಲ ಮರ್ದಿಸಿದ ಧೀಮಂತನಂ ಭಜಿಸಿರಯ್ಯ ೧

ದ್ವಾಪರದಿ ಮಾರುತನು ಕುಂತಿದಾರಕನೆನಿಸಿ
ದ್ವಾಪರನ ಯುಕುತಿಯಿಂದುತ್ಕೃಷ್ಟರಾಗಿದ್ದ
ಪಾಪಿಗಳನಳಿದು ಕೀಚಕ ಜರಾಸಂಧಾದಿ ಭೂಪಾಲಕರನು ತರಿದು
ದ್ರೌಪದಿಗೆ ಸೌಗಂಧಿ ಕುಸುಮವನು ತರಪೋಗ
ಲಾ ಪಥದೊಳಸುರ ಮಣಿವಂತ ಕದನವ ಮಾಡೆ
ಕೋಪದಿಂದವನ ಮರ್ದಿಸಿದನತಿ ಬಲವಂತನಾ ಪುರುಷನಂ ಭಜಿಸಿರಯ್ಯ ೨

ಕಲಿಯುಗವು ಪ್ರಾಪ್ತವಾಗಲು ಮಧ್ವನಾಮದಿಂ
ದಿಳೆಯೊಳವತರಿಸಿ ಸೋಹಂ ಎಂಬ ಶಂಕರನ
ಹುಲುಮತವ ಮುರಿದು ಮೋಹಕಶಾಸ್ತ್ರವಳಿದು ಮಾಯ್ಗಳೆ ಗೆಲಿದು
ಪ್ರಳಯ ಭೈರವನೆಂಬ ಬಿರುದು ಅವನಿಯ ಮೇಲೆ
ನೆಲೆಗೊಳಿಸಿ ವಿಷ್ಣು ಪರದೈವವೆಂದು ಸುಜನರಿಗೆ
ತಿಳಿಸಿ ಮೂವತ್ತೇಳು ಗ್ರಂಥಗಳ ಸ್ಥಾಪಿಸಿದ ಅಲವಬೋಧರ ಭಜಿಸಿರಯ್ಯ ೩

ಪ್ರತಿವಾದಿಯೆದುರಾಗಿ ತಲೆಯೆತ್ತದಂತೆ ಸಂ
ತತ ಧರೆಯೊಳದ್ವೈತ ಅಂಕುರಿಸದಂತೆ ಕು
ತ್ಸಿತವಾದಶಾಸ್ತ್ರಗಳು ಪಲ್ಲವಿಸದಂತೆ ಮಾಯ್ಗಳ ಮತವು ಪೆಚ್ಚದಂತೆ
ಕ್ಷಿತಿಯೊಳಗೆ ಶ್ರೀತತ್ವವಾಗಿ ನೆಲಸಿಪ್ಪಂತೆ
ಶ್ರುತಿ ಶಾಸ್ತ್ರ ಉಪನಿಷದ್ಗಳು ಸಮ್ಮತಿಪ್ಪಂತೆ
ಮತವ ಸ್ಥಾಪಿಸಿ ಬದರಿ ಕ್ಷೇತ್ರದಲಿ ನೆಲಸಿಪ್ಪ ಯತಿಶ್ರೇಷ್ಠರಂ ಭಜಿಸಿರಯ್ಯ ೪

ಪರಮ ವೈಷ್ಣವರತ್ನಗಳನು ಮಿಂಚಿಪ ಸಾಣೆ
ಪರವಾದಿಗಳ ಗರ್ವ ಮುರಿವ ವಜ್ರದ ಘಾಣೆ
ಗುರು ಮಧ್ವಮುನಿಯ ಪರಮ ಸಾಮರ್ಥ್ಯಕ್ಕೆ ಎಣೆಗಾಣೆ ಲೋಕದೊಳಗೆ
ಹರಮುಖ್ಯರಿಗೆ ತತ್ತ್ವವನು ಬೋಧಿಸುವ ವೀಣೆ
ಚರಿಸಿದಂದವದ್ವೈತರಿಗೆ ಇಟ್ಟಿಹುದು ಆಣೆ
ಉರು ಪರಾಕ್ರಮ ಶ್ವಾಸಪತಿ ವಿಷ್ಣುವಿಜ್ಞಾನಿ ಮರುತದೇವರ ಭಜಿಸಿರಯ್ಯ ೫

ಅಕಳಂಕ ಗುರು ಮುಮುಕ್ಷುಗಳ ಮಸ್ತಕದ ಮಣಿ
ನಿಖಿಳ ಸುಪುರಾಣ ಶ್ರುತಿ ಶಾಸ್ತ್ರಾಗಮಗಳ ಖಣಿ
ಅಖಿಳ ವಾದಿಗಳ ಜಿಹ್ವೆಯಲಿ ಮೆಟ್ಟಿದ ಆಣಿ ಭಕುತಜನ ಚಿಂತಾಮಣಿ
ಯುಕುತಿ ಪರಿಪೂರ್ಣ ಯತ್ಯಾಶ್ರಮಕೆ ಕಟ್ಟಾಣಿ
ಪ್ರಕಟ ಕವಿಜನಕಮಲವ್ಯೂಹಕ್ಕೆ ಗಗನಮಣಿ
ಸಕಲಮುನಿಜನವಂದ್ಯ ಚೈತನ್ಯ ಸುತ್ರಾಣಿ ಸುಖತೀರ್ಥರಂ ಭಜಿಸಿರಯ್ಯ ೬

ಮುಂದೆ ಅಜನಾಗಿ ಪವಮಾನ ಕೃತಯುಗದಲ್ಲಿ
ಬಂದು ಸ್ವೇಚ್ಛೆಯಲಿ ಸೃಜಿಸುವನು ಸಚರಾಚರವ
ಸಂದೇಹವಿಲ್ಲ ತಪ್ಪದು ವೇದವಾಕ್ಯವಿದು ಹಿಂದೆ ಶ್ರೀಹರಿಸೇವೆಯ
ಒಂದು ಬಯಸದಲೆ ನಿಚ್ಚಟದ ಭಕುತಿ
ಯಿಂದೆ ಮಾಡಿದ ಪುಣ್ಯಫಲದಿಂದ ಬ್ರಹ್ಮತ್ವ
ಬಂದಿಹುದು ಈಗ ಯುಗಯುಗದೊಳವತರಿಸುವಾನಂದಮುನಿಪರ ಭಜಿಸಿರಯ್ಯ ೭

ಹರಿಗೆ ಸರಿ ಮಿಗಿಲೆನಿಪರಿಲ್ಲ ದೈವಂಗಳೊಳು
ಗುರು ಮಧ್ವರಾಯರಿಗೆ ಸರಿಯಿಲ್ಲ ಗುರುಗಳೊಳು
ಪರಮವೈಷ್ಣವರಿಗೆಣೆಯಿಲ್ಲ ಲೋಕದೊಳೆಂದು ಹಿರಿದು ಡಂಗುರವ ಹೊಯ್ಸಿ
ಬಿರುದು ಉಚ್ಚರಿಸಿ ಸದ್ಭಕ್ತಿಯಿಂದಲಿ ತನ್ನ
ಮೊರೆಹೊಕ್ಕ ಜನರ ಘಣೆಯ ದುರ್ಲೇಖವ ತೊಡೆದು
ಬರೆದು ವೈಷ್ಣವ ಲಿಪಿಯ ಶುದ್ಧಾತ್ಮರನು ಮಾಳ್ಪ ಪರಮಗುರುಗಳ ಭಜಿಸಿರಯ್ಯ ೮

ಭುವನತ್ರಯದಲ್ಲಿದ್ದ ಜನರ ಪಾವನಮಾಳ್ಪ
ಪವಮಾನ ದೇವರ ಮಹಾತ್ಮೆಯಂ ವರ್ಣಿಸಿದ
ನವರತ್ನಮಾಲೆ ಕಂಠದಲಿ ಸಂತತ ಧರಿಸಿದವರಿಗೆ ಸುಸೌಖ್ಯವನು
ತವಕದಿಂದಿತ್ತು ಇಹಲೋಕದಲಿ ತರುವಾಯ
ಜವನ ಬಾಧೆಯ ಬಿಡಿಸಿ ಮುಕುತಿಪಥದಲ್ಲಿಡುವ
ಪವನನಂತರ್ಯಾಮಿ ಪುರಂದರವಿಠಲನನು ಜವದಿಂದ ಭಜಿಸಿರಯ್ಯ ೯

ಶ್ರೀತತ್ತ್ವವಾದ—ಮಧ್ವಾಚಾರ್ಯರು ಪ್ರತಿಪಾದಿಸಿದ ಸಿದ್ಧಾಂತಕ್ಕೆ ತತ್ತ್ವವಾದ ವೆಂದೇ ಮುಂಚಿನ ಹೆಸರು : ದ್ವೈತವೇದಾಂತವೆಂಬುದು ಕಾಲಾಂತರದಲ್ಲಿ ಮೂಡಿಕೊಂಡದ್ದು.

ಮತವಾರ್ಧಿ—ಮತವಾರಿಧಿ ; ಮತವೆಂದರೆ ಅಭಿಪ್ರಾಯ, ಸಿದ್ಧಾಂತ. ಇದನ್ನು ಸಮುದ್ರ (ವಾರಿಧಿ) ಯೆಂದು ಬಗೆದರೆ ಆಚಾರ್ಯರು ಇದಕ್ಕೆ ಚಂದ್ರನಿದ್ದಂತೆ. ಚಂದ್ರೋದಯವಾದರೆ ಸಮುದ್ರ ಉಕ್ಕುವುದು ಇಲ್ಲಿನ ಉಪಮೆ.

ಅಂಜನಾದೇವಿಯ—ಅಹಲ್ಯೆ ಗೌತಮರ ಮಗಳು ಅಂಜನೆ. ಸುಮೇರು ದೇಶದ ರಾಜನಾದ ಕೇಸರಿಯೆಂಬುವನನ್ನು ಮದುವೆಯಾದಳು ; ವಾಯುವಿನ ಅನು ಗ್ರಹದಿಂದ ಹನುಮಂತನನ್ನು ಮಗನಾಗಿ ಪಡೆದಳು.

ಮಹದ್ವನದ . —ಅಶೋಕವನದ ರಾಕ್ಷಸರನ್ನೆಲ್ಲ.

ಕುಂತಿದಾರಕ—ಕುಂತಿಯ ಮಗ.

ದ್ವಾಪರನ ಯುಕ್ತಿಯಿಂದ—ದ್ವಾಪರಯುಗದಲ್ಲಿ ಧರ್ಮ ಮತ್ತು ಅಧರ್ಮ ಸಮಾನ ಬಲವುಳ್ಳದ್ದಾಗಿರುವುವೆಂದು ನಂಬಿಕೆ. ಕೃತಯುಗದಲ್ಲಿ ಕೇವಲ ಧರ್ಮ; ತ್ರೇತಾಯುಗದಲ್ಲಿ ಅಧರ್ಮವಿದ್ದರೂ ಧರ್ಮದ ಪ್ರಾಬಲ್ಯ ; ದ್ವಾಪರದಲ್ಲಿ ಎರಡೂ ಸಮನಾಗಿ ಸೆಣಸುವುವು ; ಕಲಿಯುಗದಲ್ಲಿ ಧರ್ಮವಿದ್ದರೂ ಅಧರ್ಮದ್ದೇ ಪ್ರಾಬಲ್ಯ. ಈ ವ್ಯವಸ್ಥೆಯಿಂದ ದ್ವಾಪರಯುಗದಲ್ಲಿ ಕೌರವರು ಪಾಂಡವರಷ್ಟೇ ಪ್ರಬಲರಾಗಿದ್ದರು.

ಅಸುರ ಮಣಿಮಂತ—ದಿಟವಾಗಿ ಮಣಿಮಂತ ಅಸುರನಲ್ಲ, ಯಕ್ಷ. ಯಕ್ಷರ ಅರಸ ನಾದ ಕುಬೇರನ ದಂಡನಾಯಕನಾಗಿದ್ದವನು, ಕಾರಣಾಂತರದಿಂದ ಅಗಸ್ತ್ಯ ಮುನಿಯ ಶಾಪವನ್ನು ತಳೆದು ತನ್ನ ಮಹಿಮೆಯನ್ನು ಕಳೆದುಕೊಂಡಿದ್ದ. ದ್ರೌಪದಿಗಾಗಿ ಭೀಮನು ಸೌಗಂಧಿಕಪುಷ್ಪವನ್ನು ತರಲು ಹಿಮಾಚಲ ಪ್ರದೇಶಕ್ಕೆ ಹೋದಾಗ, ಅಲ್ಲಿನ ಉದ್ಯಾನಗಳ ಕಾವಲಲ್ಲಿದ್ದ ಮಣಿಮಂತನಿಗೂ ಭೀಮನಿಗೂ ಹೋರಾಟ ನಡೆದು ಭೀಮನು ಮಣಿಮಂತನನ್ನು ಕೊಂದನು. ಈ ಮಣಿ ಮಂತನೇ ಮುಂದೆ ಶಂಕರಾಚಾರ್ಯರಾಗಿ ಅವತರಿಸಿ ಅಸುರರ ಮಾಯಾವಾದ ವನ್ನು ಬೋಧಿಸಿದನೆಂದೂ, ಭೀಮನು ಮತ್ತೆ ಮಧ್ವಾಚಾರ್ಯರಾಗಿ ಅವತರಿಸಿ ಈ ಮಣಿಮಂತನ ಸಾಹಸವನ್ನು ಮತ್ತೆ ನಿಗ್ರಹಿಸಿದನೆಂದೂ ಕತೆ ಹುಟ್ಟಿ ಕೊಂಡಿತು. ಆದರೆ ಈ ಕತೆಯ ಸೂಚನೆಯನ್ನು ಮಧ್ವಾಚಾರ್ಯರ ಗ್ರಂಥ ಗಳಲ್ಲೆಲ್ಲೂ ಕಾಣಲಾರೆವು. ಅವರ ಕಾಲದ ನಂತರ ಅವರ ಭಕ್ತರು ಅವರ ಹಿರಿಮೆಯನ್ನು ಹಿಗ್ಗಿಸಲು ಈ ಕತೆಯನ್ನು ಕಟ್ಟಿದರೆಂದು ತೋರುತ್ತದೆ. ಕತೆಯಲ್ಲಿ ಸ್ವಾರಸ್ಯವೂ ಇಲ್ಲ, ಔಚಿತ್ಯವೂ ಇಲ್ಲ, ಗಾಂಭೀರ್ಯವಂತೂ ಮೊದಲೇ ಇಲ್ಲ.

ಮಾಯಿಗಳ—ಮಾಯಾವಾದಿಗಳ.

ಪ್ರಳಯಭೈರವನೆಂಬ ಬಿರುದ—ಮಧ್ವಾಚಾರ್ಯರಿಗೆ ಈ ಬಿರುದಿದ್ದುದಕ್ಕೆ ಆಧಾರ ವಿಲ್ಲ. ವಾದದಲ್ಲಿ ಕೋಲಾಹಲವನ್ನುಂಟುಮಾಡುವವರು, ಪ್ರತಿವಾದಿಗಳಿಗೆ ಭಯಂಕರರಾದವರು, ಅವರ ಪ್ರಮೇಯಗಳನ್ನೆಲ್ಲ ಖಂಡಿಸುವವರು ಎಂಬರ್ಥ ವಿದ್ದೀತು.

ಮೂವತ್ತೇಳು ಗ್ರಂಥಗಳು—ಹತ್ತು ಭಾಷ್ಯಗಳು (ಉಪನಿಷತ್ತುಗಳ ಮೇಲೆ). ಪಂಚಕ (ಬ್ರಹ್ಮಸೂತ್ರಗಳ ಮೇಲೆ ನಾಲ್ಕು, ಋಗ್ವೇದದ ಮೇಲೆ ಒಂದು), ಮೂರು ನಿರ್ಣಯಗಳು (ಭಾರತ, ಭಾಗವತ, ಗೀತೆಗಳ ಮೇಲೆ), ಹತ್ತು ಪ್ರಕರಣಗಳು (ವಿಷ್ಣುತತ್ತ್ವ ಇತ್ಯಾದಿ), ಎರಡು ಕಲ್ಪ (ಜಯಂತೀ ನಿರ್ಣಯ, ಯತಿಪ್ರಣವ), ಶ್ರುತಿ (ಸದಾಚಾರಸ್ಮೃತಿ), ಎರಡು ಸ್ತೋತ್ರ (ದ್ವಾದಶ, ನಖ), ಕೃಷ್ಣಾಮೃತ ಮಹಾರ್ಣವ, ತಂತ್ರಸಾರ, ಯಮಕಭಾರತ, ನ್ಯಾಯಾವಲಿ (ವ್ಯಾಸರಾಜರ ಗ್ರಂಥಮಾಲಿಕಾಸ್ತೋತ್ರ).

ಅಲವಬೋಧ—ಮಧ್ವಾಚಾರ್ಯರ ಹೆಸರುಗಳಲ್ಲಿ ಒಂದು; ಆ—ಲವ ಎಂದರೆ ಪೂರ್ಣ.

ಢಾಣೆ—ದಂಡ.

ಇಟ್ಟಿಹುದು ಆಣೆ—ಮುಂದಕ್ಕೆ ಹೋಗಲಾರದಂತೆ ಮಾಡಿರುವ ಕಟ್ಟು.

ಶ್ವಾಸಪತಿ—ಪಂಚಪ್ರಾಣಗಳಿಗೆ ಮುಖ್ಯನಾದವನು.

ವಿಷ್ಣು ವಿಜ್ಞಾನಿ—ವಿಷ್ಣುವನ್ನು ಎಲ್ಲ ಜೀವರಿಗಿಂತ ಹೆಚ್ಚಾಗಿ ತಿಳಿದವನು.

ಮಸ್ತಕದ ಮಣಿ—ತಲೆಗೆ ತೊಡುವ ಮಣಿ.

ಖಣಿ—ಗಣಿ.

ಆಣಿ—ಮೊಳೆ.

ಕಟ್ಟಾಣಿ—ಮುತ್ತಿನ ಸರ.

ಗಗನಮಣಿ—ಸೂರ್ಯ.

ಮುಂದೆ ಅಜನಾಗಿ—ಈ ಕಲ್ಪದಲ್ಲಿ ಮೂರನೆಯ ಕಕ್ಷೆಯಲ್ಲಿರುವ ವಾಯುದೇವರು ಮುಂದಿನ ಕೃತಯುಗದಲ್ಲಿ ಅದೇ ಕಕ್ಷೆಯಲ್ಲಿ ಬ್ರಹ್ಮಪಟ್ಟವನ್ನು ಪಡೆಯುವ ರೆಂದು ನಂಬಿಕೆ.

ವೇದವಾಕ್ಯವಿದು—ಪರಮಪ್ರಮಾಣವಾದ ಮಾತು.

ಒಂದು ಬಯಸದೆಲೆ—ಯಾವ ಬಯಕೆಯೂ ಇಲ್ಲದೆ, ನಿಷ್ಕಾಮವಾಗಿ.

ವಿಚ್ಚಟಿದ—ನಿಶ್ಚಲವಾದ, ಸ್ಥಿರವಾದ.

ಫಣೆಯ ದುರ್ಲೇಖವ ತೊಡೆದು—ಹಣೆಯ ಮೇಲಿನ ಕೆಟ್ಟ ಬರಹವನ್ನು ಅಳಿಸಿ; ಪೂರ್ವಜನ್ಮದಲ್ಲಿ ಮಾಡಿದ ಪಾಪಕರ್ಮಗಳ ಫಲವನ್ನು ಈ ಜನ್ಮದಲ್ಲಿ ಅನು

ಭವಿಸಬೇಕೆಂದು ಹುಟ್ಟುವಾಗಲೇ ಪ್ರತಿಯೊಬ್ಬರ ಹಣೆಯ ಮೇಲೂ ಬ್ರಹ್ಮನು ಬರೆದಿರುತ್ತಾನೆಂದೂ ಯಾವ ಪುರುಷಪ್ರಯತ್ನವೂ ಸಾಹಸವೂ ಆ ಹಣೆಬರಹವನ್ನು ತೊಡೆದುಹಾಕಲಾರದೆಂದೂ ನಂಬಿಕೆ.

ಜವನ—ಯಮನ.

ಪವನನಂತರ್ಯಾಮಿ—ವಾಯುದೇವರೊಳಗೆ ನಿಂತು ಪ್ರೇರಕನೂ, ನಿಯಾಮಕನೂ ಆದ ಪರಮಾತ್ಮ.

[ಈ ಕೃತಿಯಲ್ಲಿ ಪುರಂದರವಿಠಲನೆಂಬ ಅಂಕಿತವಿದ್ದರೂ, ಅವರ ಕೃತಿಯಂತೆ ಕಾಣುವುದಿಲ್ಲ. ಅತಿಯಾದ ಮಾಧ್ವಸಂಪ್ರದಾಯದ ನಿಷ್ಠೆ ಇಲ್ಲಿ ಎದ್ದುಕಾಣುತ್ತದೆ ಅದು ಒದಗಿದ ಕಾಲದಲ್ಲಿ ಸಿದ್ಧವಾದ ಕೃತಿ ಇದೆಂದು ತೋರುತ್ತದೆ. ಕಡೆಯ ನುಡಿಯಲ್ಲಿ ಒಂದು ಪಾಠಾಂತರವಿದ್ದು ಅದರಲ್ಲಿ 'ವಿಷ್ಣುದಾಸ' ಎಂಬ ಮಾತಿದೆ (ಧಾರವಾಡದ ಪುರಂದರದಾಸರ ಸಾಹಿತ್ಯಮಾಲೆ, ಸಂಪುಟ ೧, ಪೂಜಾತತ್ವ, ಪು. ೫೦; 'ನವರತ್ನ ಮಾಲೆಯಿದು ಶ್ರೀ ವಿಷ್ಣುದಾಸರಿಗೆ ಶ್ರವಣಮಂಗಳವಪ್ಪ '). ಇದು ಬಹುಶಃ ಈ ಕೃತಿಯನ್ನು ಬರೆದವರ ಅಂಕಿತವಿದ್ದೀತು. ಆದರೆ ಈ ಕೃತಿಯು ಪುರಂದರದಾಸರದ್ದೆಂದು ಅನೇಕ ಸಂಕಲನಗಳಲ್ಲಿರುವುದರಿಂದ ಇಲ್ಲಿ ಕೊಟ್ಟಿದೆ ]



ಆನಂದಭೈರವಿ ರೂಪಕ

ಎನ್ನ ಜನ್ಮ ಸಫಲವಾಯಿತು
ಎನ್ನನುದ್ಧರಿಸಲಾಗದೆ ಪ

ಎನ್ನ ಜನ್ಮ ಸಫಲವಾಯಿತನ್ಯರನು ಬಯಸಲೇಕೆ
ತನ್ನತಾನೊಲಿದ ವ್ಯಾಸಮುನಿರಾಯನ ಕೈಯ ಸೇರಿರೊ ಅ

ಸಿರಿಯರಸನ ಕರುಣದಾಳು
ಸರಸಿಜಸಂಭವನ ಪಿತನ
ಸುರರೊಡೆಯನ ಸಕಲವೇದ
ವರಸುವಂಥ ಹರಿಯ
ಪರದೇವತೆ ಇದೆಯೆಂದು
ಕರಕಮಲದೊಳಿಟ್ಟು ತೋರುವ
ಪರಮಹಂಸ ವ್ಯಾಸರಾಯರ
ಚರಣವ ನೆರೆನಂಬಿರೆಲ್ಲರು ೧

ಜ್ಞಾನ ಭಕುತಿ ವೈರಾಗ್ಯವ ನಿ
ಧಾನದಿ ನಮಗಿತ್ತು ಪೊರೆವ
ದಾನವಾರಿಯ ಗುಣಗಣವ ಬಲ್ಲ
ಮೌನಿಗಳ ವರಶಿರೋರನ್ನನ
ತಾನೆ ದೇವರೆಂಬ ಅಸುರರ
ಕಾನನವ ತರಿದೊಟ್ಟುವ
ಆನಂದತೀರ್ಥರ ಪಟ್ಟ
ದಾನೆ ವ್ಯಾಸರಾಯರಿರಲು ೨

ಹಿಂದೆ ಸಾವಿರ ಜಿಹ್ವೆಯಲಿ ಮು
ಕುಂದನಹಿರಾಜ ಪೊಗಳು
ವಂದದಿಂದ ಹರಿಯ ಗುಣಗ
ಳಿಂದ ತುತಿಸಿ ಸುಜನರ ಕೃಪೆ
ಯಿಂದ ಪೊರೆವುತ್ತಭಿನವ ಪು
ರಂದರ ವಿಠಲನ್ನ ಜಗಕೆ
ತಂದು ತೋರುವ ವೈಷ್ಣವ ಕುಮು
ದೇಂದು ವ್ಯಾಸರಾಯರಿರಲು ೩

[ಇದು ವ್ಯಾಸರಾಯರನ್ನು ಕುರಿತ ಪದ ]

ಸಿರಿಯರಸನ—ಲಕ್ಷ್ಮೀರಮಣನ.

ಕರಕಮಲದೊಳಿಟ್ಟು ತೋರುವ—ಹರಿಯು ಸರ್ವೋತ್ತಮನೆಂಬುದನ್ನು ಅಂಗೈಯಲ್ಲಿಟ್ಟು ತೋರಿಸುವ, ಎಂದರೆ ಜನರಿಗೆ ಮನದಟ್ಟುಮಾಡಿಸುವ, ಸ್ಪಷ್ಟಪಡಿಸುವ.

ಮೌನಿಗಳ—ಮುನಿಗಳ.

ಅಹಿರಾಜ—ಆದಿಶೇಷ. ವ್ಯಾಸರಾಯಸ್ವಾಮಿಗಳು ಆದಿಶೇಷನ ಅಂಶಾವತಾರವೆಂದು ದಾಸಕೂಟದವರಲ್ಲಿ ನಂಬಿಕೆಯಿದ. ಆದಿಶೇಷನು ನಾರಾಯಣನನ್ನು ತನ್ನ ಸಾವಿರ ಹೆಡೆಗಳ ನಾಲಗೆಗಳಿಂದ ಸ್ತೋತ್ರ ಮಾಡಿದ ಸಂದರ್ಭ ಇದು. ಕಶ್ಯಪ, ಕದ್ರು ಇವರ ಮಗನಾದ ಆದಿಶೇಷನಿಗೆ ಇತರ ಸರ್ಪಗಳು (ಕದ್ರುವಿನ ಮಕ್ಕಳು) ತಮ್ಮ ಮಲತಾಯಿ ವಿನತೆಯ (ಎಂದರೆ ಗರುಡನ ತಾಯಿಯ) ವಿಚಾರವಾಗಿ ನಡೆದುಕೊಂಡ ಬಗೆಗೆ ಬೇಸರಪಟ್ಟು, ಅವರಿಂದ ದೂರವಾಗಿ, ಬ್ರಹ್ಮನನ್ನು ಕುರಿತು ತಪಸ್ಸುಮಾಡಿ, ವಿಷ್ಣುವಿನ ಹಾಸುಗೆಯಾಗಿರುವಂತೆ ವರವನ್ನು ಪಡೆದುಕೊಂಡ.

ಕುಮುದೇಂದು—ಕನ್ನೈದಿಲೆಗೆ ಚಂದ್ರನಂತೆ ಇರುವ.

[ಈ ಕೃತಿಯಲ್ಲಿ 'ಅಭಿನವ ಪುರಂದರವಿಠಲನ್ನ' ಎಂಬ ಮಾತಿರುವುದರಿಂದ, ಇದು ದಿಟವಾಗಿ ಪುರಂದರದಾಸರದ್ದೇ ಕೃತಿಯೋ ಎಂಬ ಸಂಶಯಕ್ಕೆ ಆಸ್ಪದವಿದ್ದರೂ, ಪುರಂದರದಾಸರದ್ದೆಂದು ದಾಸಕೂಟದವರ ಕಲ್ಪನೆಯಿರುವುದರಿಂದ ಇಲ್ಲಿ ಸೇರಿಸಲಾಗಿದೆ.]



ಕಾಂಬೋದಿ ಝಂಪೆ

ಮಧ್ವರಾಯರ ದೇವತಾರ್ಚನೆಯ ಪ್ರ ಪ

ಸಿದ್ಧ ರಘುನಾಥರು ಪೂಜಿಸುವ ಸೊಬಗಿನ ಅ

ಮೂಲ ರಘುಪತಿ ಒಂದು ಮುದ್ದು ಜಾನಕಿ ಒಂದು
ಲೀಲೆ ದಿಗ್ವಿಜಯ ರಾಮಮೂರ್ತಿ ಒಂದು
ಶಾಲಗ್ರಾಮ ಹಯಗ್ರೀವ ಮೊದಲಾದುವು ನಾಲ್ಕು
ಚೆಲುವ ಸುದರ್ಶನಗಳೆರಡು ಚಕ್ರಾಂಕಿತಗಳೈದು ೧

ಅಭಿಷೇಕ ಶಂಖ ಒಂದು ಅಕ್ಷಯ ಪಾತ್ರೆಯು ಒಂದು
ಶುಭನಿಧಿಯು ಬಲಮುರಿ ಶಂಖ ಒಂದು
ಉಭಯ ಪಶ್ಚಿಮಧೇನ ಒಂದು ಉತ್ತಮವಾದ ಮುದ್ರೆ ಒಂದು
ಚಕ್ರಾಂಕಿತಗಳೆರಡು ಬಾಣವೆರಡು ೨

ವೇದವ್ಯಾಸಮೂರ್ತಿ ನಾಲ್ಕು, ಕ್ಷೀರದಿ ಲೋಲಾಡುವ ಕೂರ್ಮ ಒಂದು
ಸ್ಮರಿಸಿ ಇಪ್ಪತ್ತೆಂಟು ಮೂರುತಿಗಳನು
ಪುರಂದರವಿಠಲನ್ನ ಪೂರ್ಣ ಭಕ್ತರೆಂಬ
ಈ ರಘುನಾಥತೀರ್ಥರು ಎಷ್ಟು ಪುಣ್ಯವಂತರೊ ೩

[ಇದು ಉತ್ತರಾದಿಮಠದ ಪರಂಪರೆಯಲ್ಲಿ ವಿದ್ಯಾನಿಧಿತೀರ್ಥರ ತರುವಾಯ ಪೀಠಕ್ಕೆ ಬಂದ ರಘುನಾಥತೀರ್ಥರನ್ನು ಕುರಿತ ಪದ. ಇವರು ಶ್ರೀಪಾದರಾಜರ ಸಮಕಾಲಿಕರು; ವ್ಯಾಸರಾಯ ಸ್ವಾಮಿಗಳನ್ನೂ ಚೆನ್ನಾಗಿ ಬಲ್ಲವರು. ಶ್ರೀಪಾದ ರಾಜರೂ, ವ್ಯಾಸರಾಯರೂ, ರಘುನಾಥತೀರ್ಥರೂ ಕಲೆತು ಕ್ಷೇತ್ರಾಟನೆ ಮಾಡುತ್ತಿದ್ದ ರೆಂದು ತಿಳಿದುಬರುತ್ತದೆ. ರಘುನಾಥತೀರ್ಥರು ಮಳಖೇಡದಲ್ಲಿ ವೃಂದಾವನಸ್ಥ ರಾದರು.]

ಇಪ್ಪತ್ತೆಂಟು ಮೂರುತಿಗಳನು—ಮಧ್ವಾಚಾರ್ಯರ ಸಾಕ್ಷಾಚ್ಛಿಷ್ಯರಾದ ಮಾಧವ ತೀರ್ಥರು ಈ ಮೂರ್ತಿಗಳನ್ನು ಪೂಜೆಮಾಡುತ್ತಿದ್ದರೆಂಬ ಶ್ಲೋಕವೊಂದಿದೆ. 'ಲಕ್ಷ್ಮೀನಾರಾಯಣ ಶ್ರೀಹಯಮುಖ ದಧಿಕೃದ್ವಾಮನ ಶ್ರೀಧರಾಖ್ಯಾನ್' ಎಂದು ಆರಂಭವಾಗುವ ಈ ಶ್ಲೋಕದಲ್ಲಿ ಲಕ್ಷ್ಮೀನಾರಾಯಣ, ದಧಿವಾಮನ, ಐದು ವ್ಯಾಸರ ಮಳಲು ಮುಟ್ಟಿಗೆ, ಮೂಲ ರಾಮ, ಮೂಲ ಸೀತೆ, ಐದು ಸುದರ್ಶನಗಳು, ಎರಡು ಬಾಣಗಳು, ಎರಡು ಬಲಮುರಿ ಶಂಖಗಳು, ಹಯ ಗ್ರೀವ, ಶ್ರೀಧರ, ದಿಗ್ವಿಜಯ ರಾಮ, ರಾಮಟಂಕಿವರಹ, ಐದು ಚಕ್ರಾಂಕಿತ ಗಳು, ಅಕ್ಷಯಪಾತ್ರೆ ಎಂದು ಒಕ್ಕಣೆಯಿದೆ.

## ೨೪

ಧನ್ಯಾಸಿ — ಅಟ್ಟ

ಮಾಡಿದ ಎನ್ನನು ಫಕೀರನ ಸದ್ಗುರು
ಮಾಡಿದ ಎನ್ನ ಫಕೀರ ಪ

ಅನುಭವ ಖಪ್ಪರಿ ಹೃದಯದ ಜೋಳಿಗೆ ಎನ್ನಯ ಕಂಕುಳಲಿಟ್ಟ
ಆಮಿಷ ಧಟ್ಟಿ ಅರಗಿನ ರೊಟ್ಟಿ ಎನ್ನಯ ಕೈಯಲ್ಲಿಟ್ಟ ೧

ನಾದದ ತಂಬೂರಿ ಮೋದ ಮಂದಾರವು ನಿಚ್ಚಂಗದ ಟೊಪ್ಪಿಗೆನಿಟ್ಟ
ಬೋಧದ ಭಂಗಿ ಅಮೃತದ ಲುಂಗಿ ಸಮಾನ ಗುಳಿಗೆಯನಿಟ್ಟ ೨

ಈ ಪರಿ ಮಾಡಿ ಬಯಲನು ತೋರಿ ಕರವನು ನೆತ್ತಿಯಲಿಟ್ಟ
ಭೂಪ ಪುರಂದರವಿಟ್ಠಲರಾಯನು ತಿರುಗೆಂದಪ್ಪಣೆ ಕೊಟ್ಟ ೩

[ಹರಿಯೇ ಗುರುವಾಗಿ ವ್ಯಾಸರಾಯಸ್ವಾಮಿಗಳ ಮೂಲಕ ತಮ್ಮನ್ನು ಸಾಧನೆಯ ದಾರಿಗೆ ಎಳೆತಂದು ಬಿಟ್ಟನೆಂಬುದು ಈ ಪದದ ತಾತ್ಪರ್ಯ. ತಮ್ಮ ದೀಕ್ಷಾಗುರುಗಳನ್ನು ಇಲ್ಲಿ 'ಸದ್ಗುರು' ಎಂದು ಕರೆದಿದ್ದಾರೆ. "ನನ್ನನ್ನು ಫಕೀರನನ್ನಾಗಿ ಮಾಡಿದರು" ಎಂದು ಸಂತೋಷದಿಂದ ಹೇಳುತ್ತ, ಆ ಸ್ಥಿತಿಯ ವರ್ಣನೆ ಮಾಡಿದ್ದಾರೆ. ಫಕೀರರೆಂದರೆ ಸಂಸಾರದ ಗೊಡವೆಯಿಲ್ಲದೆ, ದೇವರಲ್ಲೇ ನೆಟ್ಟ ಮನಸ್ಸುಳ್ಳವರಾಗಿ, ತೀರ ಬಡವರಾಗಿ ಯಾರ ಹಂಗೂ ಇರದೆ ಅಲೆದಾಡುವ ಮುಸಲ್ಮಾನ ಸಾಧಕರು; ಅವರಿಗೂ ಹರಿದಾಸರಿಗೂ ಇರುವ ಸಾದೃಶ್ಯ ಇಲ್ಲಿ ಮಾರ್ಮಿಕವಾಗಿ ಬಂದಿದೆ. ಫಕೀರರ ಖಪ್ಪರಿ (ಭಿಕ್ಷೆಗಾಗಿ ಬಳಸುವ ಮಡಕೆಚೂರು, ಖರ್ಪರ), ಜೋಳಿಗೆ, ಧಟ್ಟಿ (ಸೊಂಟಕ್ಕೆ ಸುತ್ತಿಕೊಳ್ಳುವ ತುಂಡುಬಟ್ಟೆ), ರೊಟ್ಟಿ, ತಂಬೂರಿ, ಟೊಪ್ಪಿಗೆ, ಭಂಗಿ, ಲುಂಗಿ ಇವಕ್ಕೆಲ್ಲ ಅಧ್ಯಾತ್ಮದ ಅರ್ಥವನ್ನು ಒದಗಿಸಿದ್ದಾರೆ. ಸದ್ಗುರುವು ತಮ್ಮನ್ನು ಫಕೀರರನ್ನಾಗಿ ಮಾಡಿ ಸಂಸಾರದ ದಿಟವಾದ ಸ್ಥಿತಿಯನ್ನು (ಅಸಾರತೆಯನ್ನು) ತೋರಿಸಿದನೆಂದೂ, ತಲೆಯ ಮೇಲೆ ಕೈಗಳನ್ನಿರಿಸಿ ಆಶೀರ್ವಾದ ಮಾಡಿದನೆಂದೂ ನೆನೆದುಕೊಂಡಿದ್ದಾರೆ.]

ಕೇದಾರಗೌಳ ರೂಪಕ

ನೋಡಿರೈ ಕಲ್ಪಭೂರುಹರ ಪ

ನಾಡೊಳಗಚ್ಯುತದಾಸರು ನರರೇ ಅ

ಕ್ಷೀರ ಕೂಡಿದ ಜಲವ ನೀರೆನ್ನಬಹುದೆ
ನೀರೊಳುದಿಸಿದ ಮುತ್ತು ನೀರಾಗುವುದೆ
ಆರಿದ ಭಾಂಡ ಮೃತ್ತಿಕೆ ಕೂಡಲರಿವುದೆ
ಶೌರಿಯ ಶರಣರ ನರರೆನ್ನಬಹುದೆ ೧

ಹರಿಗೆರೆದ ನೀರು ತೀರ್ಥವೆನಿಸಿತು ನರ
ಹರಿವುಂಡ ಚರುವು ಪ್ರಸಾದವಾಯ್ತು
ಹರಿದಾಸರುಗಳೆಂಬ ನಾಮಧಾರಕನನ್ನು
ನರರೆನ್ನಬಹುದೇನೋ ಸುರರಿಗಧಿಕರನ್ನು ೨

ಪರಬ್ರಹ್ಮ ವಿಷ್ಣುವು ಚರಬ್ರಹ್ಮ ವೈಷ್ಣವ
ಪರಿಕಿಸಲರಿಯರು ಮತಿಭ್ರಷ್ಟರು
ಧರೆಯೊಳು ಪುರಂದರವಿಠಲನ ದಾಸರ
ನರರೆಂದವಗೆ ಘೋರ ರೌರವ ನರಕ ೩

ಲ್ಪಭೂರುಹರ—ಕಲ್ಪವೃಕ್ಷ (ಭೂರುಹ) ವೆಂದರೆ ಬಯಸಿದ್ದನ್ನೆಲ್ಲ ಈಡೇರಿಸುವ ದೇವಲೋಕದ ಮರ.

ೀರಕೂಡಿದ...—ನೀರು ಹಾಲಿನೊಂದಿಗೆ ಬೆರೆತಾಗ ಅದು ಹಾಲೇ ; ನೀರಲ್ಲಿ ತೋರಿದ ಮುತ್ತು ನೀರಲ್ಲದೆ ಗಟ್ಟಿಯಾದ ಶ್ರೇಷ್ಠವಾದ ಕಲ್ಲೇ ; ಮಣ್ಣಿನಿಂದ ಮಡಕೆಯನ್ನು ಮಾಡಿ ಬೆಂಕಿಯಲ್ಲಿ ಕಾಯಿಸಿ ಒಣಗಿದ ಮೇಲೆ ಮತ್ತೆ ಅದನ್ನು ಮಣ್ಣಿನಲ್ಲಿ ಇಟ್ಟರೆ ಮಣ್ಣಾಗುವುದಿಲ್ಲ, ಪುಡಿಮಾಡಿದರೂ ಹಸಿಮಣ್ಣಿನಲ್ಲಿ ಬೆರೆಯುವುದಿಲ್ಲ. ಹಾಗೆ ಹರಿದಾಸರು ಹುಟ್ಟುವಾಗ ಮನುಷ್ಯರಾದರೂ ಭಕ್ತಿ

ಯಿಂದಾಗಿ ಹರಿಯ ಪ್ರಸಾದದಿಂದಾಗಿ ಮನುಷ್ಯಮಟ್ಟವನ್ನು ಮೀರುತ್ತಾರೆ; ಅವರು ದೇವತೆಗಳಿಗಿಂತ ಮಿಗಿಲಾದವರು ಎಂದು ತಾತ್ಪರ್ಯ.

ನಾಮಧಾರಕರನ್ನು—ಹೆಸರನ್ನು ಹೊತ್ತವರನ್ನು.

ಪರಬ್ರಹ್ಮ.. ಚರಬ್ರಹ್ಮ...—ಪರಬ್ರಹ್ಮನೆಂದರೆ ಸರ್ವೋತ್ತಮನಾದ (ಪರ) ಹರಿ, ಮೊದಲ ಕಕ್ಷೆಯಲ್ಲಿರುವವನು. ಚರಬ್ರಹ್ಮನೆಂದರೆ ಅವನಿಂದ ಪ್ರೇರಿತನಾಗಿ ಅವನ ಸಂಕಲ್ಪಾನುಸಾರ ಸೃಷ್ಟಿಮಾಡುವ (ಚರ) ಚತುರ್ಮುಖ ಬ್ರಹ್ಮ. ಅವನು ವಿಷ್ಣುಭಕ್ತನಾಗಿ ವೈಷ್ಣವ; ವಿಷ್ಣುವೇ ಅವನಿಗೆ ಅಂತರ್ಯಾಮಿ, ನಿಯಾಮಕ. ತಾರತಮ್ಯ ಕ್ರಮದಲ್ಲಿ ಅವನು ಜೀವೋತ್ತಮನಾದರೂ ಜೀವನೇ, ಈಶಕೋಟಿಯಲ್ಲಿ ಸೇರುವುದಿಲ್ಲ. ಇವರಿಬ್ಬರ ನಡುವೆ ಇರುವ ವ್ಯತ್ಯಾಸವನ್ನು (ಹರಿಯು ಸ್ವತಂತ್ರ, ಮುಖ್ಯ ಅಭಿಮಾನಿ; ಬ್ರಹ್ಮನು ಅಸ್ವತಂತ್ರ, ಅವಾಂತರ ಅಭಿಮಾನಿ) ದಡ್ಡಜನರು ಅರಿಯಲಾರರು (ಪರಿಕಿಸಲು ಅರಿಯರು, ಪರೀಕ್ಷಿಸಲು ಬಲ್ಲವರಲ್ಲ).



# ಗಣಪತಿ

ಸಜ್ಜನರು ಕೈಗೊಂಡ ಕೆಲಸಗಳನ್ನು ತೊಂದರೆಯಿಲ್ಲದೆ ನಡೆಸಿಕೊಡುವವನು ಈ ದೇವತೆ ತೊಂದರೆಗಳನ್ನು ತಂದೊಡ್ಡುವವನೂ ತೊಲಗಿಸುವವನೂ ಇವನೇ ಆದುದರಿಂದ ವಿಘ್ನೇಶ್ವರ (ವಿಘ್ನಕರ್ತಾ, ವಿಘ್ನಹರ್ತಾ) ಮುಖ್ಯ ತಾತ್ತ್ವಿಕ ದೇವತೆಗಳಲ್ಲಿ ಹದಿನೆಂಟನೆಯ ಕಕ್ಷೆಗೆ ಸೇರಿದ ಇವನು ಆಕಾಶ ತತ್ತ್ವದ ಅಭಿಮಾನಿದೇವತೆ. ಪಂಚಭೂತಗಳಲ್ಲಿ ಅತ್ಯಂತ ಸೂಕ್ಷ್ಮವಾದುದು, ವ್ಯಾಪಕವಾದುದು, ಅವಕಾಶಪ್ರದವಾದುದು ಆಕಾಶ. ವಿಶ್ವನಾಮಕ ಪರಮಾತ್ಮನೇ (ಅನಿರುದ್ಧ) ಇವನಲ್ಲಿದ್ದು ಎಚ್ಚರದ ಎಲ್ಲ ಕೆಲಸಗಳನ್ನೂ ನಡೆಸುವುದರಿಂದ ಇವನನ್ನೇ ವಿಶ್ವನೆಂದೂ ವಿಶ್ವಾತ್ಮಕನೆಂದೂ ಕರೆಯುತ್ತಾರೆ. ಜಾಗ್ರದವಸ್ಥೆ ವಿಶ್ವ ; ಎಲ್ಲ ಜೀವರಿಗೆ ಜಾಗ್ರದವಸ್ಥೆಯ ಪ್ರೇರಕನಾದವನು ಇವನೇ. ಈ ಅವಸ್ಥೆಯಲ್ಲಿ ಎರಡು ಪಾದಗಳು, ನಾಲ್ಕು ಕೈಗಳು, ಒಂದು ಮುಖ (ಗಜಮುಖ) ಇರುವುದರಿಂದ ಸಪ್ತಾಂಗನೆಂದು ಮಾಂಡೂಕ್ಯ ಉಪನಿಷತ್ತಿನ ಒಕ್ಕಣೆಯಿದೆ. ಮಧ್ವಾಚಾರ್ಯರು ಈ ಉಪನಿಷತ್ತಿನ ಮೇಲೆ ಬರೆದ ಭಾಷ್ಯದಲ್ಲಿ 'ವಿನಾಯಕಸ್ತು ವಿಶ್ವಸ್ಯ ಧ್ಯಾನಾದ್ವೈದ್ಗಜವಕ್ತ್ರತಾಂ' ಎಂಬ ಮಹಾಯೋಗದ ವಾಕ್ಯವನ್ನುದ್ಧರಿಸಿ ವಿಶ್ವನಿಗೆ ಆನೆಯ ಮೊಗ ಬಂದುದನ್ನು ವಿವರಿಸಿದ್ದಾರೆ. ಮತ್ತು ತೊಂದರೆಗಳ ಪರಿಹಾರಕ್ಕೆ, ಬಯಕೆಗಳು ಕೈಗೂಡುವುದಕ್ಕೆ ಇವನನ್ನು ಪೂಜೆ ಮಾಡಬೇಕೆಂದು ಮಧ್ವಾಚಾರ್ಯರು ತಂತ್ರಸಾರದಲ್ಲಿ ಹೇಳಿದ್ದಾರೆ ('ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾಹ್ವಯಂ').

ಪುರಾಣಗಳಲ್ಲಿ, ಗಣಪತಿಯು ಗೌರಿಯ ಮಗನೆಂದು ಹೇಳಿ ಅವನು ಹುಟ್ಟಿದ ಬಗೆಯನ್ನು ಹಲವಾರು ಕತೆಗಳಲ್ಲಿ ಕಾಣಿಸಿದೆ ಶಿವನ ಗಣಗಳಿಗೆ ಇವನೇ ಒಡೆಯನಾದುದರಿಂದ ಗಣಪತಿ, ಗಣೇಶ, ವಿನಾಯಕ. ದಾಸರು ಆರೋಹಣ ಕ್ರಮದ ತಾರತಮ್ಯವನ್ನನುಸರಿಸಿ, 'ವಂದಿಸುವುದಾದಿಯಲಿ ಗಣನಾಥನ' ಎಂದಿದ್ದಾರೆ. ನಮ್ಮಲ್ಲಿ ಬಹುಕಾಲದ ಸಂಪ್ರದಾಯವೂ ಇದೇ ಆಗಿದೆ. ಯಾವ ಕೆಲಸದ ಆರಂಭದಲ್ಲೂ ಗಣಪತಿಯ ಪೂಜೆ ವಾಡಿಕೆಯೇ. ದಾಸರು ಸ್ತುತಿಸುವಾಗ ಗಣಪತಿಯು ಮುಖ್ಯ ತಾತ್ತ್ವಿಕ ದೇವತೆಗಳಲ್ಲೊಬ್ಬ ಎಂಬುದನ್ನು ಮರೆಯದೆ ಜನಪ್ರಿಯವಾದ ಪುರಾಣದ ಕಲ್ಪನೆಯನ್ನೂ ಅಳವಡಿಸಿಕೊಂಡಿದ್ದಾರೆ.

ನಾಟ ಆದಿ

ವಂದಿಸುವುದಾದಿಯಲಿ ಗಣನಾಥನ ಪ

ಸಂದೇಹ ಸಲ್ಲ ಶ್ರೀ ಹರಿಯಾಜ್ಞೆಯಿದಕುಂಟು ಅ

ಹಿಂದೆ ರಾವಣ ತಾನು ವಂದಿಸದೆ ಗಜಮುಖನ
ನಿಂದು ತಪವನು ಗೈದು ವರ ಪಡೆಯಲು
ಒಂದು ನಿಮಿಷದಿ ಬಂದು ವಿಘ್ನವನು ಆಚರಿಸಿ
ತಂದ ವರಗಳನೆಲ್ಲ ಧರೆಗೆ ಇಳಿಸಿದನು ೧

ಅಂದಿನಾ ಬಗೆಯರಿತು ಹರಿ ಬಂದು ಧರ್ಮಜಗೆ
ಮುಂದೆ ಗಣಪನ ಪೂಜಿಸೆಂದು ಪೇಳೆ
ಒಂದೆ ಮನದಲಿ ಬಂದು ಪೂಜಿಸಲು ಗಣನಾಥ
ಹೊಂದಿಸಿದ ನಿರ್ವಿಘ್ನದಿಂದ ರಾಜ್ಯವನು ೨

ಇಂದು ಜಗವೆಲ್ಲ ಉಮೆನಂದನನ ಪೂಜಿಸಲು
ಚಂದದಿಂದಲಿ ಸಕಲ ಸಿದ್ಧಿಗಳನಿತ್ತು
ತಂದೆ ಸಿರಿ ಪುರಂದರವಿಠ್ಠಲನ ಸೇವೆಯೊಳು
ಬಂದ ವಿಘ್ನವ ಕಳೆದಾನಂದವನು ಕೊಡುವ ೩

ಆದಿಯಲಿ—ಎಲ್ಲ ಕೆಲಸಗಳ ಮೊದಲಲ್ಲಿ. ಕೆಲಸಗಳಲ್ಲಿ ತೊಂದರೆಗಳು ಒದಗುವುದು ಸಹಜ ; ತೊಂದರೆಗಳು ಬಾರದಿರಲು, ಬರುವ ತೊಂದರೆಗಳು ಅಲ್ಲಲ್ಲೇ ಕರಗಿ ಹೋಗಲು ದೇವರ ಒಲುಮೆಯು ಅಗತ್ಯವಿದೆ.

ಹಿಂದೆ ರಾವಣ...—ವೈವಸ್ವತ ಮನ್ವಂತರದಲ್ಲಿ ವಿಶ್ರವಸನ ಮಗನಾಗಿ ಹುಟ್ಟಿದ ರಾವಣನು ಗೋಕರ್ಣದಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿ ಆತ್ಮಲಿಂಗವನ್ನು ಪಡೆದುಕೊಂಡ ಸಂದರ್ಭದಲ್ಲಿ, ಗಣಪತಿಯನ್ನು ಪೂಜಿಸದೆ ತಪಸ್ಸಿಗೆ ತೊಡಗಿದನಾಗಿ, ತಾನು ಪಡೆದುಕೊಂಡ ಆತ್ಮಲಿಂಗವನ್ನು ತನ್ನ ಊರಾದ

ಲಂಕೆಗೆ ಕೊಂಡೊಯ್ಯಲಾಗದೆ ಅದು ಗೋಕರ್ಣದಲ್ಲೇ ನೆಲೆಯಾಗಿ ನಿಂತಿತು. ಅವನ ತಲೆಯ ಮೇಲೆ ಹೊತ್ತಿದ್ದ ಲಿಂಗವನ್ನು ಭೂಮಿಗಿಳಿಸಿ ನೆಲೆಗೊಳಿಸಿದವನು ಹುಡುಗನಂತೆ ಮೈದಾಳಿ ಬಂದ ಗಣಪತಿಯೇ.

ಅಂದಿನಾ ಬಗೆಯರಿತು ..—ಯುಧಿಷ್ಠಿರನು ಗಣಪತಿಯನ್ನು ಪೂಜಿಸಿದುದರಿಂದ ಎಲ್ಲ ವಿಘ್ನಗಳೂ ತೊಲಗಿ ಪಾಂಡವರಿಗೆ ರಾಜ್ಯ ಮತ್ತೆ ದೊರಯಿತು. ಈ ವಿವರ ಮಹಾಭಾರತದಲ್ಲಿ ಬಂದಿಲ್ಲ ; ಪುರಾಣದ ಕತೆ (ಭವಿಷ್ಯೋತ್ತರ ಪುರಾಣ)

ಉಮೆನಂದನ—ಉಮೆಯೆಂದರೆ ಪಾರ್ವತಿ, ಅವಳ ಮಗ. ಗಣಪತಿ.



ನಟ್ಟ

ಆದಿಯಲಿ ಗಜಮುಖನ ಅರ್ಚಿಸಿ ಆರಂಭಿಸಲು
ಆವ ಬಗೆ ಕಾರ್ಯತತಿ ಸಿದ್ಧಿಗೊಳಿಸಿ
ಮೋದದಿಂ ಸಲಿಸುವ ಮನದಿಷ್ಟವ
ಸಾಧುಜನರೆಲ್ಲ ಕೇಳಿ ಸಕಲ ಸುರರಿಂಗೆ
ಮಾಧವನೇ ನೇಮಿಸಿಪ್ಪ ಈ ಅಧಿಕಾರವ
ಆದರದಿಂದ ಅವರವರೊಳು ನಿಂದು ಕಾರ್ಯಗಳ
ಭೇದಗೊಳಿಸದೆ ಮಾಳ್ಪ ಪುರಂದರವಿಠಲ

(ಉಗಾಭೋಗ)

ಆವ ಬಗೆ ಕಾರ್ಯತತಿ—ಕೈಕೊಂಡ ಯಾವ ಕೆಲಸಗಳ ಮಾಲೆಯನ್ನಾದರೂ

ಸಿದ್ಧಿಗೊಳಿಸಿ—ಬಯಸಿದ ಫಲಗಳನ್ನು ಈಡೇರಿಸಿ

ಮಾಧವನೇ...—ಗಣಪತಿಯು ತತ್ತ್ವೇಶರಲ್ಲಿ ಒಬ್ಬ ; ಆಕಾಶಾಭಿಮಾನಿ ದೇವತೆ ; ಪದಿನೆಂಟನೆಯ ಕಕ್ಷೆಯಲ್ಲಿದ್ದು ಮುಖ್ಯ ತಾತ್ತ್ವಿಕ ದೇವತೆಗಳಲ್ಲಿ ಕಡೆಯವನೆನಿಸಿದ್ದಾನೆ. ಇವನ ಅಂತರ್ಯಾಮಿಯಾಗಿ ಪರಮಾತ್ಮನೇ ಇರುವ. ಪರಂಪರೆಯಿಂದ ಪರಮಾತ್ಮನೇ ಅವನಿಗೆ ಬಿಂಬ. ವಿವರಣೆಗೆ ಪ್ರಸ್ತಾವನೆ ನೋಡಿ.



ಷೀಲು ಆದಿ

ಗಜವದನ ಬೇಡುವೆ ಗೌರೀತನಯು ಪ

ತ್ರಿಜಗ ವಂದಿತನೆ ಸುಜನರ ಪೊರೆವನೆ ಅ

ಪಾಶಾಂಕುಶಧರ ಪರಮಪವಿತ್ರ
ಮೂಷಕವಾಹನ ಮುನಿಜನ ಪ್ರೇಮ ೧

ಮೋದದಿ ನಿನ್ನಯ ಪಾದವ ತೋರೋ
ಸಾಧುವಂದಿತನೆ ಆದರದಿಂದಲಿ ೨

ಸರಸಿಜನಾಭ ಶ್ರೀ ಪುರಂದರವಿಠಲನ
ನಿರುತ ನೆನೆಯುವಂತೆ ದಯಮಾಡೋ ೩

ಗಜವದನ—ಆನೆಯ ಮೊಗದವನು. ಆನೆಯ ಮೊಗವೆಂದರೆ ಮಾಧ್ವಸಿದ್ಧಾಂತದ ಪ್ರಕ್ರಿಯೆಯಲ್ಲಿ ಜಾಗ್ರದವಸ್ಥೆಯ (ವಿಶ್ವ) ಸಂಕೇತ.

ತ್ರಿಜಗವಂದಿತನೆ—ಮೂರು ಲೋಕಗಳ ನಿವಾಸಿಗಳಿಂದ ಪೂಜೆಗೊಳ್ಳುವವನೇ.

ಪಾಶಾಂಕುಶಧರ—ವಿಶ್ವನಾಮಕ ಪರಮಾತ್ಮನ ಪ್ರೇರಣೆಯಿಂದಾಗಿ ಜಾಗ್ರದವಸ್ಥೆಯಲ್ಲಿ ವಿಷಯಗಳ ಸಂಬಂಧವಿರುವುದು ಪಾಶದ ಸಂಕೇತ ; ವಿಶ್ವನಾಮಕ ಪರಮಾತ್ಮನ ನಿಯಾಮಕತ್ವವನ್ನು ಅಂಕುಶ ಸೂಚಿಸುತ್ತದೆ.

ಮೂಷಕವಾಹನ—ಮೂಷಕವೆಂದರೆ ಕದ್ದೊಯ್ಯುವುದು (ಮೋಷತಿ ಅಪಹರತಿ); ಮನಸ್ಸನ್ನು ಅಪಹರಿಸುವ ಇಂದ್ರಿಯ ವಿಷಯಗಳು ; ಜಾಗ್ರದವಸ್ಥೆಗೆ ಆಧಾರಭೂತವಾದುವು. ಇವುಗಳನ್ನೇರಿರುವನೆಂದರೆ ಇವುಗಳ ಮೂಲಕ ಜಾಗ್ರತನಾಗಿರುವವನು.

ನಿರುತ ನೆನೆಯುವಂತೆ—ತನ್ನ ಅಂತರ್ಯಾಮಿಯೂ ಪ್ರೇರಕನೂ ಆಗಿರುವ ವಿಶ್ವನಾಮಕ ಪರಮಾತ್ಮನನ್ನು ಅರಿತುಕೊಳ್ಳುವಂತೆ.

ನಟ್ಟಿ ತ್ರಿವಿಡೆ

ಶರಣು ಸಿದ್ಧಿ ವಿನಾಯಕ
ಶರಣು ವಿದ್ಯಾ ಪ್ರದಾಯಕ ಪ

ಶರಣು ಪಾರ್ವತಿತನಯ ಮೂರುತಿ
ಶರಣು ಮೂಷಕವಾಹನ ಅ

ನಿಟಿಲನೇತ್ರನ ದೇವಿ ಸುತನೆ
ನಾಗಭೂಷಣ ಪ್ರಿಯನೆ
ಕಟಿಕಟಾಂಗದ ಕೋಮಲಾಂಗನೆ
ಕರ್ಣಕುಂಡಲಧಾರನೆ ೧

ಬಟುವ ಮುತ್ತಿನಹಾರ ಪದಕನೆ
ಬಾಹು ಹಸ್ತ ಚತುಷ್ಟನೇ
ಇಟ್ಟತೊಡುಗೆಯು ಹೇಮಕಂಕಣ
ಪಾಶದಂಕುಶಧಾರನೆ ೨

ಕುಕ್ಷಿ ಮಹಾಲಂಬೋದರನೆ
ಇಕ್ಷುಚಾಪನ ಗೆಲಿದನೆ
ಪಕ್ಷಿವಾಹನನಾದ ಪುರಂದರವಿಠಲನ ನಿಜದಾಸನೆ ೩

ನಿಟಿಲನೇತ್ರನ ದೇವಿ—ಹಣೆಗಣ್ಣಿನವನ, ಎಂದರೆ ಶಿವನ, ಹೆಂಡತಿಯಾದ ಪಾರ್ವತಿ.
ನಾಗಭೂಷಣಪ್ರಿಯ—ಹಾವನ್ನು ಆಭರಣವಾಗಿ ಉಳ್ಳ ಶಿವನಿಗೆ ಪ್ರಿಯನಾದವನು ; ಅವನ ಗಣಗಳ ಒಡೆಯನಾಗಿ.
ಕಟಿಕಟಾಂಗದ—'ಕಟಿ' ನಡುವು, 'ಕಟಾಂಗ' (ಕಟಾಹ ಎನ್ನುವುದರ ಅಪಭ್ರಂಶ), ಬೆಟ್ಟ ; ದೊಡ್ಡ ಪಾತ್ರೆ, ಕಡಾಯಿ : ಎಂದರೆ ಬೆಟ್ಟದಂಥ ಹೊಟ್ಟೆಯುಳ್ಳವನು.
ಬಟುವ—ಗುಂಡಗಿರುವ.
ಹಸ್ತಚತುಷ್ಟನೆ—ಹಸ್ತಚತುಷ್ಟಯನೇ, ನಾಲ್ಕು ಕೈಗಳುಳ್ಳವನೇ.
ಅಂಕುಶಧಾರನೆ—ಅಂಕುಶಧರನೇ.
ಕುಕ್ಷಿಮಹಾಲಂಬೋದರನೆ—ದೊಡ್ಡ ಹೊಟ್ಟೆಯವನೇ.
ಇಕ್ಷುಚಾಪನ ಗೆಲಿದನೆ—ಕಬ್ಬನ್ನು ಬಿಲ್ಲಾಗಿ ಉಳ್ಳ ಮನ್ಮಥನನ್ನು ಚೆಲುವಿನಲ್ಲಿ ಗೆದ್ದವನೆ.
ಪಕ್ಷಿವಾಹನ—ಗರುಡನನ್ನೇರಿ ಬರುವವ.

ಸೌರಾಷ್ಟ್ರ ಚಾಪು.

ಶರಣು ಶರಣು ಪ

ಶರಣು ಬೆನಕನೆ ಕನಕರೂಪನೆ ಕಾಮಿನೀಸಂಗದೂರನೆ
ಶರಣು ಸಾಂಬನ ಪ್ರೀತಿಪುತ್ರನೆ ಶರಣು ಜನರಿಗೆ ಮಿತ್ರನೆ ಅ

ಏಕದಂತನೆ ಲೋಕ ಖ್ಯಾತನೆ
ಏಕವಾಕ್ಯ ಪ್ರವೀಣನೆ
ಏಕ ವಿಂಶತಿ ಪತ್ರಪೂಜಿತ ಅ
ನೇಕ ವಿಘ್ನವಿನಾಯಕ ೧

ಲಂಬಕರ್ಣನೆ ನಾಸಿಕಾಧರನೆ
ಗಾಂಭೀರ್ಯಯುತ ಗುಣಸಾರನೆ
ಕಂಬುಕಂಧರ ಇಂದುಮೌಳಿಜ
ಚಂದನ ಚರ್ಚಿತಾಂಗನೆ ೨.

ಚತುರ್ಬಾಹು ಚರಣತೊಡವಿನ
ಚತುರ ಆಯುಧಧಾರನೆ
ಮತಿಯುವಂತನೆ ಮಲಿನಜನಿತನೆ
ಅತಿಯ ಮಧುರಾಹಾರನೆ ೩.

ವಕ್ರತುಂಡನೆ ಮಹಾಕಾಯನೆ
ಅರ್ಕಕೋಟಿ ಪ್ರದೀಪನೆ
ಚಕ್ರಧರ ಹರಬ್ರಹ್ಮಪೂಜಿತ
ರಕ್ತ ವಸ್ತ್ರಾಧಾರನೆ ೪

ಮೂಷಿಕಾಸನ ಶೇಷಭೂಷಣ ಅ
ಶೇಷ ವಿಘ್ನ ವಿನಾಯಕ
ದಾಸ ಪುರಂದರವಿಟ್ಠಲೇಶನ
ಈಶಗುಣಗಳ ಪೊಗಳುವೆ ೫.

ಬೆನಕ—ವಿನಾಯಕನೆಂಬ ಸಂಸ್ಕೃತಪದದ ಕನ್ನಡರೂಪ.

ಕಾಮಿನಿಸಂಗದೂರ—ಬ್ರಹ್ಮಚಾರಿ.

ಏಕವಾಕ್ಯಪ್ರವೀಣ—ಸರ್ವಶಾಸ್ತ್ರಗಳ ಸಮನ್ವಯದಲ್ಲಿ ಕುಶಲ.

ಲಂಬಕರ್ಣ—ಅಗಲವಾದ ಕಿವಿಗಳು.

ನಾಸಿಕಾಧರ—ಸೊಂಡಿಲನ್ನುಳ್ಳವನು.

ಕಂಬುಕಂಧರ—'ಕಂಬು' ಎಂದರೆ ಆನೆಯೆಂಬ ಅರ್ಥವಿದೆ (ನಾನಾರ್ಥರತ್ನಮಾಲಾ) ; ಆನೆಯ ಮೊಗದವನು ಎಂದು ಅರ್ಥವಾದೀತು. 'ಕಂಬು' ಎಂದರೆ ಶಂಖವೂ ಆಗುತ್ತದೆ ; ಶಂಖದಂತೆ ಚೆಲುವಾದ ಕತ್ತು ಉಳ್ಳವನು

ಇಂದುಮೌಳಿಜ—ಶಿವನ ಮಗ (ಚಂದ್ರನನ್ನು ತಲೆಯಲ್ಲಿ ತೊಟ್ಟವನು ಇಂದುಮೌಳಿ).

ಚತುರ ಆಯುಧ—ನಾಲ್ಕು ಆಯುಧಗಳನ್ನು ಧರಿಸಿದವನು (ಪಾಶ, ಅಂಕುಶ, ದಂತ, ಮುಸಲ).

ಮಲಿನಜನಿತ—ಗೌರಿಯು ತನ್ನ ಮೈಯ ಜಿಡ್ಡಿನಿಂದ ಗೊಂಬೆಯನ್ನು ಮಾಡಿ, ಅದಕ್ಕೆ ಜೀವಕಳೆಯನ್ನು ಕೊಟ್ಟಳೆಂದೂ, ಅದೇ ಗಣಪತಿಯಾಯಿತೆಂದೂ ಕತೆ.

ಅತಿಯ ಮಧುರಾಹಾರ—ಕಬ್ಬು ; ಆನೆಗೆ ಪ್ರಿಯವಾದುದು.

ವಕ್ರತುಂಡ—ಬಾಗಿದ ಸೊಂಡಿಲುಳ್ಳವನು.

ಅರ್ಕಕೋಟಿಪ್ರದೀಪ—ಕೋಟಿಸೂರ್ಯಪ್ರಕಾಶ.

ಚಕ್ರಧರ—ವಿಷ್ಣು.

ರಕ್ತವಸ್ತ್ರಾಧಾರ—ರಕ್ತವಸ್ತ್ರಧರ ; ಕೆಂಪುಬಣ್ಣದ ಬಟ್ಟೆಯನ್ನುಟ್ಟವನು.

ಶೇಷಭೂಷಣ—ಹಾವನ್ನು ಆಭರಣವಾಗಿ ಹೊಂದಿದವನು.

ಅಶೇಷ ವಿಘ್ನವಿನಾಯಕ—ಎಲ್ಲ ತೊಡರುಗಳನ್ನೂ ತೊಲಗಿಸುವವನು.

ಈಶಗುಣಗಳ—ದೇವತೆಗಳಿಗೆಲ್ಲ ಒಡೆಯನಾಗಿ ಹೊಂದಿರುವ ಕಲ್ಯಾಣಗುಣಗಳನ್ನು.

# ಶೇಷ

ಶೇಷ (ಶೇಷನಾಗ, ಆದಿಶೇಷ, ಅನಂತ, ನಾಗರಾಜ) ಒಂದು ಸಾವಿರ ಹೆಡೆಗಳ ಹಾವೆಂದೂ ಭೂಮಿಯನ್ನು ತನ್ನ ತಲೆಯ ಮೇಲೆ ಹೊತ್ತಿದೆ ಯೆಂದೂ ನಂಬಿಕೆ ಅದು ಪಾತಾಳದಲ್ಲಿದ್ದುಕೊಂಡು ಮೇಲಿನ ಆರು ಅಧೋಲೋಕಗಳನ್ನೂ ಭೂಮಿಯನ್ನೂ ಹೊತ್ತಿರುವುದರಿಂದ ಏಳು ಹೆಡೆ ಗಳನ್ನು ನಿರ್ದೇಶಿಸುವುದುಂಟು. ಭವಿಷ್ಯ ಪುರಾಣದಲ್ಲಿ ಇದು ಕ್ಷೀರ ಸಮುದ್ರದ ಮಧ್ಯದಲ್ಲಿದೆಯೆಂದೂ, ಸರ್ವಲೋಕೇಶನೆಂದೂ, ಸರ್ವಾಭರಣ ಭೂಷಿತವಾದುದೆಂದೂ 'ಫಣಾಸಹಸ್ರ ಸಂಯುಕ್ತಂ ಚತುರ್ಬಾಹುಂ ಕಿರೀಟಿನಂ' ಎಂದೂ ವರ್ಣನೆಯಿದೆ. ನಾರಾಯಣನಿಗೆ ಮೂರು ಮೂರ್ತಿ ಗಳೆಂದೂ, ಒಂದು ಜ್ಞಾನರೂಪವಾಗಿ ಶಿವವಾಗಿರುವುದು, ಇನ್ನೊಂದು ವಾಸುದೇವನೆಂಬ ಹೆಸರಿನಿಂದ ಗುಣಾತೀತವಾಗಿ ನಿಷ್ಕಲವಾಗಿರುವುದು, ಮತ್ತೊಂದು ಕಾಲ ಎಂಬ ಹೆಸರಿನಿಂದ ತಮೋರೂಪವಾಗಿರುವುದು ಎಂದೂ ಕೌರ್ಮ ಪುರಾಣದ ಒಕ್ಕಣೆ. ಇಲ್ಲಿ ಮೂರನೆಯ ವೈಷ್ಣವೀರೂಪವೇ ಶೇಷ. ಇವನು ಸಂಕರ್ಷಣನೆಂದೂ ಬಲರಾಮನೆಂದೂ ಪ್ರಸಿದ್ಧಿಯಿದೆ.

ಕಶ್ಯಪ ಮತ್ತು ಕದ್ರು ಇವರ ಮಗನಾಗಿ ಹುಟ್ಟಿ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ತನ್ನ ಒಂದಂಶದಿಂದ ಪಾತಾಳದಲ್ಲಿದ್ದುಕೊಂಡು ಭೂಮಿಗೆ ಆಧಾರವಾಗಿರುವಂತೆ, ಇನ್ನೊಂದು ಅಂಶದಿಂದ ಕ್ಷೀರ ಸಮುದ್ರದಲ್ಲಿ ನಾರಾಯಣನಿಗೆ ಶಯ್ಯೆಯಾಗಿರುವಂತೆ ವರವನ್ನು ಪಡೆದುಕೊಂಡನಂತೆ. ವಿಷ್ಣುವಿಗೆ ಮೂರು ನೆಲೆಗಳು, ವೈಕುಂಠ (ಪರವಾಸುದೇವನಾಗಿ), ಶ್ವೇತ ದ್ವೀಪ (ನಾರಾಯಣನಾಗಿ) ಮತ್ತು ಅನಂತಾಸನ (ಜನಾರ್ದನನಾಗಿ). ಕಡೆ ಯದೇ ಶೇಷಶಯ್ಯೆಯ ಮೇಲೆ ಯೋಗನಿದ್ರೆಯಲ್ಲಿ ಪವಡಿಸಿರುವ ರೂಪ. ಶ್ರೀರಂಗ, ಶ್ರೀರಂಗಪಟ್ಟಣ, ಅನಂತಶಯನ ಮೊದಲಾದ ಕ್ಷೇತ್ರಗಳಲ್ಲಿ ಕಾಣುವ ರೂಪ ಇದೇ.

ದೇವತಾತಾರತಮ್ಯದಲ್ಲಿ ಗರುಡ, ಶೇಷ, ರುದ್ರ ಮೂವರನ್ನೂ ಒಂದೇ ಕಕ್ಷೆಯಲ್ಲಿ ಕಾಣಿಸುತ್ತಾರೆ (ಐದನೆಯ ಕಕ್ಷೆ). ಮೂವರೂ ದೇವತೆ ಗಳು ಪರಮಾತ್ಮನಿಗೆ ಅತ್ಯಂತ ಪ್ರಿಯರು ; ಅವನ ಆವಿಷ್ಟರೂಪಗಳು. ಗರುಡ ಅವನ ವಾಹನ, ಶೇಷ ಅವನ ಶಯ್ಯೆ, ರುದ್ರ ಅವನ ಮಿತ್ರ. ಪುರಂದರದಾಸರ ಪದದಲ್ಲಿ ಶೇಷನನ್ನು ಮಂಚವೆಂದು ಬಣ್ಣಿಸಿದ್ದಾರೆ. ಮತ್ತು ವಾಸುಕಿ, ತಕ್ಷಕ ಮೊದಲಾದ ಪುರಾಣ ಪ್ರಸಿದ್ಧ ಸರ್ಪಗಳಿಗೆ ಪರ್ಯಾಯವೆಂದು ಬಗೆದಿದ್ದಾರೆ. ಹಾವಿನ ಸಾಮಾನ್ಯ ವರ್ಣನೆಯನ್ನೂ, ಅದರ ಬಗ್ಗೆ ಜನಜನಿತವಾದ ಕೆಲವು ನಂಬಿಕೆಗಳನ್ನೂ ಈ ಪದದಲ್ಲಿ ಕಾಣಬಹುದು.

ಶಂಕರಾಭರಣ ತ್ರಿವಿಡೆ

ಶೃಂಗಾರವಾಗಿಹುದು ಶ್ರೀ ಹರಿಯ ಮಂಚ
ಅಂಗನೆ ಮಹಲಕುಮಿಯರಸ ಮಲಗುವ ಮಂಚ ಪ

ಒಡಗಿ ಮುಟ್ಟದ ಮಂಚ ಕಡಲೊಳಿಹ ಮಂಚ
ಮೃಡನ ತೋಳಲಿ ಅಡಗಿರುವ ಮಂಚ
ಹೆಡೆಯುಳ್ಳ ಹೊಸಮಂಚ ಪೊಡವಿ ಪೊತ್ತಿಹ ಮಂಚ
ಕಡಲಶಯನ ಶ್ರೀರಂಗನ ಸಿರಿಮಂಚ ೧

ಕಾಲಿಲ್ಲದೋಡುವ ಮಂಚ ಗಾಳಿನುಂಗುವ ಮಂಚ
ತೋಳು ಬಿಳುಪಿನ ಮಂಚ ವಿಷಮಂಚ
ಕಾಳಗದೊಳರ್ಜುನನ ಮಕುಟ ಕೆಡಹಿದ ಮಂಚ
ಕೇಳು ಪರೀಕ್ಷಿತನ ಕೊಂದುದೀ ಮಂಚ ೨

ಕಣ್ಣು ಕಿವಿಯಾದ ಮಂಚ ಬೆನ್ನು ಬಾಗಿದ ಮಂಚ
ಹುಣ್ಣಿಮೆಯ ಚಂದ್ರಮನ ಅಡ್ಡಗಟ್ಟುವ ಮಂಚ
ಬಣ್ಣ ಬಿಳುಪಿನ ಮಂಚ ಹೊನ್ನ ಕಾದಿಹ ಮಂಚ
ಕನ್ನೆ ಮಹಾಲಕ್ಷ್ಮಿಯರಸನ ಮಂಚ ೩

ಹಕ್ಕಿಗೆ ಹಗೆಯಾದ ಮಂಚ ರೊಕ್ಕ ಮುಟ್ಟದ ಮಂಚ
ರಕ್ಕಸರೆದೆ ತಲ್ಲಣಗೊಳಿಸುವ ಮಂಚ
ಸೊಕ್ಕು ಪಿಡಿದ ಮಂಚ ಫಕ್ಕನೆ ನುಂಗುವ ಮಂಚ
ಲಕ್ಕುಮಿರಮಣ ಶ್ರೀಹರಿಯ ಮಂಚ ೪

ಅಂಕುಡೊಂಕಿನ ಮಂಚ ಅಕಲಂಕಮಹಿಮ ಮಂಚ
ಸಂಕರುಷಣನೆಂಬ ಸುಖದ ಮಂಚ
ಶಂಕರನ ಕೊರಳಿಗೆ ಪದಕವಾಗಿಹ ಮಂಚ
ವೆಂಕಟಪುರಂದರವಿಠಲರಾಯನ ಮಂಚ ೫

[ಬಹುಶಃ ದಾಸರು ಶ್ರೀರಂಗಕ್ಷೇತ್ರಕ್ಕೆ ಹೋಗಿದ್ದಾಗ ರಚಿಸಿದ ಪದ.]

ಶ್ರೀಹರಿಯ ಮಂಚ—ಅನಂತಾಸನ.

ಬಡಗಿ ಮುಟ್ಟದ—ಅಪ್ರಾಕೃತವಾದ.

ಕಡಲೊಳಿಹ—ಕ್ಷೀರಸಮುದ್ರದ ಮಧ್ಯದಲ್ಲಿರುವ.

ಮೃಡನ ತೋಳಲಿ—ಶಿವನು ನಾಗಾಭರಣ, ಸರ್ಪಭೂಷಣ.

ಪೊಡವಿ ಪೊತ್ತಿಹ—ಭೂಮಿಯನ್ನು ತನ್ನ ಒಂದು ಹೆಡೆಯಿಂದ ಎತ್ತಿ ನಿಲ್ಲಿಸಿರುವ.

ಗಾಳಿ ನುಂಗುವ—ಹಾವು ಗಾಳಿಯನ್ನೇ ಉಂಡು ಬದುಕುವುದೆಂದು ನಂಬಿಕೆ 'ವಾತಾಶನ' (ಎಲರುಣಿ).

ತೋಳು ಬಿಳುಪಿನ—ಆದಿಶೇಷನ ಮೈಬಣ್ಣ ಬಿಳಿಯೆಂದು ಪ್ರತೀತಿ.

ಕಾಳಗದೊಳರ್ಜುನನ...—ಮಹಾಭಾರತ ಯುದ್ಧದಲ್ಲಿ ಕರ್ಣನ ಸರ್ಪಾಸ್ತ್ರದಿಂದ ಅರ್ಜುನನ ಕಿರೀಟವು ಮುರಿದು ಭೂಮಿಗೆ ಬಿದ್ದಿತು; ಕೃಷ್ಣನ ಉಪಾಯದಿಂದ ಅದು ಅರ್ಜುನನ ತಲೆಯನ್ನು ತಾಕದೆ ಅವನು ಉಳಿದುಕೊಂಡ.

ಪರೀಕ್ಷಿತನ .—ಚಂದ್ರವಂಶದ ಅರಸನೂ ಅರ್ಜುನನ ಮೊಮ್ಮಗನೂ ಆದ ಪರೀಕ್ಷಿತನು ಶುಕಾಚಾರ್ಯರಿಂದ ಭಾಗವತಪುರಾಣವನ್ನು ಏಳುದಿನಗಳು ಶ್ರವಣಮಾಡಿ ಕಡೆಯ ದಿನ ತಕ್ಷಕನೆಂಬ ಹಾವು ಕಚ್ಚಿ ಸತ್ತನು.

ಕಣ್ಣು ಕಿವಿಯಾದ—ಹಾವಿಗೆ ಕಿವಿಗಳಿರವೆಂದೂ, ಅದರ ಕಣ್ಣೇ ತೀಕ್ಷ್ಣವಾಗಿದ್ದು ಅದ ರಿಂದಲೇ ಶಬ್ದವನ್ನೂ ಅರಿತುಕೊಳ್ಳುವುದೆಂದೂ ನಂಬಿಕೆ.

ಹುಣ್ಣಿಮೆಯ ಚಂದ್ರಮನ...—ರಾಹುವೆಂಬ ದೈತ್ಯನು ಸರ್ಪಾಕಾರದಿಂದ ಬಂದು ಚಂದ್ರನನ್ನು ನುಂಗುವುದು ಚಂದ್ರಗ್ರಹಣದ ಸಂದರ್ಭ.

ಹೊನ್ನ ಕಾದಿಹ—ಭೂಗತವಾದ ನಿಧಿಯನ್ನು ಹಾವು ಕಾಪಿಡುವುದೆಂಬ ನಂಬಿಕೆಯಿದೆ.

ಹಕ್ಕಿಗೆ ಹಗೆಯಾದ—ಗರುಡನಿಗೆ ಶತ್ರುವಾದ. ಇದರ ಹಿನ್ನೆಲೆಯ ಕತೆ ಇದು : ಕಶ್ಯಪನಿಗೆ ವಿನತೆ ಮತ್ತು ಕದ್ರು ಎಂಬಿಬ್ಬರು ಪತ್ನಿಯರು, ಅವರಲ್ಲಿ ಸವತಿ ಮತ್ಸರ. ಕದ್ರು ಉಪಾಯದಿಂದ ವಿನತೆಯನ್ನು ಅವಮಾನಗೊಳಿಸಿ ತನ್ನ ಊಳಿಗದವಳಾಗಿ ಇರಿಸಿಕೊಂಡಳು. ವಿನತೆಯ ಮಗ ಗರುಡನು ದೇವಲೋಕ ದಿಂದ ಅಮೃತವನ್ನು ಕದ್ದು ತಂದು ತನ್ನ ತಾಯಿಗಿತ್ತು ಅವಳನ್ನು ಸೆರೆಯಿಂದ ಬಿಡಿಸಿ, ಕದ್ರುವಿನ ಮಕ್ಕಳಾದ ವಾಸುಕಿ ಮೊದಲಾದ ಸರ್ಪಗಳನ್ನು ದ್ವೇಷ ದಿಂದ ಕಾಡತೊಡಗಿದನು.

ಸೊಕ್ಕುಪಿಡಿದ—ವಾಯುವಿಗೂ ಶೇಷನಿಗೂ ಸೆಣಸಾಟವಾಗಿ, ಶೇಷನ ಗರ್ವಭಂಗ ವಾದ ಕತೆ ಹಿನ್ನೆಲೆ. ಈ ಕತೆ ಭವಿಷ್ಯೋತ್ತರ ಪುರಾಣದಲ್ಲಿ ಬರುತ್ತದೆ.

ಅಕಲಂಕ ಮಹಿಮ—ನಿರ್ದೋಷನಾಗಿರುವುದೇ ಶೇಷನು ಹರಿಯ ಸೇವೆಗೆ ಅಧಿಕಾರ ವನ್ನು ಪಡೆದುದಕ್ಕೆ ಕಾರಣ.

ಸಂಕರುಷಣ—ಸಂಕರ್ಷಣ. ವಿಷ್ಣುವಿನ ವ್ಯೂಹಾವತಾರಗಳಲ್ಲಿ ಒಂದು ; 'ನಾನು ಎನ್ನುವ ಅಭಿಮಾನವೇ ಸಂಕರ್ಷಣ'ನೆಂದು ಸಾತ್ವತಮತದ ಕಲ್ಪನೆ. ಬಲರಾಮನ ಹೆಸರು ; ದೇವಕಿಯ ಬಸಿರಿನಿಂದ ರೋಹಿಣಿಯ ಬಸುರಿಗೆ ಬಂದನಾಗಿ ('ಗರ್ಭ ಸಂಕರ್ಷಣಾತ್') ಸಂಕರ್ಷಣನೆಂದು ಭಾಗವತಪುರಾಣದ ಒಕ್ಕಣೆ. ವಿಷ್ಣುವಿನ ತಾಮಸೀರೂಪವೆಂದು ಹರಿವಂಶದಲ್ಲಿದೆ. ಇವನನ್ನೇ ಅನಂತನೆಂದೂ ಕರೆಯು ವರು. "ಸಂಕರ್ಷಣದ್ವಿತೀಯಸ್ಯ ಬಲಂ ವಿಷ್ಣೋಃ ಪ್ರವರ್ಧತಾಂ" ಎಂದು ಪತಂಜಲಿಯ ಮಹಾಭಾಷ್ಯದಲ್ಲಿ ಮಾತಿದೆ.



# ರುದ್ರ

ಮಾಧ್ವಪರಿಭಾಷೆಯಲ್ಲಿ 'ಮಹರುದ್ರ ದೇವರು' ಎಂಬ ಹೆಸರಿದೆ. ದೇವತಾತಾರತಮ್ಯದಲ್ಲಿ ಐದನೆಯ ಕಕ್ಷೆಗೆ ಸೇರಿದ ಈ ದೇವತೆಯು ಅಹಂಕಾರ ತತ್ತ್ವಕ್ಕೆ ಅಭಿಮಾನಿದೇವತೆ. ಬ್ರಹ್ಮನ ಹುಬ್ಬುಗಳ ನಡುವೆ (ಅವ್ಯಕ್ತ ತತ್ತ್ವದಿಂದ) ಹುಟ್ಟಿ ಸುಂದರವಾದ ರೂಪವನ್ನು ತಳೆದದ್ದರಿಂದ ವಾಮದೇವನೆಂದೂ ಹೆಸರು (ವಾಮ ಎಂದರೆ ಸುಂದರ). ಹರಿನಾಮಕ ಪರಮಾತ್ಮನ ವಿಶೇಷವಾದ ಆವೇಶವಾಗಿ ಅವನ ಬಲಗಡೆ ಬಲಗೊಂಡು ಇರುವುದರಿಂದಲೂ ವಾಮದೇವನೇ (ವಾಮೋ ದೇವಃ, ತನ್ನ ಎಡಗಡೆ ಹರಿನಾಮಕ ದೇವತೆಯನ್ನು ಹೊಂದಿರುವವನು). ಎಲ್ಲ ಜೀವರುಗಳ ಜೀವಾಭಿಮಾನಕ್ಕೆ ಇವನೇ ಕಾರಣನಾಗಿ ನಾಲ್ಕೂ ದಿಕ್ಕುಗಳಲ್ಲಿ ಮತ್ತು ಮೇಲುಗಡೆ ಇವನ ಪ್ರವೃತ್ತಿಯಿರುವುದರಿಂದ ಪಂಚಮುಖ. ಮಧ್ವಾಚಾರ್ಯರು ತಂತ್ರಸಾರದಲ್ಲಿ 'ಜ್ಞೇಯೋ ಪಂಚ ಮುಖೋ ರುದ್ರಃ ಸ್ಫಟಿಕಾಮಲಕಾಂತಿಮಾನ್' ಎಂದು ಬಣ್ಣಿಸಿದ್ದಾರೆ ; ಅವನ ಜ್ಯೇಷ್ಠತ್ವವನ್ನೂ ಉತ್ತಮತ್ವವನ್ನೂ ವಿವರಿಸಿದ್ದಾರೆ.

ಸಾಧಕರಿಗೆ ಹರಿಯ ಆವಿಷ್ಟರೂಪವಾಗಿ ವೈರಾಗ್ಯಾಧಿಪತಿ. ಸಾತ್ತ್ವಿಕ ಜೀವರು ಮುಕ್ತಿಯನ್ನು ಪಡೆಯಲು ಅತ್ಯಗತ್ಯವಾದ ಮನೋನೈರ್ಮಲ್ಯ (ಅಂತಃಕರಣಶುದ್ಧಿ) ಮತ್ತು ವಿಷಯಭೋಗವಿರಕ್ತಿ ಇವನ್ನು ರುದ್ರದೇವರ ಅನುಗ್ರಹದಿಂದಲೇ ಪಡೆಯಬೇಕು. ಸಾಧಕರು ತಮ್ಮ ಸಾಧನೆಯ ಮೇಲಿನ ಹಂತಗಳಲ್ಲಿ ನಡೆಸುವ ಜ್ಞಾನರೂಪವಾದ ಅಖಂಡ ಸ್ಮೃತಿಗಾಗಿಯೂ ರುದ್ರದೇವರನ್ನೇ ಪ್ರಾರ್ಥಿಸಬೇಕು. ಮಾಧ್ವಸಂಪ್ರದಾಯದಲ್ಲಿ ಮುಂಜಾನೆ ಎದ್ದು ಹೇಳಿಕೊಳ್ಳುವ ಹಾಡುಗಳಲ್ಲಿ—

ಮನಸು ಕಾರಣವಲ್ಲ ಪಾಪಪುಣ್ಯಕ್ಕೆಲ್ಲ
ಅನಲಾಕ್ಷ ನಿನ್ನ ಪ್ರೇರಣೆಯಿಲ್ಲದೆ

ಎನ್ನುವ ಒಕ್ಕಣೆ ಬರುತ್ತದೆ. ಮುಂದೆ 'ಕೈಲಾಸವಾಸ ಗೌರೀಶ ಈಶ, ಹರಿಯಲ್ಲಿ ಮನಸು ಕೊಡು ಶಂಭೋ' ಎನ್ನುವ ಬೇಡಿಕೆಯೂ ಇದೆ.

ಉಳಿದಂತೆ, ಪುರಾಣಗಳಲ್ಲಿ ಬರುವ ರುದ್ರನ ನಿರ್ದೇಶನವೆಲ್ಲ ಬಳಕೆಯಲ್ಲಿದೆ—ಕೈಲಾಸವಾಸಿ, ಗೌರೀನಾಥ,ವೃಷಭ ವಾಹನ, ದಿಗಂಬರ, ಯೋಗಿ, ಸ್ಮಶಾನವಾಸಿ, ನಾಗಭೂಷಣ ಇತ್ಯಾದಿ. ಮಾಧ್ವಸಂಪ್ರದಾಯದ ಕಲ್ಪನೆಯಲ್ಲಿ ಸೇರುವ ಹೊಸ ವಿವರವೆಂದರೆ ರುದ್ರನು ವಾಯುವಿನಿಂದ ಉಪದೇಶವನ್ನು ಪಡೆದು ಲವಣ ಸಮುದ್ರದಲ್ಲಿ ತಪಸ್ಸು ಮಾಡಿದನೆಂಬುದು. ವಾಯುದೇವರು (ಹನುಮಂತನು) ರುದ್ರಾತ್ಮಕನೆಂಬ ಕಲ್ಪನೆಯೂ ಇದೆ ; ಶೇಷನೂ ರುದ್ರನೂ ಒಂದೇ ಕಕ್ಷೆಯವರು. ರಾಮಾವತಾರದಲ್ಲಿ ಲಕ್ಷ್ಮಣನೂ ಕೃಷ್ಣಾವತಾರದಲ್ಲಿ ಬಲರಾಮನೂ ಶೇಷಾವತಾರಿಗಳು, ಎಂದರೆ ರುದ್ರಸಮರು.

ಮಧ್ಯಮಾವತಿ ಆದಿ

ಶಿವದರುಶನ ನಮಗಾಯಿತು ಕೇಳಿ
ಶಿವರಾತ್ರಿಯ ಜಾಗರಣೆ ಪ

ಪಾತಾಳಗಂಗೆಯ ಸ್ನಾನವ ಮಾಡಲು
ಪಾತಕವೆಲ್ಲ ಪರಿಹಾರವು
ಜ್ಯೋತಿರ್ಲಿಂಗನ ಧ್ಯಾನವ ಮಾಡಲು
ದ್ಯೂತಗಳಿಲ್ಲ ಅನುದಿನವು ೧

ಬೇಡಿದ ವರಗಳ ಕೊಡುವನು ತಾಯಿ
ಬ್ರಹ್ಮನ ರಾಣಿಯ ನೋಡುವನು
ಆಡುತ ಪಾಡುತ ಏರುತ ಬಸವನ
ಆನಂದದಲಿ ನಲಿದಾಡುವನು ೨

ಹರನನು ಕಂಡೆನು ಪುರಂದರವಿಠಲನ
ಹರಿನಾರಾಯಣ ಧ್ಯಾನದಲಿ ೩

ಜ್ಯೋತಿರ್ಲಿಂಗ—ಪಂಚತತ್ತ್ವಗಳಿಗೆ ಅನುಗುಣವಾಗಿ ಪಂಚಲಿಂಗಗಳನ್ನು ಹೇಳುವ ಪ್ರಕ್ರಿಯೆಯಿದೆ. 'ಜ್ಯೋತಿರ್ಲಿಂಗ' ಅಗ್ನಿತತ್ತ್ವವನ್ನು ಪ್ರತಿನಿಧಿಸುತ್ತದೆ.

ದ್ಯೂತಗಳಿಲ್ಲ—ಹೆಣಗಾಟವಿಲ್ಲ.

ಬ್ರಹ್ಮನ ರಾಣಿಯ ನೋಡುವನು—ರುದ್ರನು ಐದನೆಯ ಕಕ್ಷೆಯಲ್ಲಿದ್ದು, ತನ್ನ ಮೇಲಿನ ಕಕ್ಷೆಯಲ್ಲಿ ಉತ್ತಮಳಾದ ಸರಸ್ವತಿಯನ್ನು ಸನ್ನಿಧಾನಾಪೇಕ್ಷೆಯಿಂದ ನೋಡುವನು. ರುದ್ರನಿಗೆ ಸರಸ್ವತಿಯ ಮೂಲಕವಾಗಿ ಬ್ರಹ್ಮ, ಬ್ರಹ್ಮನ ಮೂಲಕವಾಗಿ ಲಕ್ಷ್ಮಿ, ಲಕ್ಷ್ಮಿಯ ಮೂಲಕವಾಗಿ ವಿಷ್ಣುವಿನ ಸೇವೆ ಸಿದ್ಧವಾಗುತ್ತದೆ.

## ೩೩

ಭೈರವಿ — ಅಟ್ಟ

ಕಂಡೆ ಕಂಡೆ ರಾಜರ ಕಂಡೆ ಕಂಡೆ ಪ

ಕಂಡೆ ಕಂಡೆನು ಕರುಣ ನಿಧಿಯನು
ಕರಗಳಂಜಲಿ ಮಾಡಿ ಮುಗಿವೆನು
ಲಂಡ ಮಾಯಿಗಳ ಗುಂಡ ಒಡೆಯಲು
ದ್ದಂಡ ಮಾರುತಿಪದಕೆ ಬರುವವನ ಅ

ಪಂಚ ವೃಂದಾವನದಿ ಮೆರೆಯುವ
ಪಂಚಬಾಣನ ಪಿತನ ಸ್ಮರಿಸುತ
ಪಂಚನಂದನ ಮುಂದೆ ಆಗುತ
ಮಿಂಚಿನಂದದಿ ಪೊಳೆವ ಮಹಿಮನ ೧

ಪಂಚಪಾತಕ ಕಳೆವ ದೇವನ
ಪಂಕಜಾರಿನಿಭೇಂದುವಕ್ತ್ರನ ಆ
ತಂಕವಿಲ್ಲದೆ ಭಜಿಪ ಸುಜನರ
ಶಂಕೆ ಬಿಡಿಸುವ ಶಂಕರೇಶನ ೨

ಭಜಿಸುವವರಿಗೆ ಭಾಗ್ಯ ಕೊಡುವನ
ಋಜುಗಣೇಶಮರೇಂದ್ರ ವಂದಿತ
ನಿಜಪುರಂದರವಿಠ್ಠಲೇಶನ
ಭಜನೆ ಮಾಡುವ ಭಾವಿ ಮರುತನ ೩

[ಇದು ಶಿವಪರವಾದ ಸ್ತುತಿ. ದೇವತಾತಾರತಮ್ಯದ ಕಲ್ಪನೆಯ ಪ್ರಕಾರ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಗೆ ಬರುವವನು ವಾಯು (ಮಹತ್ತತ್ತ್ವಾಭಿಮಾನಿ ದೇವತೆ) ; ತೆರವಾದ ವಾಯು ಪದವಿಗೆ ಬರುವವನು ಈಗ ಐದನೆಯ ಕಕ್ಷೆಯಲ್ಲಿರುವ ರುದ್ರ (ಅಹಂಕಾರಾಭಿಮಾನಿದೇವತೆ). ಹಾಗೆಂದೇ ಇಲ್ಲಿ 'ಮಾರುತಿ ಪದಕೆ ಬರುವವನ' ಎಂದೂ 'ಭಾವಿಮರುತನ' ಎಂದೂ ಒಕ್ಕಣೆಗಳಿವೆ.]

ಲಂಡವಾಯಿಂಗಳ—ಮಾಯಾವಾದವು ಅವೈದಿಕವೆಂಬ ಕಾರಣದಿಂದ ಆ ವಾದವನ್ನು ಹಿಡಿದವರನ್ನು ಲಂಡರೆಂದು ಕರೆದಿದ್ದಾರೆ. ಲಂಡನೆಂದರೆ ಕುಹಕಿ, ಉಪಾಯಗಾರ, ಮೋಸಮಾಡುವವನು.

ಗುಂಡ ಒಡೆಯಲು—ಎದೆಯನ್ನು ಸೀಳಲು.

ಉದ್ದಂಡ ಮಾರುತಿ ಪದಕೆ —ವೀರನಾದ ವಾಯುದೇವರ ಪಟ್ಟಕ್ಕೆ.

ಪಂಚವೃಂದಾವನದಿ—ಆನೆಗೊಂದಿಯ ಬಳಿಯಿರುವ ಸ್ಥಳ

ಪಂಚಬಾಣನ ಪಿತನ—ನಾರಾಯಣನ.

ಪಂಚನಂದನ—ಪಂಚಪ್ರಾಣಗಳಿಗೆ (ಪ್ರಾಣ, ಅಪಾನ ಇತ್ಯಾದಿ) ಮೂಲಭೂತವಾದ ವಾಯುವಿನ ಮಗ, ಮಾರುತಿ.

ಪಂಚಪಾತಕ—ಹಿರಣ್ಯಸ್ತೇನ, ಸುರಾಪಾನ, ಗುರುತಲ್ಪಗಮನ, ಬ್ರಹ್ಮಹತ್ಯೆ, ಮಹಾಪಾತಕಿ ಸಂಸರ್ಗ.

ಪಂಕಜಾರಿ ನಿಭೇಂದುವಕ್ತ್ರ—ತಾವರೆಗೆ ಶತ್ರುವೆಂದರೆ ಚಂದ್ರ (ಚಂದ್ರೋದಯದಲ್ಲಿ ತಾವರೆ ಮುಚ್ಚಿಕೊಳ್ಳುವುದೆಂದು ಕವಿಸಮಯ) ; ಚಂದ್ರನ ಪ್ರಕಾಶದಂತೆ ಇರುವ ಮುಖವುಳ್ಳವನು.

ಋಜುಗಣೇಶ ಅಮರೇಂದ್ರ ವಂದಿತ—ಋಜುಗಣದಲ್ಲಿರುವ ಜೀವರುಗಳು ವಿಲೀನ ಪ್ರಕೃತಿಯವರು, ನಿರ್ದೋಷರು, ಎಲ್ಲರಿಗೂ ಗುರುಗಳು, ಸರ್ವಕಾರ್ಯಸಮರ್ಥರು ; ವೇದವ್ಯಾಸರ ಮುಖ್ಯಶಿಷ್ಯರು ; ಅವರಿಗೆ ಅಪರೋಕ್ಷಕ್ಕೆ ಮೊದಲು ನೂರು ಬ್ರಹ್ಮಕಲ್ಪಗಳಲ್ಲಿಯೂ, ಹರಿಪ್ರೀತ್ಯರ್ಥವಾಗಿ ಮಹಾಸುಖ ಪ್ರಾರಬ್ಧಭೋಗಕ್ಕಾಗಿ ನೂರು ಬ್ರಹ್ಮಕಲ್ಪಗಳಲ್ಲಿಯೂ ಜನ್ಮವುಂಟು. 'ಈಶ' ನೆಂದರೆ ರುದ್ರ ; 'ಅಮರೇಂದ್ರ'ನೆಂದರೆ ಇಂದ್ರ.



ನಾದನಾಮಕ್ರಿಯೆ ಆದಿ

ಎಂಥಾ ಚೆಲುವಗೆ ಮಗಳನು ಕೊಟ್ಟನು
ಗಿರಿರಾಜನು ನೋಡಮ್ಮಮ್ಮ ಪ

ಕಂತುಹರ ಶಿವ ಚೆಲುವನೆನ್ನುತ
ಮೆಚ್ಚಿದನು ನೋಡಮ್ಮಮ್ಮಾ ಅ

ಮೋರೆ ಐದು ಮೂರು ಕಣ್ಣು
ವಿಪರೀತವ ನೋಡಮ್ಮಮ್ಮಾ
ಕೊರಳೊಳು ರುಂಡಮಾಲೆಯು
ಧರಿಸಿದ ಉರಗಭೂಷಣನ ನೋಡಮ್ಮಮ್ಮಾ ೧

ತಲೆಯೆಂಬೋದು ನೋಡಿದರೆ ಜಡೆ
ಹೊಳೆಯುತಿದೆ ನೋಡಮ್ಮಮ್ಮಾ
ಹಲವು ಕಾಲದ ತಪಸಿ ರುದ್ರನ
ಮೈ ಬೂದಿಯು ನೋಡಮ್ಮಮ್ಮಾ ೨

ಭೂತ ಪ್ರೇತ ಪಿಶಾಚಿಗಳೆಲ್ಲ
ಪರಿವಾರವು ನೋಡಮ್ಮಮ್ಮಾ
ಈತನ ನಾಮವು ಒಂದೇ ಮಂಗಳ
ಮುಪ್ಪುರಹರನ ನೋಡಮ್ಮಮ್ಮಾ ೩

ಮನೆಯೆಂಬುವುದು ಸ್ಮಶಾನವು ನೋಡೆ
ಗಜ ಚರ್ಮಾಂಬರವಮ್ಮಮ್ಮಾ
ಹಣವೊಂದಾದರು ಕೈಯೊಳಗಿಲ್ಲ
ಕಪ್ಪರವನು ನೋಡಮ್ಮಮ್ಮಾ ೪

ನಂದಿವಾಹನ ನೀಲಕಂಠನ
ನಿರ್ಗುಣನ ನೋಡಮ್ಮಮ್ಮಾ
ಇಂದಿರೆರಮಣ ಶ್ರೀ ಪುರಂದರವಿಠಲನ
ಪೊಂದಿದವನ ನೋಡಮ್ಮಮ್ಮಾ ೫

ಗಿರಿರಾಜನು—ಹಿಮಾಲಯ ; ದಕ್ಷ ಯಾಗದಲ್ಲಿ ದಾಕ್ಷಾಯಿಣಿಯು ಅವಮಾನಿತಳಾಗಿ ಯಜ್ಞಕುಂಡದಲ್ಲಿ ಹಾರಿ ಕೊನೆಗೊಂಡಮೇಲೆ, ಹಿಮಾಲಯದಲ್ಲಿ ಹಿಮಾಚಲ ರಾಜನ ಹೆಂಡತಿ ಮೇನೆಯ ಹೊಟ್ಟೆಯಲ್ಲಿ ಮಗಳಾಗಿ ಹುಟ್ಟಿದಳು. ಶಿವನು ವೈರಾಗ್ಯವನ್ನು ತಳೆದು ಅಲ್ಲೇ ತಪಸ್ವಿಗಾಗಿ ನಿಂತಿರಲು, ಪಾರ್ವತಿ ಅವನನ್ನೇ ವರಿಸಿ ಅವನ ಪರಿಚರ್ಯೆಯಲ್ಲಿ ನಿಂತಳು. ಕಾಮದಹನದ ಪ್ರಸಂಗವಾದ ಮೇಲೆ ಶಿವನು ಪಾರ್ವತಿಯ ತಪಸ್ಸಿಗೆ ಮೆಚ್ಚಿ ಅವಳನ್ನು ವರಿಸುವಂತೆ ಕೇಳಿ ಕೊಳ್ಳಲು, ಪಾರ್ವತಿಯು, 'ನನ್ನ ತಂದೆ ಕೊಡುವವನು ; ಅವನನ್ನು ಕೇಳು' ಎಂದಳು. ಆಗ ಬ್ರಹ್ಮಾದಿ ದೇವತೆಗಳೂ ಸಪ್ತರ್ಷಿಗಳೂ ಹಿಮಾಲಯದ ಬಳಿ ಹೋಗಿ ಶಿವನಿಗಾಗಿ ಪಾರ್ವತಿಯನ್ನು ಕೇಳಲು ಅವನು ಒಪ್ಪಿದನು. ಇದು ಕುಮಾರಸಂಭವದ ಹಿನ್ನೆಲೆಯ ಕತೆ ; ಸ್ಕಾಂದಪುರಾಣದಲ್ಲಿದೆ.

ಕಂತುಹರ—ಕಾಮನನ್ನು ಕೊಂದವನು.

ಮೋರೆ ಐದು—ಶಿವನಿಗೆ ಐದು ಮುಖಗಳು; ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ, ಈಶಾನ ಎಂದು ಹೆಸರುಗಳು.

ಮೂರು ಕಣ್ಣು—ಶಿವನಿಗೆ ಸೂರ್ಯ, ಚಂದ್ರ ಅಗ್ನಿ (ಹಣೆಗಣ್ಣು) ಇವು ಮೂರು ಕಣ್ಣುಗಳು.

ಈತನ ನಾಮವು ಒಂದೇ ಮಂಗಳ—'ಶಿವ'ನೆಂಬುದು ; 'ಶಿವಂ' ಎಂದರೆ ಶುಭ, ಒಳ್ಳೆಯದು.

ಮುಪ್ಪುರಹರನ—ತ್ರಿಪುರಾರಿ. ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿಗಳು ತಪಸ್ಸಿನಿಂದ ಪಡೆದುಕೊಂಡ ಅಸಾಧ್ಯವಾದ ಪುರಗಳನ್ನು ಶಿವನು ನಾಶಮಾಡಿದನು. ಮತ್ಸ್ಯ ಮತ್ತು ಸ್ಕಾಂದಪುರಾಣಗಳಲ್ಲಿ ಈ ಕಥೆ ಇದೆ.

ಗಜ...—ಮಹಿಷಾಸುರನ ಮಗನಾದ ಗಜನೆಂಬ ಅಸುರನು ಶಿವನಿಂದ ವರಗಳನ್ನು ಪಡೆದು ದೇವತೆಗಳನ್ನು ಕಾಡತೊಡಗಲು, ಶಿವನು ಸಿಟ್ಟಿಗೆದ್ದನು. ಆಗ ಅಸುರನು 'ನನ್ನನ್ನು ಕೊಂದು ನನ್ನ ಚರ್ಮವನ್ನು ನೀನು ಉಡುವೆಯಾದರೆ ನಿನ್ನಿಂದ ಸಾಯುವುದು ನನಗೆ ಇಷ್ಟವಾದುದು' ಎಂದಾಗ ಶಿವನು ಅವನನ್ನು ಕೊಂದು ಆನೆಯ ರೂಪದಲ್ಲಿದ್ದ ಅವನ ಚರ್ಮವನ್ನು ತೊಟ್ಟನು. ಈ ಕಥೆ ಮತ್ಸ್ಯಪುರಾಣದಲ್ಲೂ ಶಿವಪುರಾಣದಲ್ಲೂ ಬಂದಿದೆ.

ಕಪ್ಪರ—ಕೈಯಲ್ಲಿರುವ ಮಂಡಕೆಚೂರು ; ಭಿಕ್ಷೆಬೇಡಲು ಬಳಸುವುದು.

ನಿರ್ಗುಣ—ತ್ರಿಗುಣಾತೀತ.

ಪುರಂದರವಿಠಲನ ಪೊಂದಿದವನ—ಐದನೆಯ ಕಕ್ಷೆಯಲ್ಲಿರುವ ರುದ್ರನು ಸ್ವೋತ್ತಮ ರಾದ ಸರಸ್ವತಿ (ನಾಲ್ಕನೆಯ ಕಕ್ಷೆ), ಬ್ರಹ್ಮ (ಮೂರನೆಯ ಕಕ್ಷೆ), ಲಕ್ಷ್ಮಿ (ಎರಡನೆಯ ಕಕ್ಷೆ) ಇವರ ಮೂಲಕವಾಗಿ ವಿಷ್ಣುವನ್ನು ಪಡೆಯುವನು.

# ಸರಸ್ವತಿ

ದೇವತಾತಾರತಮ್ಯದಲ್ಲಿ ನಾಲ್ಕನೆಯ ಕಕ್ಷೆಯಲ್ಲಿರುವ ಸರಸ್ವತಿಯು ಮೂರನೆಯ ಕಕ್ಷೆಯಲ್ಲಿದ್ದು ಮಹತ್ತತ್ತ್ವಕ್ಕೆ ಅಭಿಮಾನಿಯಾದ ಬ್ರಹ್ಮನ ಹೆಂಡತಿ (ಶಕ್ತಿ) ಯೆಂದೂ, ಮಹದವ್ಯಕ್ತವೆಂಬ ತತ್ತ್ವಕ್ಕೆ ಅಭಿಮಾನಿಯೆಂದೂ ಎಣಿಕೆ. ಮಹತ್ತು ಪುರುಷತತ್ತ್ವ ; ಅವ್ಯಕ್ತ ದೇವೀತತ್ತ್ವ. ಬ್ರಹ್ಮನಿಂದ ಒಂದು ನೂರು ಗುಣಗಳಲ್ಲಿ ಕೆಳಗಿನವಳೆಂದೂ, ಬ್ರಹ್ಮಾಣಿಯಾದ ಇವಳನ್ನು ಎಲ್ಲ ಜೀವರೂ ಗುರುಪತ್ನಿಯೆಂಬ ಭಾವನೆಯಿಂದ ಪೂಜಿಸಬೇಕೆಂದೂ ಒಕ್ಕಣೆಗಳಿವೆ ಪರಶುಕ್ಲತ್ರಯರಲ್ಲಿ ಒಬ್ಬಳಾದ ಇವಳು ಸರ್ವಶಾಸ್ತ್ರರೂಪ ವಾದ ಜ್ಞಾನಕಾಂಡದ ಅಭಿಮಾನಿ. ಬ್ರಹ್ಮನಿಂದ ವೇದಗಳು ಹೊರ ಹೊಮ್ಮಿತಾಗಿ ಅವನು ವೇದಾತ್ಮಕ ; ಅವನ ಶಕ್ತಿಯಾದ ಬ್ರಹ್ಮಾಣಿ ವೇದಾರ್ಥಸ್ವರೂಪಿಣಿ (ಶ್ರುತಿದೇವತೆ). ಸಾಧಕರಿಗೆ ಯುಕ್ತಿಶಾಸ್ತ್ರಗಳಲ್ಲಿ ಮನಸ್ಸನ್ನು ಪ್ರಚೋದಿಸಿ, ಪರಿಶುದ್ಧವಾದ ಬುದ್ಧಿಯನ್ನು ಉಂಟು ಮಾಡುವವಳು.

ಸಾಮಾನ್ಯ ಕಲ್ಪನೆಯಂತೆ ವಿದ್ಯಾಭಿಮಾನಿದೇವತೆ, ವಾಗ್ದೇವತೆ. ವಿದ್ಯಾರಂಭದಲ್ಲಿ ಈಕೆಯ ಪೂಜೆ ವಿಹಿತವಾಗಿದೆ ಸಾತ್ತ್ವಿಕ ಗುಣದ ಉತ್ಕರ್ಷೆಯಿರುವುದರಿಂದ ಶುಕ್ಲಾಂಬರಧರೆ. ಕಲೆಗಳಿಗೆ ಸ್ಫೂರ್ತಿಯ ಸೆಲೆ ಯಾಗಿರುವುದನ್ನು ಸೂಚಿಸಲು ವೀಣಾಪಾಣಿ. ಅರ್ಥವತ್ತಾಗಿ ಮತ್ತು ಪ್ರಭಾವಶಾಲಿಯಾಗಿ ಮಾತನಾಡುವ ಸಾಮರ್ಥ್ಯ ಅವಳಿಂದಲೇ ಆದುದ ರಿಂದ ವಾಣಿ, ವಾಗ್ದೇವಿ. ಶಾಸ್ತ್ರಗಳಲ್ಲಿ ಮನಸ್ಸು ಹೋಗುವಂತೆ ಮಾಡು ವುದನ್ನು ಸೂಚಿಸಲು ಪುಸ್ತಕ ಹಸ್ತೆ.

೨೫

ಕಲ್ಯಾಣಿ ಆದಿ

ಶರಣೆಂಬೆ ವಾಣಿ ಪೊರೆಯೆ ಕಲ್ಯಾಣಿ ಪ

ವಾಗಭಿಮಾನಿ ವರ ಬ್ರಹ್ಮಾಣಿ
ಸುಂದರವೇಣಿ ಸುಚರಿತ್ರಾಣಿ ಅ

ಜಗದೊಳು ನಿಮ್ಮ ಪೊಗಳುವೆನಮ್ಮ
ಹರಿಯ ತೋರಿಸೆಂದು ಪ್ರಾರ್ಥಿಪೆನಮ್ಮ ೧

ಪಾಡುವೆ ಶ್ರುತಿಯ ಬೇಡುವೆ ಮತಿಯ
ಪುರಂದರವಿಠಲನ ಸೋದರಸೊಸೆಯ ೨

ವಾಗಭಿಮಾನಿ—ವಾಗ್ರೂಪವಾದ ಶಾಸ್ತ್ರಗಳಿಗೆ ಅಭಿಮಾನಿದೇವತೆ.

ಬ್ರಹ್ಮಾಣಿ—ಮೂರನೆಯ ಕಕ್ಷೆಯಲ್ಲಿ ಮಹತ್ತತ್ತ್ವಕ್ಕೆ ಅಭಿಮಾನಿಯಾದ ಬ್ರಹ್ಮನ ಹೆಂಡತಿ : ಅವ್ಯಕ್ತಾಭಿಮಾನಿನಿ.

ಸುಂದರವೇಣಿ—ಚೆಲುವಾದ ಜಡೆಯುಳ್ಳವಳು.

ಸುಚರಿತ್ರಾಣಿ—ಒಳ್ಳೆಯ ನಡತೆಯುಳ್ಳವಳು ; ಧರ್ಮಾಭಿಮಾನಿನಿ.

ಹರಿಯ ತೋರಿಸೆಂದು—ಎಲ್ಲ ಶಾಸ್ತ್ರಗಳ ತಾತ್ಪರ್ಯವೂ ವಿಷ್ಣುವಿನಲ್ಲೇ ಇರುವುದರಿಂದ, ಶಾಸ್ತ್ರಾಭಿಮಾನಿನಿಯಾದ ಸರಸ್ವತಿಯ ನೆರವನ್ನು ದಾಸರು ಬೇಡಿದ್ದಾರೆ.

ಪುರಂದರವಿಠಲನ ಸೋದರಸೊಸೆಯ—ಇದು ಅಶುದ್ಧವಾದ ಪಾಠ ; ವಿಷ್ಣುವಿನ ಮಗ ಬ್ರಹ್ಮ ; ಬ್ರಹ್ಮನ ಹೆಂಡತಿ ಸರಸ್ವತಿ ಎಂದಾದರೆ ವಿಷ್ಣುವಿನ ಸೊಸೆಯೇ ಆಯಿತು ; 'ಸೋದರಸೊಸೆ' ಎಂಬ ನೆಂಟು ಕೂಡುವುದಿಲ್ಲ. ಮುಂದಿನ ಕೃತಿಯಲ್ಲಿ "ಇಂದಿರಾರಮಣನ ಹಿರಿಯ ಸೊಸೆಯು ನೀನು" ಎಂದಿರುವುದನ್ನು ಗಮನಿಸಿದರೆ, ಇಲ್ಲಿ 'ಹಿರಿಯ' ಎಂಬುದಕ್ಕೆ ಬದಲಾಗಿ 'ಸೋದರ' ಎಂದು ಲಿಪಿಕಾರರು ಬರೆದರು ಎಂದು ತೋರುತ್ತದೆ.

೩೬

ನಟ್ಟ

ವರ ವೇದ ಪುರಾಣ ವಿವಿಧ ಶಾಸ್ತ್ರಂಗಳಿಗೆ
ಸರಸಿಜೋದ್ಭವನರಸಿ ಸರಸ್ವತೀದೇವಿಯು
ಪರಮ ಮುಖ್ಯಾಭಿಮಾನಿಯೆಂದು ತಿಳಿದು
ನಿರುತ ಭಜಿಸುವ ಜನಕೆ ನಿಜಗತಿಯ ಪಾಲಿಸುವ
ಸಿರಿಯರಸ ಪುರಂದರವಿಠಲ ತಾನೊಲಿವ

ವರ ವೇದ—ಪರಮಪ್ರಮಾಣವೆನಿಸಿದ ಅಪೌರುಷೇಯವಾದ ನಾಲ್ಕು ವೇದಗಳು (ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ).

ಪುರಾಣ — ವೇದವ್ಯಾಸರು ವೇದೋಪಬೃಂಹಣವಾಗಿ ಬರೆದ ಹದಿನೆಂಟು ಪುರಾಣಗಳು; ಪೌರುಷೇಯವೆನಿಸಿಕೊಳ್ಳುವ ಪ್ರಮಾಣ. ಪ್ರಸ್ತಾವನೆ ನೋಡಿ.

ವಿವಿಧಶಾಸ್ತ್ರಂಗಳಿಗೆ—ವೇದಾಂಗಗಳು (ವ್ಯಾಕರಣ, ನಿರುಕ್ತ, ಕಲ್ಪ, ಜ್ಯೋತಿಷ, ಛಂದಸ್ಸು, ಶಿಕ್ಷೆ); ಮೀಮಾಂಸಾ, ಧರ್ಮಶಾಸ್ತ್ರ, ತರ್ಕ, ವೇದಾಂತ, ಸಾಂಖ್ಯ; ಶ್ರುತಿ, ಸ್ಮೃತಿ, ಇತಿಹಾಸ.

ಸರಸಿಜೋದ್ಭವನರಸಿ—ವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿದ ಬ್ರಹ್ಮನ ಅರಸಿ.

ಪರಮಮುಖ್ಯಾಭಿಮಾನಿ—ಮುಕ್ತಿಗೆ ಜ್ಞಾನವೇ ಮುಖ್ಯಸಾಧನವಾದುದರಿಂದ, ಜ್ಞಾನವನ್ನು ಒದಗಿಸುವ ಸಚ್ಛಾಸ್ತ್ರಗಳಿಗೆ ಅಭಿಮಾನಿನಿಯಾದವಳು ; ಆದರೆ ನಾಲ್ಕನೆ ಕಕ್ಷೆಯಲ್ಲಿರುವ ಈ ತತ್ತ್ವಾಭಿಮಾನಿ ದೇವತೆಯು ಅವಾಂತರಸ್ಥಾನದವಳು ; ಅವಳಲ್ಲಿ ಅಂತರ್ಯಾಮಿಯಾಗಿ, ಪ್ರೇರಕನಾಗಿ ನಿಂತು ಅವಳಿಂದ ಕಾರ್ಯ ಮಾಡಿಸುವ ಹರಿಯು ಪರಮಮುಖ್ಯಾಭಿಮಾನಿ.

ತಿಳಿದು ನಿರುತ ಭಜಿಸುವ ಜನಕೆ—ಹೀಗೆ ಹರಿಸರ್ವೋತ್ತಮತ್ವವನ್ನು ಮನಗಂಡು ಭಕ್ತಿ ಮಾಡುವ ಜನರಿಗೆ ಯೋಗ್ಯತಾನುಸಾರವಾಗಿ (ನಿಜ) ಮುಕ್ತಿಯನ್ನು (ಗತಿ) ಕೊಡುವವನು.

## ೩೭

ತೋಡಿ (ಕಾಂಬೋದಿ) ಅಟ್ಟ

ಒಂದೆ ಮನದಲಿ ಭಜಿಸು ವಾಗ್ದೇವಿಯ
ಇಂದುಮತಿ ಕೊಡುವಳು ಶ್ರೀಹರಿಯ ಧ್ಯಾನದೊಳು ಪ

ಹಿಂದೆ ಪ್ರಹ್ಲಾದನು ಕಮಲಜನ ಸತಿಗೆರಗಿ
ಬಂದು ಆರಂಭಿಸಲು ಹರಿ ವಿಶ್ವಮಯನೆಂದು
ಬಂದ ವಿಘ್ನವ ಕಳೆದು ಭಾವಶುದ್ಧಿಯನಿತ್ತು
ಹೊಂದಿಸಿದಳಾ ಶ್ರೀಹರಿಯ ಚರಣವನು ೧

ಅಂದು ದಶಮುಖನನುಜ ವಂದಿಸದೆ ವಾಣಿಯನು
ಬಂದು ತಪವನು ಗೈಯೆ ಬಹುಕಾಲಕೆ
ಅಂದದಿಂದಜ ಮೆಚ್ಚಿ ವರವಧಿಕ ಬೇಡೆನಲು
ಬಂದು ಜಿಹ್ವೆಯಲಿ ನಿದ್ರೆಯನು ಬೇಡಿಸಿದಳು ೨

ಅರಿತು ಭಜಿಸಲು ಬಿಡದೆ ಅಜನರಸಿಯ ನಿತ್ಯ
ಉರುತರವಾದ ವಾಗ್ಬುದ್ಧಿಯನಿತ್ತು
ನಿರುತ ಶ್ರೀ ಪುರಂದರವಿಠ್ಠಲನ ಸೇವೆಯೊಳು
ಪರತತ್ತ್ವದ ಕಥಾಮೃತವನುಣಿಸುವಳು ೩

ವಾಗ್ದೇವಿ—ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕು ಬಗೆಯ ವಾಕ್ಕುಗಳಿಗೂ ಅಭಿಮಾನಿದೇವತೆ.

ಇಂದು—ಈ ಹೊತ್ತು ; ಸದ್ಯಃಫಲಪ್ರದಳಾದವಳು.

ಮತಿ—ಬುದ್ಧಿಯನ್ನು ; ಪ್ರೇರಣೆಯನ್ನು

ಹಿಂದೆ ಪ್ರಹ್ಲಾದನು—ಭಾಗವತದಲ್ಲಿ ಬರುವ ಕತೆ. ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನು ದೈತ್ಯನಾದರೂ ಸರಸ್ವತಿಯನ್ನು ಆರಾಧಿಸಿದುದರಿಂದ ಅವನಲ್ಲಿ ಹರಿಭಕ್ತಿ ನೆಲೆಸಿತು.

ಅಂದು ದಶಮುಖಿನನುಜ—ರಾಮಾಯಣದ ಉತ್ತರಕಾಂಡದಲ್ಲಿ ಬರುವ ಕತೆ. ಬ್ರಹ್ಮನನ್ನು (ಅಜ) ಕುರಿತು ಕುಂಭಕರ್ಣನು (ದಶಮುಖಿನ, ರಾವಣನ; ಅನುಜ, ತಮ್ಮ) ತಪಸ್ಸು ಮಾಡಿದ ಸಂದರ್ಭದಲ್ಲಿ, ಬ್ರಹ್ಮನು ವರವನ್ನು ಕೇಳೆಂದಾಗ ಸರಸ್ವತಿಯು ಅವನ ನಾಲಗೆಯಲ್ಲಿ ನಿಂತು ನಿದ್ರೆಯನ್ನು ಬೇಡುವಂತೆ ಮಾಡಿದಳು.

ಅರಿತು ಭಜಿಸಲು—ಹರಿಯು ಮುಖ್ಯಾಭಿಮಾನಿಯೆಂಬುದನ್ನು ಅರಿತುಕೊಂಡು.

ಅಜನರಸಿಯು—ಬ್ರಹ್ಮ (ಅಜ) ನ ಅರಸಿಯನ್ನು.

ಉರುತರವಾದ—ಶ್ರೇಷ್ಠವಾದ, ಮುಕ್ತಿಗೆ ನೆರವಾಗುವ.

ಪರತತ್ತ್ವದ ಕಥಾಮೃತವನು—ಸರ್ವೋತ್ತಮನಾದ ಹರಿಯ ಹಿರಿಮೆಯನ್ನು ಹೇಳುವ ಕತೆಗಳನ್ನು.



ಮುಖಾರಿ ಆದಿ

ನಲಿದಾಡೆ ಎನ್ನ ನಾಲಿಗೆಯ ಮೇಲೆ, ಸರಸ್ವತೀದೇವಿ
ಕುಣಿದಾಡೆ ಎನ್ನ ನಾಲಿಗೆಯಮೇಲೆ ಪ

ಸಲಿಲಜೋದ್ಭವನ ವದನನಿಲಯಳೆ
ಇಳೆಯೊಳಪ್ರತಿಮ ಗುಣಾಂಬುಧಿ ತಾಯೆ ಅ

ಘಲು ಘಲ್ಲು ಘಲ್ಲು ಗೆಜ್ಜೆಯ ನಾದ
ಭಳಭಳಿರೆ ನಿಮ್ಮ ಹೊಳೆವ ಬೆರಳುಂಗುರ ಕಿಣಿಕಿಣಿನಾದ
ಎಳೆಯಮಾವಿನ ತಳಿರ ಪೋಲುವ ದಿವ್ಯ ಪಾದ ಚೆಲ್ವ ಪೆಂಡೆಯ ನಾದ
ನಲಿವ ಯುಗಳ ಜಂಘೆ ಜಲಗುಳಿಯಂತೆ ಜಾನು
ಥಳಥಳಿಸುವ ತೊಡೆ ಪೊಳೆವ ಸಂಗುಣೆಯೆ ೧

ದಿನಕರ ಕೋಟಿ ತೇಜದಿ ಪೊಳೆವ
ಅನುಪಮವಾದ ಕನಕವಸನದಿಂದ ಎಸೆವ
ಘನವಾದ ಜಘನ ಗಗನದಂದದಿ ಕಟಿಯಲ್ಲಿ ಮೆರೆವ ಮಣಿಮಾಮಾವಿಭವ
ತನು ಜಠರವು ಜಾಹ್ನವಿ ಸುಳಿನಾಭಿಯು
ಘನಸ್ತನ ಯುಗಳ ಚಂದನ ಲೇಪಿತಳೇ ೨

ದುಂಡುಮುತ್ತಿನ ಕೊರಳ ಹಾರ
ಉದ್ದಂಡಮಣಿಯು ಪ್ರಚಂಡ ಮಿಣಿಮಿಣಿಸುವ ಹೊನ್ನಿನ ಸರ
ಕರಿರಾಜ ಪೋತನ ಸೊಂಡಾಲಿಯಂತೆ ಭುಜದ ಭಾರ ನಡೆವ ವಯ್ಯಾರ
ಮಂಡಿತವಾದ ಕಂಕಣ ತೋಳ್ ಬಳೆಗಳು
ದುಂಡುಹವಳ ಕೈಕಟ್ಟುಳ್ಳವಳೆ ೩

ನಸುನಗುಮುಖವು ನಾಸಾಭರಣ
ಎಸೆವ ಕಪೋಲ ಹೊಸಕುಂಡಲ ಚೆಳತುಂಬುಳ್ಳ ಶ್ರವಣ
ಬಿಸಜದಳದಂತೆ ಲಸಿತಾಕರ್ಣಾಂತವಾದ ನಯನ ತಿಲಕದ ಹಸನ
ಶಶಿ ಸೂರ್ಯರ ಆಭರಣ ಸುಶೋಭಿತೆ
ಕುಸುಮ ಮುಡಿದ ಮೂರ್ಧಜವುಳ್ಳವಳೆ ೪

ಶೃಂಗಾರವಾದ ಜಡೆ ಭಂಗಾರ
ಹೊಂಗ್ಯಾದಿಗೆ ಮುಡಿದ ಭಂಗಾರದ ಹೆರಳಿನ ರಾಕಟೆ ವರ
ಭೃಂಗದ ಸ್ವರ ಹಿಂಗದೆ ಭಕ್ತರ ಸಲಹುವ ಭಾರ
ಕಂಗಳ ಮನೋಹರ ರಂಗಪುರಂದರವಿಠ್ಠಲರಾಯನ
ಮಂಗಳಮೂರ್ತಿಯ ತೋರೆ ಶುಭಾಂಗೀ ೫

ಸಲಿಲಜೋದ್ಭವನ—ನೀರಿನಲ್ಲಿ (ಸಲಿಲ) ಹುಟ್ಟಿದ್ದು (ಜ), ತಾವರೆ ; ವಿಷ್ಣುವಿನ ನಾಭಿಕಮಲ ; ಅದರಲ್ಲಿ ಹುಟ್ಟಿದವನು (ಉದ್ಭವ), ಬ್ರಹ್ಮ.

ವದನನಿಲಯಳೇ—ಬ್ರಹ್ಮನ ಮುಖದಲ್ಲಿ ವೇದರೂಪವಾಗಿ ನೆಲೆಸಿದವಳು ಸರಸ್ವತಿ.

ಅಪ್ರತಿಮಗುಣಾಂಬುಧಿ—ಎಣೆಯಿಲ್ಲದ ಗುಣಗಳ ಕಡಲಿನಂತೆ ಇರುವವಳು.

ಪೆಂಡೆ—ಕಾಲಲ್ಲಿ ತೊಡುವ ಆಭರಣ.

ಯುಗಳ ಜಂಘೆ—ಎರಡು ತೊಡೆಗಳು ; ಆದರೆ ಮುಂದೆ 'ತೊಡೆ' ಎಂದು ಪ್ರತ್ಯೇಕವಾಗಿ ಉಲ್ಲೇಖವಿರುವುದರಿಂದ ಕಾಲಿನ ಕೆಳಭಾಗ, ಮೊಣಕಾಲಿನಿಂದ ಪಾದದವರೆಗೆ.

ಜಲಗುಳಿಯಂತೆ ಜಾನು—ನೀರು ಹಾವಿನಂತೆ (ಜಲ-ಕುಲಿಕ) ಇರುವ ಮೊಣಕಾಲು.

ದಿನಕರ ಕೋಟಿ ತೇಜದಿ—ಕೋಟಿ ಸೂರ್ಯ ಪ್ರಕಾಶದಿಂದ.

ಗಗನದಂದದಿ ಕಟಿಯಲ್ಲಿ ಮೆರೆವ ಮಣಿವಾಮಾವಿಭವ—ಆಕಾಶದಂತೆ ಸೂಕ್ಷ್ಮವಾದ ಸೊಂಟದಲ್ಲಿ ಕಟ್ಟಿದ, ಹೊಳೆಯುವ ಮಣಿಗಳನ್ನು ಪೋಣಿಸಿದ ಮೌಂಜೀ ಪಟ್ಟಿ (ವಾಮೆ ಎಂದರೆ ಹುಲ್ಲು, ಬಣಂಬೆ).

ತನುಜಠರವು—ತೆಳ್ಳಗಿರುವ ಹೊಟ್ಟೆ (ಕೃಶೋದರ).

ಜಾಹ್ನವಿ ಸುಳಿನಾಭಿಯು—ಗಂಗೆಯಂತೆ ಸುತ್ತಿಕೊಂಡ ಹೊಕ್ಕುಳು.

ಕರಿರಾಜಪೋತನ—ಆನೆಮರಿಯ.

ಚೆಳತುಂಬುಳ್ಳ ಶ್ರವಣ—ಓಲೆಯಿರುವ ಕಿವಿಗಳು.

ಬಿಸಜದಳದಂತೆ ಲಸಿತಾಕರ್ಣಾಂತವಾದ ನಯನ—ತಾವರೆ ಹೂವಿನಂತೆ ಕಾಣುವ, ಚಂಚಲವಾದ ನೋಟವುಳ್ಳ, ಕಿವಿಗಳವರೆಗೂ ಹರಡಿರುವ (ಉದ್ದವಾದ) ಕಣ್ಣುಗಳು.

ಕುಸುಮ ಮುಡಿದ ಮೂರ್ಧಜ—ಹೂವು ಮುಡಿದ ಕೂದಲು (ಮೂರ್ಧ-ಜ, ತಲೆಯಲ್ಲಿ ಹುಟ್ಟಿದ್ದು).

ಹೊಂಗ್ಯಾದಿಗೆ—ಹಳದಿಬಣ್ಣದ ಕೇದಿಗೆ.

ಭೃಂಗದ ಸ್ವರ—ದುಂಬಿಯ ದನಿಯಂತೆ (ಝೇಂಕಾರ).

ವಸಂತ ಆದಿ

ಕೊಡು ಬೇಗ ದಿವ್ಯಮತಿ ಸರಸ್ವತಿ
ಕೊಡು ಬೇಗ ದಿವ್ಯಮತಿ ಪ

ಮೃಡಹರಿಹಯಮುಖರೊಡೆಯಳೆ ನಿನ್ನಯ
ಅಡಿಗಳಿಗೆರಗುವೆ ಅಮ್ಮ ಬ್ರಹ್ಮನ ರಾಣಿ ಅ

ಇಂದಿರಾರಮಣನ ಹಿರಿಯ ಸೊಸೆಯು ನೀನು
ಬಂದೆನ್ನ ವದನದಿ ನಿಂದು ನಾಮವ ನುಡಿಸೆ ೧

ಅಖಿಳ ವಿದ್ಯಾಭಿಮಾನಿ ಅಜನ ಪಟ್ಟದ ರಾಣಿ
ಸುಖವಿತ್ತು ಪಾಲಿಸೆ ಸುಜನಶಿರೋಮಣಿ ೨

ಪತಿತಪಾವನೆ ನೀ ಗತಿಯೆಂದು ನಂಬಿದೆ
ಸತತ ಪುರಂದರವಿಠಲನ ತೋರೆ ೩

ಮೃಡಹರಿಹಯಮುಖರೊಡೆಯಳೆ—ಶಿವ (ಮೃಡ), ಹರಿಹಯ (ಇಂದ್ರ) ಮೊದಲಾದ ದೇವತೆಗಳ ಒಡೆಯಳು ; ಶಿವನು ದೇವತಾತಾರತಮ್ಯದಲ್ಲಿ ಐದನೆಯ ಕಕ್ಷೆಯಲ್ಲೂ ಇಂದ್ರನು ಎಂಟನೆಯ ಕಕ್ಷೆಯಲ್ಲೂ ಇದ್ದು ಸರಸ್ವತಿಯು ನಾಲ್ಕನೆಯ ಕಕ್ಷೆಯಲ್ಲಿರುವುದರಿಂದ ಅವರಿಗೆ ಉತ್ತಮಳು.

ಹಿರಿಯ ಸೊಸೆ—ಸೃಷ್ಟಿಗೆ ಮೊದಲಲ್ಲಿ ವಿಷ್ಣುವಿನ ನಾಭಿಕಮಲದಿಂದ ತೋರಿಕೊಂಡ ಬ್ರಹ್ಮ ಹಿರಿಯ ಮಗ ; ಅವನ ಹೆಂಡತಿ ಸರಸ್ವತಿ.

ನಾಮವ—ಹರಿನಾಮವನ್ನು.

# ಭಾರತಿ

ನಾಲ್ಕನೆಯ ಕಕ್ಷೆಯಲ್ಲೇ ಸರಸ್ವತಿಯೊಂದಿಗೆ ಇರುವ ದೇವತೆ ; ಸಾಮಾನ್ಯ ಕಲ್ಪನೆಯಲ್ಲಿ ಸರಸ್ವತಿಗೆ ಪರ್ಯಾಯವಾಗಿ ಭಾರತಿಯೆಂಬ ಹೆಸರು ಇದು ಸ್ಥೂಲವಾಗಿ ಸರಿಯಾದರೂ ದೇವತಾತಾರತಮ್ಯದಲ್ಲಿ ಸರಸ್ವತಿಗಿಂತ ಬೇರೆಯಾದ, ಸ್ವಲ್ಪ ಕೆಳಗಿನ ನೆಲೆಯ ದೇವತೆ (ಪದವಿಯಲ್ಲಿ ಅಲ್ಪನ್ಯೂನಳು). ಎಲ್ಲ ಸರ್ವನಾಮಗಳನ್ನು ಪೂರಯಿಸುವುದರಿಂದ ಭಾರತಿ ('ಬಿಭರ್ತಿ ಇತಿ') ಜಗತ್ತು ನಾಮ–ರೂಪ–ಕರ್ಮಾತ್ಮಕವಾಗಿದ್ದು ಒಂದೊಂದು ಪ್ರಕಾರಕ್ಕೂ ವಿಶಿಷ್ಟ ಅಭಿಮಾನಿದೇವತೆಯಿದೆ. ನಾಮಕ್ಕೆ ಭಾರತಿ, ರೂಪಕ್ಕೆ ರುದ್ರ, ಕರ್ಮಕ್ಕೆ ಆತ್ಮಪ್ರಾಣ (ಮುಖ್ಯಪ್ರಾಣ, ವಾಯುದೇವರು) ಅಭಿಮಾನಿದೇವತೆಗಳು. ನಾಮ–ರೂಪಗಳಿಗೆ ಆತ್ಮಶಬ್ದ ವಾಚ್ಯನೇ ಮುಖ್ಯನಾದುದರಿಂದ ವಾಯುದೇವರೇ ಉಳಿದ ಇಬ್ಬರಿಗೂ ನಿಯಾಮಕ. ಈ ದೃಷ್ಟಿಯಿಂದ ಭಾರತಿಯನ್ನು ವಾಯುಪತ್ನಿ ಎಂದು ನಿರ್ದೇಶಿಸುತ್ತಾರೆ. ಹನುಮಂತ 'ಭಾರತೀರಮಣ'ನಾಗಿರುವುದು ಹೀಗೆ.

ತ್ರೇತಾಯುಗದಲ್ಲಿ ಭಾರತಿಯ ಮೊದಲಜನ್ಮ ಶಿವಬ್ರಾಹ್ಮಣನ ಮಗಳಾಗಿ ; ಆಗ ಅಲ್ಪಾಯು. ಎರಡನೆಯ ಜನ್ಮ ನಲ–ದಮಯಂತಿಯರ ಮಗಳಾಗಿ ಇಂದ್ರಸೇನೆ ಎಂಬ ಹೆಸರಿನಿಂದ. ಆಗ ಮೌದ್ಗಲ್ಯ ಋಷಿಯ ಶಾಪವನ್ನು ತಳೆದು ದ್ವಾಪರಯುಗದಲ್ಲಿ ಯಜ್ಞಕುಂಡದಿಂದ ಹೊರಬಂದು ದ್ರೌಪದಿಯಾದಳು. ಈ ಜನ್ಮದಲ್ಲಿ ವಾಯುದೇವರ ಅವತಾರವಾದ ಭೀಮಸೇನನ ಹೆಂಡತಿ. ಅವಳ ಮೂರನೆಯ ಜನ್ಮದಲ್ಲಿ ಹನುಮಂತ ನೊಂದಿಗೆ ಯಾವ ಸಂಬಂಧವೂ ಇರದು. ಹನುಮಂತ ಬ್ರಹ್ಮಚಾರಿ ; ಹನುಮಂತನ ಕಲಿಯುಗಾವತಾರವಾದ ಮಧ್ವಾಚಾರ್ಯರು ಸಂನ್ಯಾಸಿ.

ಖರಹರಪ್ರಿಯ ಆದಿ

ಭಾರತಿದೇವಿಯು ನೆನೆ ನೆನೆ
ನಿರುತ ಭಕುತಿಗಿದು ಮನೆ ಮನೆ ಪ

ಮಾರುತನರ್ಧಾಂಗಿ ಸುಚರಿತ ಕೋಮಲಾಂಗಿ
ಸಾರಸಾಕ್ಷಿ ಕೃಪಾಂಗಿ ಅಪಾಂಗಿ ೧

ಕಿಂಕಿಣಿ ಕಿಣಿಪಾದ ಪಂಕಜನೂಪುರ
ಕಂಕಣ ಕುಂಡಲಾಲಂಕೃತ ದೇಹ ೨

ಶಂಕರ ಸುರವರ ವಂದಿತ ಚರಣೆ
ಕಿಂಕರಿ ಪುರಂದರವಿಠ್ಠಲ ಕರುಣೆ ೩

ನಿರುತ ಭಕುತಿಗೆ—ಹರಿಯಲ್ಲಿ ಮನಃಪ್ರಾವಣ್ಯವನ್ನೊದಗಿಸಿ ಭಕ್ತಿಯನ್ನು ಪ್ರೇರಿಸುವವಳು.

ಮಾರುತನ ಅರ್ಧಾಂಗಿ ಮರುದ್ಗಣಗಳ ಮಗನಾದ ಹನುಮಂತನ ಹೆಂಡತಿ (ತನ್ನ ಹಿಂದಿನ ಎರಡು ಜನ್ಮಗಳಲ್ಲಿ).

ಸಾರಸಾಕ್ಷಿ—ಸರಸ್ಸಿನಲ್ಲಿ (ಕೊಳದಲ್ಲಿ) ಹುಟ್ಟಿದ್ದು ಸಾರಸ, ತಾವರೆ ; ಅದರಂತೆ ಚೆಲುವಾದ ಕಣ್ಣುಳ್ಳವಳು.

ಕೃಪಾಂಗಿ ಅಪಾಂಗಿ—ತನ್ನ ಕಡೆಗಣ್ಣಿಂದ (ಅಪಾಂಗ) ಕರುಣೆಯನ್ನು ಸೂಸುವವಳು.

ಕಿಂಕಿಣಿ—ಕಿರುಗೆಜ್ಜೆ.

ಪಂಕಜನೂಪುರ—ತಾವರೆ ಹೂವಿನ ಆಕಾರದಲ್ಲಿರುವ ಕಾಲುಂಗುರ

ಕಂಕಣ ಕುಂಡಲ—ಕೈಬಳೆ, ಓಲೆ.

ಶಂಕರ ಸುರವರ ವಂದಿತ ಚರಣೆ—ತನ್ನ ಕಕ್ಷೆಗಿಂತ ಕೆಳಕಕ್ಷೆಯಲ್ಲಿರುವ ರುದ್ರ, ಮತ್ತಿತರ ತತ್ತ್ವೇಶರಿಂದ ಸೇವಿಸಲ್ಪಡುವವಳು.

ಕಿಂಕರಿ —ಹರಿಯ ಸೇವಕಳು.

## ೪೧

ನಟ್ಟ ತ್ರಿವಿಡೆ

ಶರಣು ಭಾರತಿದೇವಿಗೆ
ಶರಣು ವಾಯುರಮಣಿಗೆ ಪ

ಶರಣು ಶರಣರ ಪೊರೆವ ಕರುಣಿಗೆ
ಶರಣು ಸುರವರ ದೇವಿಗೆ ಅ

ಸುರರು ಮೊದಲಾದವರಿಗೆಲ್ಲ
ಪರಮ ಮಂಗಳವೀವಳೆ
ಚರಣ ಕಮಲಕೆ ಮೊರೆಯ ಹೊಕ್ಕೆನು
ಕರುಣಿಸೆನಗೆ ಮತಿಗಳಾ ೧

ಪಿಂಗಳರೂಪಳೆ ಮಂಗಳ ಮಹಿಮಳೆ
ಹಿಂಗದೆ ಕೊಡು ಹರಿಭಕುತಿಯ
ರಂಗನಾಥ ಪದಾಬ್ಜ ಭೃಂಗಳೆ
ಅಂತರಂಗದ ಪ್ರಿಯಳೆ ೨

ಪಕ್ಷಿವಾಹನ ಲಕ್ಷ್ಮೀರಮಣನ
ಸಾಕ್ಷಿ ಪುರಂದರವಿಠಲನೊಳ್
ಅಕ್ಷಯದಿಂದಲಿ ಕೊಟ್ಟು ಭಕುತಿಯ
ರಕ್ಷಿಸೆನ್ನನು ಅನುದಿನ ೩

ಪಿಂಗಳೆರೂಪಳೆ—ಕೆಂಪು ಕೂಡಿದ ಹಳದಿ ಬಣ್ಣ ; ಒಂದು ಬಗೆಯ ಹಾವಿನ ಬಣ್ಣ.
ಪದಾಬ್ಜ ಭೃಂಗಳೆ—ಚರಣಗಳೆಂಬ ತಾವರೆಯಲ್ಲಿ ಸುಳಿದಾಳುವ ದುಂಬಿ.
ಪಕ್ಷಿವಾಹನ—ಗರುಡನನ್ನೇರಿ ಹೋಗುವ.
ಸಾಕ್ಷಿ—ಹರಿಯು ಎಲ್ಲಕ್ಕೂ ಪ್ರೇರಕನಾದರೂ ನಿಯಾಮಕನಾದರೂ ನಿರ್ಲಿಪ್ತನಾಗಿ, ಕರ್ಮಫಲವನ್ನು ಭೋಗಿಸದೆ ಇರುವ ಕೇವಲ ಸಾಕ್ಷಿ.

ಕಾಂಬೋದಿ ಝಂಪೆ

ಏನು ಮರುಳಾದೆಯೆ ಎಲೆ ಭಾರತಿ ಪ

ವಾನರ ಕುಲದೊಳಗೆ ಶ್ರೇಷ್ಠನಾದವಗೆ ಅ

ಕಣ್ಣಿಲ್ಲದವಳ ಗರ್ಭದಲಿ ಜನಿಸಿ ಬಂದು
ನಿನ್ನ ತೊರೆದು ಬ್ರಹ್ಮಚಾರಿಯಾದ
ಹೆಣ್ಣಿಗಾಗಿ ಪೋಗಿ ವನವ ಕಿತ್ತೀಡಾಡಿ
ಉಣ್ಣಕರೆದರೆ ಎಂಜಲೆಡೆಯನೊಯ್ದವಗೆ ೧

ಹುಟ್ಟಿದನು ಗುರುತಲ್ಪಗಾಮಿಯಾ ವಂಶದಲಿ
ನೆಟ್ಟಿರುಳೊಳೊಬ್ಬ ಅಸುರಿಯ ಕೂಡಿದ
ಹೊಟ್ಟೆಗೆಂತಲಿ ಹೋಗಿ ಭಿಕ್ಷದನ್ನವನುಂಡು
ಅಟ್ಟುಹಾಕುವನಾಗಿ ದಿನವ ಕಳೆದವಗೆ ೨

ಮಂಡೆ ಬೋಳಾಗಿ ಭೂಮಂಡಲವ ತಿರುಗಿದ
ಕಂಡವರು ಯಾರು ಈತನ ಗುಣಗಳ
ಪುಂಡರೀಕಾಕ್ಷ ಶ್ರೀಪುರಂದರವಿಠಲನ
ಕೊಂಡಾಡುತಲಿ ಬೋರೆಮರದ ಕೆಳಗಿದ್ದವಗೆ ೩

[ದಿಟವಾಗಿ ಇದು ವಾಯುದೇವರ ಅವತಾರತ್ರಯದ ವರ್ಣನೆ. ಆದರೆ ಭಾರತೀ ದೇವಿಯನ್ನು ಉದ್ದೇಶಿಸಿ ಹಾಡಿರುವುದರಿಂದ ಇಲ್ಲಿ ಸೇರಿಸಿದೆ.]

ಕಣ್ಣಿಲ್ಲದವಳ ಗರ್ಭದಲಿ ಜನಿಸಿ—ಅಂಜನೆಯ ಬಸಿರಲ್ಲಿ. ಅಹಲ್ಯೆ ಮತ್ತು ಗೌತಮರ ಮಗಳಾದ ಅಂಜನೆಯು ತಾಯ ಶಾಪದಿಂದ ಕುರುಡಿಯಾದ ಕತೆ ಇದರ ಹಿನ್ನೆಲೆ. ಅಹಲ್ಯೆಯು ಗುಟ್ಟಾಗಿ ಇಂದ್ರನಿಂದ ಒಬ್ಬ ಮಗನನ್ನೂ ಸೂರ್ಯನಿಂದ ಮತ್ತೊಬ್ಬ ಮಗನನ್ನೂ ಪಡೆದುಕೊಂಡಳೆಂದೂ, ಈ ಗುಟ್ಟನ್ನು ತಿಳಿದಿದ್ದ ಮಗಳು ಗೌತಮರಿಗೆ ಅದನ್ನು ಬಯಲುಮಾಡಿದಳೆಂದೂ ತಾಯಿ ಸಿಟ್ಟಿಗೆದ್ದು ಮಗಳಿಗೆ ಶಾಪ ಕೊಟ್ಟಳೆಂದೂ ತೆಲುಗಿನಲ್ಲಿರುವ 'ವಚನವಿಚಿತ್ರ ರಾಮಾಯಣಮು' ಎಂಬ ಗ್ರಂಥದಲ್ಲಿದೆ.

ನಿನ್ನ ತೊರೆದು—ತ್ರೇತಾಯುಗದ ಹನುಮಂತನ ಅವತಾರದಲ್ಲಿ ಅವನು ನೈಷ್ಠಿಕ ಬ್ರಹ್ಮಚಾರಿ.

ಹೆಣ್ಣಿಗಾಗಿ ಪೋಗಿ...—ಸೀತೆಯನ್ನು ಅರಸುತ್ತ ಲಂಕೆಗೆ ಹೋಗಿ, ಅಶೋಕವನವನ್ನು ನಾಶಮಾಡಿದನು.

ಉಣ್ಣ ಕರೆದರೆ...—ರಾಮನು ಲಂಕೆಯಿಂದ ಹಿಂದಿರುಗಿದ ಮೇಲೆ ಅಯೋಧ್ಯೆಯಲ್ಲಿ ನಡೆದ ಭೋಜನಕೂಟದಲ್ಲಿ ರಾಮನು ಹನುಮಂತನನ್ನು ತನ್ನ ಜೊತೆ ಕುಳಿತು ಊಟಮಾಡೆಂದು ಕರೆದಾಗ, ಸೇವಕನಾದ ತಾನು ಅವನಿಂದ ದೊರೆತ ಭಕ್ಷ್ಯವನ್ನು ಪ್ರಸಾದವೆಂದು ಪಡೆದುಹೋದ.

ಹುಟ್ಟಿದನು...—ಚಂದ್ರನು ತನ್ನ ಗುರುಪತ್ನಿಯಾದ ತಾರೆಯನ್ನು ಕೂಡಿಕೊಂಡನಾಗಿ ಅವನು ಗುರುತಲ್ಪಗಾಮಿ, ಅವನ ವಂಶ ಚಂದ್ರ ವಂಶ.

ನಟ್ಟಿರುಳೊಳೊಬ್ಬ. .—ಭೀಮನು ರಾತ್ರಿಯಲ್ಲಿ ಅರಣ್ಯದಲ್ಲಿ ಹಿಡಿಂಬೆಯೆಂಬ ರಾಕ್ಷಸಿಯೊಂದಿಗೆ ಕೂಡಿಕೊಂಡದ್ದು ಮಹಾಭಾರತದ ಆದಿಪರ್ವದಲ್ಲಿ ಬರುತ್ತದೆ.

ಹೊಟ್ಟೆಗೆಂತಲೆ...—ಏಕಚಕ್ರನಗರಿಯಲ್ಲಿ ಭಿಕ್ಷೆಬೇಡಿ ಅನ್ನವನ್ನು ತರುತ್ತಿದ್ದವನು ಐವರು ಪಾಂಡವರಲ್ಲಿ ಭೀಮನೊಬ್ಬನೇ. ಇದನ್ನೂ ಅವನ ಅಗತ್ಯವನ್ನೂ ಗಮನಿಸಿ ತಾಯಿಯಾದ ಕುಂತಿ ಅವನು ತಂದ ಭಿಕ್ಷಾನ್ನದಲ್ಲಿ ಅರ್ಧಭಾಗವನ್ನು ಅವನಿಗೇ ಕೊಡುತ್ತಿದ್ದಳು.

ಅಟ್ಟುಹಾಕುವನಾಗಿ—ವಲಲನಾಗಿ. ವಿರಾಟನಗರದಲ್ಲಿ ಪಾಂಡವರು ಅಜ್ಞಾತವಾಸ ಮಾಡುತ್ತಿರುವಾಗ ಭೀಮನು ಅರಮನೆಯ ಅಡುಗೆಯವನಾಗಿದ್ದ ಸಂದರ್ಭ.

ಮಂಡೆ ಬೋಳಾಗಿ—ಸಂನ್ಯಾಸಿಯಾಗಿ.

ಬೋರೆಮರದ ಕೆಳಗಿದ್ದವಗೆ—ಬೋರೆಮರವೆಂದರೆ ಬದರಿ ; ಹಿರಿಯ ಬದರಿಯಲ್ಲಿ ವೇದವ್ಯಾಸರು ಆಶ್ರಮದ ಬೋರೆಮರದಡಿಯಲ್ಲಿ ಕುಳಿತಿದ್ದಾರೆಂದೂ, ಮಧ್ವಾಚಾರ್ಯರು ಅವರನ್ನು ಅಲ್ಲಿಯೇ ಕಂಡು, ಅವರ ಬಳಿ ಉಳಿದಿದ್ದರೆಂದೂ ಸಂದರ್ಭ.

ಕೇದಾರಗೌಳ ಅಟ್ಟ

ಭಾರತೀದೇವಿ ತಾಯೆ ನೀ ಕಾಯೆ
ಮಾರುತನ ರಾಣಿಯೆ ಪ

ಸೇರಿದೆ ನಿನ ಪಾದಸೇವಕನೆನಿಸಮ್ಮ ಅ

ಪನ್ನಗೇಶ ಸುಪರ್ಣಪನ್ನಗಭೂಷಣ
ಚಿನ್ನುಮಯು ಸುರರಿಂ ಸೇವಿತೆ
ಘನ್ನಮಹಿಮಳೆ ಇನ್ನೇನ ಬಣ್ಣಿಪೆ
ನಿನ್ನ ಪತಿಗೆ ಬಿನ್ನವಿಸೆನ್ನನುದ್ಧರಿಸಮ್ಮ ೧

ಮುಕ್ತಾಮುಕ್ತರೊಡೆಯಳೆ ತತ್ತ್ವಾಭಿಮಾನಿ
ರಕ್ತ ಶುಕ್ಲ ಸಂಬಂಧ ತನುದೂರಳೆ
ಉತ್ತಮಗುಣನಿಧಿ ಶ್ರೀಶನ ಭಜಿಪಳೆ
ಚಿತ್ತ ಬಂದಂತೆನ್ನ ಭೃತ್ಯನೆಂದೆಣಿಸಮ್ಮ ೨

ಮತ್ತೊಂದು ಅನ್ಯಾಶ್ರಯವು ನೋಡಿದರಿಲ್ಲ
ಇತ್ತ ಬಾರೆಂತೆಂದು ಕರೆವರಿಲ್ಲ
ಚಿತ್ತಜನಯ್ಯ ಶ್ರೀ ಪುರಂದರವಿಠಲನ
ಭೃತ್ಯರ ಭೃತ್ಯರ ಭೃತ್ಯನೆಂದೆಣಿಸಮ್ಮ ೩

ಪನ್ನಗೇಶ ಸುಪರ್ಣಪನ್ನಗಭೂಷಣ—ಶೇಷ, ಗರುಡ, ರುದ್ರರು ; ಒಂದೇ ಕಕ್ಷೆಯಲ್ಲಿರುವ (ಐದನೆಯದು) ತತ್ತ್ವಾಭಿಮಾನಿ ದೇವತೆಗಳು ; ಇವರಿಗಿಂತ ಮೇಲಿನ (ನಾಲ್ಕನೆಯ) ಕಕ್ಷೆಯಲ್ಲಿರುವ ಭಾರತೀದೇವಿಗೆ ಅವರರು, ಆದುದರಿಂದ ಅವಳನ್ನು ಸೇವಿಸುವರು.

ಚಿನ್ನುಮಯು — ಚಿನ್ಮಯು.

ನಿನ್ನ ಪತಿಗೆ—ಭಾರತಿಗಿಂತ ಮೇಲಿನ ಕಕ್ಷೆಯಲ್ಲಿರುತ್ತ, ಸರ್ವಜೀವೋತ್ತಮನಾದ, ಹರಿಯ ಅನುಜ್ಞೆಯಿಂದ ಮೋಕ್ಷಪ್ರದನಾದ, ವಾಯುದೇವರಿಗೆ.

ಮುಕ್ತಾಮುಕ್ತರೊಡೆಯಳೆ—ಜೀವರಲ್ಲಿ ಮುಕ್ತರು, ಬದ್ಧರು (ಅಮುಕ್ತರು) ಎಂದೆರಡು ವಿಭಾಗ. ಇಬ್ಬರಿಗೂ ಭಕ್ತಿ ಪ್ರಧಾನಸಾಧನವಾದುದರಿಂದ, ಭಕ್ತಿದಾಯಕಳು ಭಾರತೀದೇವಿಯಾದ್ದರಿಂದ ಒಡೆಯಳು.

ರಕ್ತ ಶುಕ್ಲ ಸಂಬಂಧ ತನುದೂರಳೆ—ಪ್ರಾಕೃತ ಗುಣಗಳಿಂದ ಒದಗುವ ಶರೀರದ ಸಂಬಂಧವನ್ನು ಬಿಟ್ಟವಳು ; ತತ್ತ್ವಾಭಿಮಾನಿದೇವತೆಗಳ ದೇಹವು ಅವರವರ ಯೋಗ್ಯತೆಗೆ ತಕ್ಕಂತೆ ಶುದ್ಧಸತ್ತ್ವದಿಂದ ನಿರ್ಮಾಣವಾಗುತ್ತದೆ. ಶುದ್ಧಸತ್ತ್ವವೆಂದರೆ ಮಹತ್ತತ್ತ್ವ. ಅದರಿಂದ ಒದಗುವ ಅಹಂಕಾರ ತತ್ತ್ವದಲ್ಲಿ ಶುಕ್ಲ, ರಕ್ತ, ಕೃಷ್ಣ ಎಂಬ ಗುಣವಿಭಾಗವಿದೆ. ಶುಕ್ಲಾಣುಗಳಿಂದ ಬುದ್ಧಿ ಮತ್ತು ಮನಸ್ಸು, ರಕ್ತಾಣುಗಳಿಂದ ಹತ್ತು ಇಂದ್ರಿಯಗಳು ಸಿದ್ಧವಾಗುತ್ತವೆ. ಭಾರತೀದೇವಿಯರ ಶರೀರವು ಈ ಅಧಿಷ್ಠಾನದ ಅಗತ್ಯವಿಲ್ಲದ್ದು.

ಉತ್ತಮಗುಣನಿಧಿ—ಸಕಲಕಲ್ಯಾಣಗುಣಗಳಿಂದ ಪೂರ್ಣನಾದ.

ಚಿತ್ತಜನಯ್ಯ—ಮನ್ಮಥನ ತಂದೆ.



ನಟ್ಟ ಝಂಪೆ

ಸಕಲ ಸಾಧನಕೆಲ್ಲ ಸಿದ್ಧಿಗೊಳಿಸುವುದು ಪ
ಭಕುತಿ ಕಾರಣವಲ್ಲದೆ ಬೇರೆ ಸಾಧನವುಂಟೆ

ಯುಕುತಿ ಜನರೆಲ್ಲ ಕೇಳಿ ಇತರ ಸಾಧನಕೆಲ್ಲ ಅ

ಭಕುತಿಗಭಿಮಾನಿ ಭಾರತೀದೇವಿಯರ ಕರುಣ
ಯುಕುತಿ ಸಾಧನವೆಂದು ಮನದಿ ಭಜಿಸಿ
ಅಖಿಲೇಶ ಪುರಂದರವಿಠಲ ತಾನೊಲಿವ ೧

[ಭಕ್ತಿಯೇ ಮುಖ್ಯಸಾಧನವೆಂದೂ, ಸಾಧಕರ ಭಕ್ತಿಗೆ ಭಾರತೀದೇವಿಯೇ ಅಭಿಮಾನಿದೇವತೆಯೆಂದೂ, ಭಕ್ತರು ಭಾರತೀದೇವಿಯನ್ನು ಭಜಿಸಬೇಕೆಂದೂ ಈ ಪದದ ಭಾವ.]



# ವಾಯು

ವಾಯುದೇವ, ಮಾರುತಿ, ಮುಖ್ಯಪ್ರಾಣ, ಹನುಮಂತ, ಆಂಜನೇಯ, ಸಂಜೀವ ಇವೆಲ್ಲ ಪರ್ಯಾಯಪದಗಳು. ಮಾಧ್ವಸಂಪ್ರದಾಯದಲ್ಲಿ ಈ ದೇವತೆಗೆ ವಿಶೇಷವಾದ ಸ್ಥಾನವಿದೆ. ದೇವತಾತಾರತಮ್ಯದಲ್ಲಿ ಲಕ್ಷ್ಮೀನಾರಾಯಣರನ್ನು ಬಿಟ್ಟರೆ ಇವನೇ ಎಲ್ಲ ತತ್ತ್ವೇಶರಲ್ಲಿಯೂ ಶ್ರೇಷ್ಠ ; ನಾರಾಯಣನು ಸರ್ವೋತ್ತಮನಾದರೆ, ಇವನು ಜೀವೋತ್ತಮ. ಲಕ್ಷ್ಮೀನಾರಾಯಣರಿಬ್ಬರು ಈಶಕೋಟಿಗೆ ಸೇರಿದವರು ; ಉಳಿದವರೆಲ್ಲ ಜೀವರೇ, ಲಕ್ಷ್ಮೀನಾರಾಯಣರಿಗೆ ಅಧೀನರು. ಇವರಲ್ಲಿ ಲಕ್ಷ್ಮೀನಾರಾಯಣರ ಅನುಗ್ರಹವನ್ನು ಪೂರ್ಣವಾಗಿ ಪಡೆದುಕೊಂಡು, ಲಕ್ಷ್ಮಿಯನ್ನು ಸದಾ ನೋಡುತ್ತಿರುವವನು ವಾಯುದೇವನೇ. ಅವನು ಜೀವನಾದರೂ ನಿರ್ದೋಷ, ಪಾಪಮುಕ್ತ, ಉಳಿದೆಲ್ಲ ಜೀವರಿಗೂ ಅಂತಃಪ್ರೇರಕ. ಜ್ಞಾನ ಭಕ್ತಿ ವೈರಾಗ್ಯಗಳಲ್ಲಿ ಇವನಿಗೆ ಸಮನಾದವರು, ಉತ್ತಮರಾದವರು ಯಾರೂ ಇಲ್ಲ. ಹಾಗೆಂದೇ ಜೀವೋತ್ತಮ. ಮತ್ತು ಪರಮಾತ್ಮನನ್ನು ಕುರಿತ ಜ್ಞಾನ ಅವನಲ್ಲಿರುವಂತೆ ಉಳಿದ ಯಾವ ದೇವತೆಯಲ್ಲೂ ಇರದು. ಬ್ರಹ್ಮಾಂಡದಲ್ಲಿ ನಡೆಯುವ ವ್ಯಾಪಾರಗಳನ್ನೆಲ್ಲ ಅಶೇಷವಾಗಿ ಅರಿತುಕೊಳ್ಳುವ ಸಾಮರ್ಥ್ಯ ಇರುವುದರಿಂದ ಜ್ಞಾನಿ. ಮುಕ್ತರ ಕೋಟಿಯಲ್ಲಿ ಸೇರಿದವನಾಗಿ ಅವನಿಗೆ ದುಃಖಸ್ಪರ್ಶವಿಲ್ಲ. ಸರ್ವದಾ ಹರಿಸೇವೆಯಲ್ಲಿ ತೊಡಗಿದ್ದು ಹರಿಯ ಮಾಹಾತ್ಮ್ಯವನ್ನು ಇತರ ಜೀವರಿಗೆ ತಿಳಿಯಪಡಿಸುವವನಾಗಿ ಜಗದ್ಗುರು. ಅವನ ಉಪದೇಶವೇ ಸಚ್ಛಾಸ್ತ್ರ. ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಮುಕ್ತಿಗಳೆಂಬ ಎಂಟು ಮಹಾಕಾರ್ಯಗಳಲ್ಲಿ ಹರಿಗೆ ಅವನೇ ಮುಖ್ಯವಾದ ಅಂಗ. ಮುಕ್ತಿಯೋಗ್ಯರಾದ ಸಾತ್ತ್ವಿಕ ಜೀವಗಳಿಗೆ ಅವರವರ ಸ್ವರೂಪಗಳನ್ನರಿತು ಮುಕ್ತಿಯನ್ನು ಕೊಡುವವನೂ ಅವನೇ, ಆದರೆ ಹರಿಯ ಅನುಜ್ಞೆಯಿಂದ. ಆದುದರಿಂದ 'ಜೀವಕೋಟಿಯೊಳು ನೀ ಹಿರಿಯ, ನೀ ಒಲಿಯದಿರೆ ಹರಿ ಎಮ್ಮ ಪೊರೆಯ' ಎಂದು ದಾಸರ ನಂಬಿಕೆ.

ಸಾಧಕರಿಗೆ ಅವನು ಮಾರ್ಗದರ್ಶಿ. ಅನನ್ಯ ಭಕ್ತಿಗೆ ಅತ್ಯುತ್ತಮ ನಿದರ್ಶನ. "ಮನ ವಚನ ಕಾಯಕದಿಂದ, ಅನ್ಯವನರಿಯದ ಹನುಮಂತನ, ನಿನ್ನ ದಾಸನೆಂದೆನಿಸಿದೆಯಯ್ಯ" (ಅಚಲಾನಂದದಾಸರು) ; "ಹನುಮಂತನ ನೋಡು, ತನ್ನ ತನುಮನಧನ ಹರಿಗೊಪ್ಪಿಸಿಹ" (ವಾದಿರಾಜರು) ; "ಇದಿರ್ಯಾರೋ ಗುರುವೇ ಸಮರ್ಯಾರೋ, ಮದನ ಜನಕ ಪದಪದುಮಪಟ್ಟದನೆ" (ನರಹರಿತೀರ್ಥರು). ವಾಯುವಿನ ಗುಣಗಳಲ್ಲಿ 'ಪರಮೋತ್ಸಾಹವರ್ಜನೆ' ಯೊಂದು ; ಎಂದರೆ ತನ್ನ ಯೋಗ್ಯತೆಯ ಬಲ ಇನ್ನೂ ಅಧಿಕವಾದ ಫಲವನ್ನು ನೀಡುವುದಾದರೂ ಅದನ್ನು ಅಪೇಕ್ಷಿಸದೆ, ಹರಿಯ ಪ್ರೀತಿಯೇ ತನ್ನ ಪರಮೋದ್ದೇಶವೆಂದು ಬಗೆದು ದಾಸ್ಯಭಾವದಲ್ಲೇ ಉಳಿದವನು. ತ್ರೇತಾಯುಗದಲ್ಲಿ ಹನುಮಂತನಾಗಿ ರಾಮಾವತಾರದಲ್ಲಿದ್ದ ಹರಿಯನ್ನು, ದ್ವಾಪರ

ಯುಗದಲ್ಲಿ ಭೀಮನಾಗಿ ಕೃಷ್ಣಾವತಾರದಲ್ಲಿದ್ದ ಹರಿಯನ್ನು ಸೇವಿಸಿ, ಕಲಿ ಯುಗದಲ್ಲಿ ಮಧ್ವಾಚಾರ್ಯರಾಗಿ ಹರಿಮಾಹಾತ್ಮ್ಯೆಯನ್ನು ಪ್ರಚಾರ ಮಾಡಿದನೆಂದು ಅವತಾರ ತ್ರಯವನ್ನು ಹೇಳುತ್ತಾರೆ.

ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಪುಂಜಿಕಸ್ಥಲಿಯೆಂಬ ಅಪ್ಸರೆ ಶಾಪದಿಂದ ವಾನರಜನ್ಮವನ್ನು ತಳೆದು ವಿಹರಿಸುತ್ತಿದ್ದಾಗ ವಾಯುವಿನ ವೀರ್ಯದಿಂದ ಮಗನನ್ನು ಪಡೆದಳೆಂದೂ, ಅವನೇ ವಾಯುಪುತ್ರನಾದ ಹನುಮನೆಂದೂ ಒಂದು ಕತೆ. ಅಹಲ್ಯೆ–ಗೌತಮರಿಗೆ ಮಗಳಾಗಿ ಕಾರಣಾಂತರ ದಿಂದ ತಾಯಿಯ ಶಾಪವನ್ನು ಪಡೆದು ಕುರುಡಿಯಾದ ಅಂಜನೆ ಕೇಸರಿ ಯೆಂಬ ವಾನರ ನಾಯಕನನ್ನು ಮದುವೆಯಾಗಿ ಆಂಜನೇಯನೆಂಬ ಮಗ ನನ್ನು ಪಡೆದದ್ದು ಭವಿಷ್ಯಪುರಾಣದಲ್ಲಿ ಬರುವ ಕತೆ. ವಿಷ್ಣುವು ಸಮುದ್ರ ಮಥನದ ಸಂದರ್ಭದಲ್ಲಿ ಮೋಹಿನೀ ರೂಪವನ್ನು ಧರಿಸಿದ್ದಾಗ, ಶಿವನು ಅವಳನ್ನು ಮೋಹಿಸಿ ಅವನ ವೀರ್ಯವು ಹೊರಚೆಲ್ಲಿದಾಗ ಅದು ಗಾಳಿಯಲ್ಲಿ (ವಾಯು) ಹಾರಿ ಅಂಜನೆಯ ಕಿವಿಯಲ್ಲಿ ಬಿದ್ದಿತೆಂದೂ ಅದರ ಫಲವಾಗಿ ಆಂಜನೇಯ ಹುಟ್ಟಿದನೆಂದೂ ಶಿವಪುರಾಣದಲ್ಲಿ ಬರುವ ಕತೆ. ಹೀಗೆ ಹನುಮಂತ ರುದ್ರಾಂಶ, ರುದ್ರಾತ್ಮಕ. ಕೃತಯುಗದಲ್ಲಿ ಸಂಕರ್ಷಣನಾಮಕ ಪರಮಾತ್ಮ ಮತ್ತು ಜಯಾನಾಮಕ ಲಕ್ಷ್ಮಿ ಇವರ ಮಗನಾಗಿ ಮೂಲ ವಾಯು ತೋರಿಕೊಂಡನೆಂದು ಗರುಡಪುರಾಣ, ಬ್ರಹ್ಮಪುರಾಣಗಳಲ್ಲಿ ಬರುವ ಒಕ್ಕಣೆ. ತ್ರೇತಾಯುಗದಲ್ಲಿ ಗೌತಮ ಕನ್ಯೆಯಾದ ಅಂಜನೆ, ಸುಮೇರು ರಾಜನಾದ ಕೇಸರಿ ಇವರ ಮಗನಾಗಿ ಹುಟ್ಟಿದನೆಂದೂ, ಹುಟ್ಟುವಾಗಲೆ ಬಂಗಾರದ ಕರ್ಣಕುಂಡಲ, ಕೌಪೀನಗಳನ್ನು ಧರಿಸಿದ್ದು, ಅವಿುತೋತ್ಸಾಹ ದಿಂದ ಸೂರ್ಯನನ್ನು ಹಣ್ಣೆಂದು ಬಗೆದು ಅದನ್ನು ತಿನ್ನಲು ಆಕಾಶಕ್ಕೆ ಹಾರಿದನೆಂದೂ ಇಂದ್ರನು ತನ್ನ ವಜ್ರಾಯುಧದಿಂದ ಅವನ ಮೋರೆಗೆ ಹೊಡೆಯಲು ದವಡೆ ಊದಿಕೊಂಡುದರಿಂದ 'ಹನು–ಮಂತ'ನಾದನೆಂದೂ ಕತೆಯಿದೆ. ದ್ವಾಪರಯುಗದಲ್ಲಿ ವಾಯುಮಂತ್ರದಿಂದಲೇ ಕುಂತಿಯು ಭೀಮನನ್ನು ಪಡೆದಳಾಗಿ ಅವನು ಹನುಮಂತನ ಅವತಾರವೇ. ಮುಂದಿನ ಕೃತಯುಗದಲ್ಲಿ ಇವನು ತನ್ನ ಕಕ್ಷೆಯಲ್ಲೇ ತನಗಿಂತ ಉತ್ತಮನಾದ ಬ್ರಹ್ಮನ ಪದವಿಗೆ ಬರುವನೆಂದು ನಂಬಿಕೆ ; ಆಗ ಬ್ರಹ್ಮಾಂಡದ ಸೃಷ್ಟಿ ವ್ಯಾಪಾರವೆಲ್ಲ ಅವನಿಂದಲೇ ನಡೆಯುವುದು, ಈಗಿನ ಬ್ರಹ್ಮನು ಮುಕ್ತನಾಗುವನು.

ಜೀವರಲ್ಲಿ ಪ್ರಾಣವನ್ನು ತುಂಬಿಸಿ, ಎಲ್ಲ ಚೇತನ ವ್ಯಾಪಾರವನ್ನೂ ಪ್ರಚೋದಿಸುವುದರಿಂದ ಅವನು ಜೀವನಪ್ರದ, ಮುಖ್ಯಪ್ರಾಣ, ಅಥವಾ ಪ್ರಾಣದೇವ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಪಂಚಪ್ರಾಣಗಳ ವ್ಯಾಪಾರದಲ್ಲೂ ಅವನೇ ಹಾಸುಹೊಕ್ಕಾಗಿ ಸೇರಿರುವುದ ರಿಂದ ಮುಖ್ಯಪ್ರಾಣ ; ಅವನು ಪ್ರಣೇತಾ ಎನಿಸಿಕೊಳ್ಳುತ್ತಾನೆ. ಅವನಿಗೆ ತ್ರಿಗುಣಾತ್ಮಕವಾದ ಲಿಂಗದೇಹವಿದೆ, ಆದರೆ ಗುಣಗಳು ಅವನ ಮೇಲೆ ಪ್ರಭಾವ ಬೀರಲಾರವು. ಅಜ್ಞಾನದ ಸಂಪರ್ಕವಂತೂ ಸರ್ವಥಾ ಇಲ್ಲ. ತನಗೆ ಕೋಟಿ ಗುಣಗಳಿಂದ ಅಧಿಕಳಾದ ರಮಾದೇವಿಯ ಮೂಲಕ ಅನಂತ ಗುಣಗಳಿಂದ ಅಧಿಕನಾದ ಪರಮಾತ್ಮನನ್ನು ಬಿಂಬವಾಗಿ ಹೊಂದಿ, ಶ್ವಾಸಾ ತ್ಮಕವಾದ ಹಂಸಮಂತ್ರವನ್ನು ಎಡೆಬಿಡದೆ ಜಪಿಸಿ ಸೇವಿಸುತ್ತಾನೆ. ಜೀವರು

ಉಸಿರಾಡುವುದೆಲ್ಲ ಮುಖ್ಯಪ್ರಾಣನ ಹಂಸಮಂತ್ರಜಪವೇ. ಪ್ರತಿದಿನವೂ ಸಾತ್ತ್ವಿಕ ಜೀವರಿಂದ 21,000 ಬಾರಿ ಹಂಸ ಮಂತ್ರದ (ಶ್ವಾಸೋಚ್ಛ್ವಾಸ ರೂಪವಾದ) ಜಪವನ್ನು ಮಾಡಿಸಿ ಹರಿಯನ್ನು ಮೆಚ್ಚಿಸುತ್ತಾನೆ. ದುಃಖಾಸ್ಪೃಷ್ಟರಾದ, ಈಶಕೋಟಿಗೆ ಸೇರಿದ ಲಕ್ಷ್ಮೀನಾರಾಯಣರಿಗೂ ದುಃಖ ಸಂಬದ್ಧರಾದ ಜೀವರಿಗೂ ಮಧ್ಯವರ್ತಿಯಾಗಿರುವುದರಿಂದ 'ಮಧ್ಯಮ' ನೆನಿಸಿಕೊಳ್ಳುತ್ತಾನೆ, ಈ 'ಮಾಧ್ಯಸ್ಥ್ಯ'ವೆಂಬ ಗುಣವೇ ಸಾಧಕರಿಗೆ ಪ್ರಯೋಜಕವಾದುದು. ಜಾಗ್ರತ್‌ಸ್ವಪ್ನಸುಷುಪ್ತಿಗಳೆಂಬ ಮೂರೂ ಅವಸ್ಥೆಗಳಲ್ಲಿ ಜೀವರನ್ನು ಕಾಪಿಟ್ಟು, ಪ್ರೇರಿಸಿ, ಅವರ ಹತ್ತೂ ಕರಣಗಳಿಗೆ (ಇಂದ್ರಿಯಗಳಿಗೆ) ಮುಖ್ಯಾಭಿಮಾನಿಯಾಗಿ ಕೆಲಸಮಾಡುವನು; ದೇಹೇಂದ್ರಿಯ ನಿಯಾಮಕ.

ಜೀವಕೋಟಿಯಲ್ಲಿ ಅವನ ವ್ಯಾಪಾರ ಪಿಂಡಾಂಡಗತವಾದುದು. ಪಿಂಡಾಂಡವೆಂದರೆ ಜೀವನಿಗೆ ಕರ್ಮಫಲಗಳನ್ನು ಅನುಭವಿಸಲು ದೊರೆತಿರುವ ಶರೀರಗಳು. ಅದಲ್ಲದೆ ಬ್ರಹ್ಮಾಂಡವಿದೆ, ಬ್ರಹ್ಮಾಂಡಕ್ಕೆ ಒಂಬತ್ತು ಹೊರ ಆವರಣಗಳಿವೆ (ಬಹಿಃಬ್ರಹ್ಮಾಂಡ); ನೀರು, ಬೆಂಕಿ, ಗಾಳಿ, ಆಕಾಶ, ಅಹಂಕಾರತತ್ತ್ವ, ಮಹತ್ತತ್ತ್ವ, ತಮಸ್ಸು, ರಜಸ್ಸು, ಸತ್ತ್ವ ಇವೇ ನವಾವರಣವೆಂದು ಪ್ರತೀತಿ. ಇಲ್ಲೆಲ್ಲ ನಡೆಯುವ ವ್ಯಾಪಾರ ಅವನ ಅಧೀನವಾದುದೇ; ಮತ್ತು ಇವೆಲ್ಲ ವ್ಯಾಪಾರಗಳನ್ನೂ ಆಲೋಚನೆಯಿಲ್ಲದೆ ಅರಿತುಕೊಳ್ಳುವನು. ಹೀಗಿರುವುದರಿಂದ ಅವನದ್ದು ಅಪರಿಮಿತವಾದ ಜ್ಞಾನ, ಬಲ, ಧೈರ್ಯ, ತೇಜಸ್ಸು.

ಜೀವರಿಗೆ ಅವನು ಮೂಲಗುರು. ಜೀವನ ಉದ್ಧಾರವನ್ನು ಗಮನದಲ್ಲಿರಿಸಿಕೊಂಡು, ಅದಕ್ಕೆ ಅನುಕೂಲವಾದ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಅವರವರ ಯೋಗ್ಯತೆಗನುಸಾರವಾಗಿ ಕೊಡುವನು ಸಾಧಕರ ಅಂತಃಪ್ರೇರಣೆ, ಪ್ರಚೋದನೆ, ನಿಯಮನ, ಉತ್ತೇಜನ, ಪ್ರಗತಿಗಳೆಲ್ಲ ಅವನ ಕೆಲಸಗಳೇ. ಅವನು ಹೀಗೆ ಮಾಡಲು ಸಾಧ್ಯವಾಗುವುದು ಅವನಲ್ಲಿ ಸರ್ವದಾ ಹರಿಸಾನ್ನಿಧ್ಯವಿರುವುದರಿಂದ—

ಹರಿಯು ಸಕಲ ದೇಶಕಾಲ ಕರ್ಮಗಳಲಿ
ಬಿಡದೆ ಗುರುವಿನೊಳಗಿದ್ದು ವ್ಯಾಪಿಸಿಹ

ಆದುದರಿಂದಲೇ ಹರಿದಾಸರು

ನಿನ್ನಿಚ್ಛೆಯಾದರೆ ಹರಿಯಿಚ್ಛೆಯಾದಂತೆ
ನಿನ್ನ ಬಲವಾಗೆ ಹರಿಯು ಬಲವಾದಂತೆ
ನನ್ನ ಒಲಿಸಲು ಹರಿಯು ಒಲಿದಂತೆ

ಎಂದು ನಂಬುತ್ತಾರೆ.

ಎಲ್ಲ ಜೀವರ ಹೃದಯಕಮಲದಲ್ಲಿ ಬಿಂಬರೂಪಿಯಾದ ಪರಮಾತ್ಮನು ಅಗ್ರೇಶ, ಪುರುಷ, ಮೂಲೇಶ ಎಂದು ಮೂರು ರೂಪಗಳಲ್ಲಿರುವನೆಂದೂ (ವಿವರಣೆಗೆ ಪ್ರಸ್ತಾವನೆ ನೋಡಿ), ಕಮಲದ ಕರ್ಣಿಕೆಯ ಬುಡದಲ್ಲಿರುವ ಮೂಲೇಶನ ಪಾದಮೂಲವನ್ನಾಶ್ರಯಿಸಿ ಮುಖ್ಯಪ್ರಾಣನಿರುತ್ತಾನೆಂದೂ ನಂಬಿಕೆ. ಅಲ್ಲಿ ಅವನೆದುರು ಕೈಮುಗಿದುಕೊಂಡು ನಿಂತಿರುವಂತೆ ಕಲ್ಪನೆ.

ಶ್ವಾಸರೂಪಿಯಾದ ಮುಖ್ಯಪ್ರಾಣನು ಎಡೆಬಿಡದೆ ತಾನೂ ಹಂಸಜಪ ಮಾಡುತ್ತ, ಜೀವನಿಂದಲೂ ಅದೇ ಜಪವನ್ನು ಉಸಿರಾಟದ ಮೂಲಕ ಮಾಡಿಸಿ ಹರಿಯನ್ನು ಮೆಚ್ಚಿಸುವನೆಂದೂ ಕಲ್ಪನೆ. ಪ್ರಲಯ ಕಾಲದಲ್ಲಿ ಬ್ರಹ್ಮನೇ ಮೊದಲಾಗಿ ಎಲ್ಲ ಜೀವರೂ ಹರಿಯ ಉದರವನ್ನು ಸೇರಿ ಸುಷುಪ್ತಿಯಲ್ಲಿರುವಾಗ, ಮುಖ್ಯಪ್ರಾಣನೊಬ್ಬ ಎಚ್ಚರವಾಗಿರುವನು. ಮುಕ್ತಜೀವರಲ್ಲಿ ಅವನು ಸ್ವಚ್ಛಚಿತ್ತ.



ಶಂಕರಾಭರಣ ಚಾಪು

ನೋಡಿರಯ್ಯ ಹನುಮಂತನ ಮಹಿಮೆಯ
ಬೇಡಿರೊ ವರಗಳನು ಪ

ರೂಢಿಯೊಳು ಇವನನ್ನು ಪಾಡಿ ಪೊಗಳುತಿಪ್ಪ ಜನರ
ನೋಡಿ ನೋಡಿ ವರವನೀವ ಗಾಡಿಕಾರ ಹನುಮನ್ನ ಅ

ಅಂದು ದಶರಥಸುತನಾಗಿ ಬಂದು ನಿಂದು ಸಾಕೇತದಿ
ಚಂದದಿಂದಪ್ಪನೆಂದು ಅಂದದಿಂ ವಿಶ್ವಾಮಿತ್ರ
ತಂದು ರಘುರಾಮನಿಗೊರೆಯಲೆಂದು ಯಾಗವ ಕಾಯ್ದ
ಸುಂದರ ರಾಮನಿಗೆ ವಂದನೆಗೈವನೀತ ೧

ಧೀರನಾಗಿ ಧನುವ ಮುರಿದು ಮೆರೆದು ದಂಡಕವ
ಸೇರಿ ಘೋರ ರಕ್ಕಸರ ಸದೆದು ಜರಿದು ತಂದು ಕಪಿಪತಿಯೊಡನೆ
ಸೇರಿ ಸಖ್ಯವನ್ನೆ ಮಾಡಿ ಧಾರಿಣಿಯೊಳಗೆ ಕಡು
ನಾರಿಯನ್ನೆ ಹುಡುಕಿಸಿದ ಧೀರ ರಾಮದೂತನೀತ ೨

ಖ್ಯಾತಿಯಿಂದ ಸೇತುವೆಯನು ಕಟ್ಟಿ ಮೆಟ್ಟಿ ರಾವಣ ಪಡೆಯ
ಭೂತಳದೊಳು ಕೆಡಹಿಬಿಟ್ಟು ಮಹಾಂತದೊಳು
ಈತನೆಂದು ಸೇರಿ ಬಂದು ವಾತತನುಜನೆಮ್ಮ ಬಹು
ಪ್ರೀತಿಯಿಂದ ಪುರಂದರವಿಠಲನ್ನ ದಾಸನಾದ ೩

[ಈ ಪದದಲ್ಲಿ ರಾಮಾಯಣದ ಕತೆ ಸಂಗ್ರಹವಾಗಿ ಬಂದಿದೆ.]

ಗಾಡಿಕಾರ—ಉಪಾಯವಂತ, ಜಾದೂಗಾರ ; ಗಾರುಡಿಕಾರ; ಚೆಲುವ.
ಧನುವ—ಸೀತಾಪರಿಣಯಕ್ಕೆ ವೀರ್ಯಶುಲ್ಕವಾಗಿ ಇರಿಸಿದ್ದ ಶಿವಧನುಸ್ಸನ್ನು.
ಮೆರೆದು—ಸೀತೆಯನ್ನು ಮದುವೆಯಾಗಿ.
ಸದೆದು—ಸದೆಬಡಿದು.
ಕಪಿಪತಿಯೊಡನೆ—ಸುಗ್ರೀವನೊಡನೆ.
ಭೂತಳದೊಳು ಕೆಡಹಿಬಿಟ್ಟು—ಯುದ್ಧದಲ್ಲಿ ರಾವಣನ ಸೇನೆಯನ್ನು ಮಣ್ಣುಗೂಡಿಸಿ
ಮಹಾಂತದೊಳು—ಕಲ್ಪಾಂತದಲ್ಲಿ.

೪೩

ನಾಟಕುರಂಜಿ ಆದಿ

ಪ್ರಾಣನಾಥ ಪಾಲಿಸೋ ನೀ ಎನ್ನ ಪ

ಜಾಣಲಕ್ಷ್ಮಣಗೆ ಜೀವವಿತ್ತ ಘನ್ನ
ವಾಣೀಪತಿ ಸಮನಾದವನೆ
ರಾಣಿ ಭಾರತಿರಮಣನೆ ೧

ಅಂಜನಾದೇವಿಯ ಆತ್ಮಜನೆ
ಕಂಜಾಕ್ಷ ರಾಮನ ದೂತನೆ ೨

ಪಾಂಡುಸುತ ಭೂಮಂಡಲೇಶ
ಪಾಂಡುರಂಗ ಭಕ್ತರ ಪೋಷ ೩

ಮೂಲ ಗುರು ಮಧ್ವರಾಯರಾಗಿ
ಮೂಲ ದೈತ್ಯರ ನೀಗಿ ೪

ನರಹರಿ ಪುರಂದರವಿಠಲನ ಕೀರ್ತಿ
ನರರಿಗೆ ತೋರಿದ ನಿಜಗುರು ಮೂರ್ತಿ ೫

ಪ್ರಾಣನಾಥ—ಪ್ರಾಣವೇ ಮೊದಲಾದ ಐದು ಮುಖ್ಯವಾದ ಪ್ರಾಣಗಳಿಗೂ ಧನಂಜಯವೇ ಮೊದಲಾದ ಐದು ಅಮುಖ್ಯ ಪ್ರಾಣಗಳಿಗೂ ಅಂತರ್ಯಾಮಿಯಾಗಿ ನಿಯಾಮಕನಾಗಿರುವವನು.

ಜಾಣ ಲಕ್ಷ್ಮಣನಿಗೆ...—ಯುದ್ಧದಲ್ಲಿ ಮೂರ್ಛೆಗೊಂಡ ಲಕ್ಷ್ಮಣನನ್ನು ಬದುಕಿಸಲು ಸಂಜೀವಿನಿಯನ್ನು ಹೊತ್ತು ತಂದವನು.

ವಾಣೀಪತಿ ಸಮನಾದವನೆ—ಬ್ರಹ್ಮನ ಸಮಕಕ್ಷೆಯಲ್ಲೇ (ಮೂರನೆಯದು) ಇರುವವನು.

ಪಾಂಡುಸುತ—ಭೀಮ.

ಪಾಂಡುರಂಗಭಕ್ತರ ಪೋಷ—ಹರಿಭಕ್ತರನ್ನು ಸಲಹುವವನು.

ನರಹರಿ ಪುರಂದರವಿಠಲನ ಕೀರ್ತಿ ನರರಿಗೆ ತೋರಿದ—ಹರಿಯು ಸರ್ವೋತ್ತಮನೆಂಬುದನ್ನು ಜನರಿಗೆ ತಿಳಿಯಹೇಳಿದವನು (ಮಧ್ವಾಚಾರ್ಯರಾಗಿ).

ಹಿಂದೂಸ್ಥಾನಿ ಕಾಪಿ ಅಟ್ಟ

ಸಾರಿಬಂದನೆ ಪ್ರಾಣೇಶ ಬಂದನೆ ಪ

ಸಾರಿ ಬಂದ ಲಂಕಾಪುರವ ಮೀರಿದ ರಾವಣನ ಕಂಡು
ಧೀರನು ವಯ್ಯಾರದಿಂದ ಅ

ವಾಯುಪುತ್ರನೆ ಶ್ರೀರಾಮನ ದೂತನೆ ಪ್ರೀಯದಿಂದ
ಸೀತಾಂಗನೆಗೆ ಮುದ್ರಿಕೆಯ ತಂದಿತ್ತವನೆ ೧

ಭೀಮಸೇನನೆ ಕುಂತಿ ತನಯನೆ ವಿರಾಟನ ಮನೆಯಲ್ಲಿ
ನಿಂತು ಕೀಚಕನ ಸಂಹರಿಸಿದವನೆ ೨

ಮಧ್ವರಾಯನೆ ಸರ್ವಜ್ಞಶ್ರೇಷ್ಠ ಅದ್ವೈತವ ಗೆದ್ದು
ಪುರಂದರವಿಠಲನ ಮುಂದೆ ನಿಂತವನೆ ೩

ಪ್ರೀಯದಿಂದ ... —ಪ್ರೀತಿಯಿಂದ ಸೀತೆಗೆ ರಾಮನ ಮುದ್ರಿಕೆಯುಂಗುರವನ್ನು ಮುಟ್ಟಿಸಿದವನು.



ಮೋಹನ ಅಟ್ಟ

ಹನುಮ ನಮ್ಮ ತಾಯಿತಂದೆ ಭೀಮ ನಮ್ಮ ಬಂಧುಬಳಗ
ಆನಂದತೀರ್ಥರೇ ನಮ್ಮ ಗತಿಗೋತ್ರವಯ್ಯ ಪ

ತಾಯಿತಂದೆ ಹಸುಳೆಗೆ ಸಹಾಯವಮಾಡಿ ಸಾಕುವಂತೆ
ಆಯಾಸವಿಲ್ಲದೆ ಸಂಜೀವನವ ತಂದೆ
ಗಾಯಗೊಂಡ ಕಪಿಗಳನ್ನು ಸಾಯದಂತೆ ಪೊರೆದ ರಘು
ರಾಮನಂಘ್ರಿಗಳೇ ಸಾಕ್ಷಿ ತ್ರೇತಾಯುಗದಿ ೧

ಬಂಧುಬಳಗದಂತೆ ಆಪದ್ಬಾಂಧವನಾಗಿ ಪಾರ್ಥನಿಗೆ
ಬಂದ ಬಂದ ದುರಿತಗಳ ಪರಿಹರಿಸಿ
ಅಂಧಕಜಾತರ ಕೊಂದು ನಂದಕಂದಾರ್ಪಣೆಂದ ಗೋ
ವಿಂದನಂಘ್ರಿಗಳೇ ಸಾಕ್ಷಿ ದ್ವಾಪರಯುಗದಿ ೨

ಗತಿಗೋತ್ರರಂತೆ ಸಾಧುತತಿಗಳಿಗೆ ಮತಿಯ ತೋರಿ
ಮತಿಗೆಟ್ಟ ಇಪ್ಪತ್ತ ಒಂದು ಮತವ ಖಂಡಿಸಿ
ಗತಿಗೆಟ್ಟ ಸದ್ವೈಷ್ಣವರಿಗೆ ಸದ್ಗತಿಯ ತೋರಿದ ಪರಮಾತ್ಮ
ಗತಿ ಪುರಂದರವಿಠಲನೆ ಸಾಕ್ಷಿ ಕಲಿಯುಗದಲ್ಲಿ ೩

[ಅವತಾರತ್ರಯದಲ್ಲಿ ತ್ರೇತಾಯುಗದಲ್ಲಿ ಹನುಮ, ದ್ವಾಪರಯುಗದಲ್ಲಿ ಭೀಮ, ಕಲಿಯುಗದಲ್ಲಿ ಮಧ್ವ ಎಂಬ ಒಕ್ಕಣೆ ಇಲ್ಲಿದೆ.]

ಆನಂದತೀರ್ಥರೇ—ಮಧ್ವಾಚಾರ್ಯರಿಗೆ ಈ ಹೆಸರೂ ಇದೆ.

ಗತಿಗೋತ್ರ—ದಿಕ್ಕುದೆಸೆ : ಕುಲಬಾಂಧವರು.

ಸಂಜೀವನವ—ರಾಮರಾವಣಯುದ್ಧದ ಸಂದರ್ಭದಲ್ಲಿ ಲಕ್ಷ್ಮಣನು ಇಂದ್ರಜಿತ್ತಿನ ಬಾಣದಿಂದ ತತ್ತರಿಸಿ ಪ್ರಜ್ಞೆತಪ್ಪಿ ಬಿದ್ದಾಗ, ಹನುಮಂತನು ಔಷಧಮೂಲಿಕೆಯಿದ್ದ ಸಂಜೀವನಪರ್ವತವನ್ನು ಹೊತ್ತುತಂದ ವಿಚಾರ.

ಪಾರ್ಥನಿಗೆ—ಅರ್ಜುನನಿಗೆ.

ಅಂಧಕಜಾತರ—ಕುರುಡನಾದ ಧೃತರಾಷ್ಟ್ರನ ನೂರುಮಂದಿ ಮಕ್ಕಳಾದ ಕೌರವರನ್ನು.

ನಂದಕಂದಾರ್ಪಣೆ—ನಂದನ ಮಗ ಕೃಷ್ಣನಿಗೆ ಅರ್ಪಣೆ.

ಮತಿಗೆಟ್ಟ ಇಪ್ಪತ್ತೊಂದು ಮತವ—ಸರಿಯಾದ ತಿಳುವಳಿಕೆಯಿಲ್ಲದೆ ಬಾದರಾಯಣರ ಆಶಯು (ಮತ) ವೆಂದು ತಿಳಿಯಪಡಿಸಿದ ಇಪ್ಪತ್ತೊಂದು ಮಂದಿ ಭಾಷ್ಯಕಾರರನ್ನು ಖಂಡಿಸಿ. ಈ ಪ್ರಾಚೀನ ಭಾಷ್ಯಕಾರರ ಹೆಸರುಗಳು : ಭಾರತೀವಿಜಯ, ಸಚ್ಚಿದಾನಂದ, ಬ್ರಹ್ಮಘೋಷ, ಶತಾನಂದ, ಉದ್ಧತ, ವಿಜಯ, ರುದ್ರಭಟ್ಟ, ವಾಮನ, ಯಾದವಪ್ರಕಾಶ, ರಾಮಾನುಜ, ಭರ್ತೃಪ್ರಪಂಚ, ದ್ರಮಿಡ, ಬ್ರಹ್ಮದತ್ತ, ಭಾಸ್ಕರ, ವಿಶಾರದ, ವೃತ್ತಿಕಾರಕ, ಜಯಭಟ್ಟ, ವಿಷ್ಣುಕ್ರಾಂತ, ವಾದೀಂದ್ರ, ಮಾಧವಭಟ್ಟ, ಶಂಕರ (ಇದು 'ಹರಿಕಥಾಮೃತಸಾರ'ದಲ್ಲಿ ಬಂದಿರುವ ಒಕ್ಕಣೆ). ಈ ಹೆಸರುಗಳಲ್ಲಿ ಎಷ್ಟು ಮಂದಿ ಐತಿಹಾಸಿಕವ್ಯಕ್ತಿಗಳೋ ತಿಳಿಯುವುದಿಲ್ಲ. ಇವರೆಲ್ಲರ ಭಾಷ್ಯಗಳಂತೂ ಉಳಿದುಬಂದಿಲ್ಲ. ಯಾದವಪ್ರಕಾಶ, ರಾಮಾನುಜ, ಭರ್ತೃಪ್ರಪಂಚ, ದ್ರಮಿಡ, ಬ್ರಹ್ಮದತ್ತ, ಭಾಸ್ಕರ, ಶಂಕರ ಇವರೇನೋ ವೇದಾಂತಗ್ರಂಥಕಾರರು ; ರಾಮಾನುಜ, ಭಾಸ್ಕರ, ಶಂಕರ ಇವರು ಭಾಷ್ಯಕಾರರೂ ಹೌದು. ಆದರೆ ಮೇಲಿನ ಎಣಿಕೆಯಲ್ಲಿ ಕಾಣಿಸಿರುವ ಕಾಲಕ್ರಮವಂತೂ ಸರಿಯಾಗಿಲ್ಲ.



೪೯

ಭೂಪಾಳಿ — ಝಂಪೆ

ಏಳು ಹನುಮಂತ ಎಷ್ಟು ನಿದ್ರೆ  ಪ

ಮಾತನಾಡಲುಬೇಕು ಮುದ್ರಿಕೆ ತರಲುಬೇಕು
ಹರಿಕುಶಲ ಜಾನಕಿಗೆ ತಿಳಿಸಬೇಕು
ವನವ ಕೀಳಲುಬೇಕು ಚೂಡಾಮಣಿಯ ತರಲುಬೇಕು
ಹರಿ ಹರುಷದಿಂದಲಿ ಖ್ಯಾತಿಯ ಪಡಲುಬೇಕು  ೧

ಶರಧಿ ಲಂಘಿಸಬೇಕು ರಘುಪತಿಯ ಕೂಡಿರಬೇಕು
ದುರುಳ ಇಂದ್ರಜಿತ್ತನ ಗೆಲಿಯಬೇಕು
ಅನುಜ ಲಕ್ಷ್ಮಣಗೆ ಸಂಜೀವನ ತಂದು ಕೊಡಲುಬೇಕು
ಹನುಮಂತ ಬಲವಂತ ಎಂದೆನಿಸಬೇಕು  ೨

ದುಷ್ಟ ರಕ್ಕಸರನೆಲ್ಲ ಕುಟ್ಟಿ ಕೆಡಹಲುಬೇಕು
ಹತ್ತು ತಲೆ ರಾವಣನ ಬಲವಿಳಿಸಲುಬೇಕು
ಭಕ್ತ ವಿಭೀಷಣನಿಗೆ ಪಟ್ಟಗಟ್ಟಲುಬೇಕು
ಲಕ್ಷ್ಮೀ ಸಹಿತ ಅಯೋಧ್ಯೆಗೆ ತೆರಳಲುಬೇಕು  ೩

ಕುರುಕುಲದಲಿ ಕುಂತಿಸುತನಾಗಿ ಜನಿಸಲುಬೇಕು
ರಣದಲ್ಲಿ ಕೌರವರ ಗೆಲಿಯಬೇಕು
ವನದೊಳಗೆ ಘನತೃಷೆಯ ಘಾಸಿಪಡಿಸಲುಬೇಕು
ಮಡದಿಗೆ ಸೌಗಂಧವ ತರಲುಬೇಕು  ೪

ಯತಿಯಾಗಿ ಬರಬೇಕು ಕುಮತ ಖಂಡಿಸಬೇಕು ಅ
ದ್ವೈತವಾದಿಗಳ ಗೆಲಿಯಬೇಕು
ಮಧ್ವಶಾಸ್ತ್ರವ ಲೋಕಕೆಲ್ಲ ಬೋಧಿಸಬೇಕು
ಮುದ್ದು ಪುರಂದರವಿಠಲ ಎಂದೆನಿಸಬೇಕು  ೫

[ಇಲ್ಲಿ ಮೂರು ನುಡಿಗಳಲ್ಲಿ ರಾಮಾಯಣವನ್ನೆಲ್ಲ ಸಂಗ್ರಹಿಸಿದ್ದಾರೆ. ಮುಂದಿನ ನುಡಿಯಲ್ಲಿ ಭಾರತದ ಕತೆಯಲ್ಲಿ ಭೀಮನ ಪಾತ್ರ ಸೂಕ್ಷ್ಮವಾಗಿ ಬಂದಿದೆ; ಕಡೆಯ ನುಡಿ ಮಧ್ವಾಚಾರ್ಯರ ಪ್ರಸ್ತುತತೆಯನ್ನು ಹೇಳುತ್ತದೆ.]

ಮಾತನಾಡಲು ಬೇಕು—ರಾಮಲಕ್ಷ್ಮಣರು ಪಂಪಾಸರಸ್ಸನ್ನು ದಾಟಿ ಋಷ್ಯಮೂಕಕ್ಕೆ ಬಂದಾಗ ಹನುಮಂತನೇ ಅವರನ್ನು ಎದುರುಗೊಂಡು, ರಾಮನೊಂದಿಗೆ ಮಾತನಾಡಿ ಅವನ ಪ್ರೀತಿಯನ್ನು ಪಡೆದುಕೊಂಡವನು.

ಮುದ್ರಿಕೆ. .—ರಾಮನ ಮುದ್ರಿಕೆಯನ್ನು ಸೀತೆಗೆ ಒಯ್ದವನು.

ಚೂಡಾಮಣಿ—ಸೀತೆ ಕೊಟ್ಟ ಚೂಡಾಮಣಿಯನ್ನು ರಾಮನಿಗೆ ಮುಟ್ಟಿಸಿದವನು.

ಹರಿ ಹರುಷದಿಂದಲಿ—ರಾಮನನ್ನು ಸಂತೋಷಪಡಿಸಿದನೆಂದು ಹನುಮಂತನ ಯಶಸ್ಸು ಹೆಚ್ಚಿತು.

ಲಕ್ಷ್ಮೀ ಸಹಿತ—ಲಕ್ಷ್ಮಿಯ ಅವತಾರವಾದ ಸೀತೆಯೊಂದಿಗೆ.

ವನದೊಳಗೆ...—ಪಾಂಡವರ ವನವಾಸದಲ್ಲಿ ಯಕ್ಷಪ್ರಶ್ನೆಯ ಸಂದರ್ಭ.

ಮಡದಿಗೆ .—ದ್ರೌಪದಿಗೆ ಸೌಗಂಧಿಕಪುಷ್ಪವನ್ನು ತಂದುಕೊಟ್ಟ ಪ್ರಸಂಗ.

ಅದ್ಭುತವಾದಿಗಳ—ಮಾಯಾವಾದಿಗಳ. ಮಿಥ್ಯವಾಗಿರುವ ಜಗತ್ತು ಸತ್ಯವಾಗಿರುವಂತೆ ತೋರಿಕೊಳ್ಳುವುದೇ ಅದ್ಭುತ ; ಆದರೆ ಅದು ತೋರಿಕೆಯಷ್ಟೆ, ಭ್ರಮೆಯಿಂದ ಉಂಟಾದದ್ದು. ಸಂಜೆಯ ಮಬ್ಬಿನಲ್ಲಿ ಹಗ್ಗವು ಹಾವಾಗಿ ತೋರಿಕೊಳ್ಳುವಂತೆ ; ದೀಪ ತಂದಾಗ ಹಾವು ಮಾಯವಾಗುತ್ತದೆ. ಇದು ಮಾಯಾವಾದ.



ಮೋಹನ ಆದಿ

ಹನುಮ ಭೀಮ ಮಧ್ವಮುನಿಯ ನೆನೆದು ಬದುಕಿರೊ ಪ

ಅನುಮಾನಂಗಳಿಲ್ಲದಲೆ ಮನೋಭೀಷ್ಟಂಗಳನೀವ ಅ

ಪ್ರಾಣಿಗಳ ಪ್ರಾಣೋದ್ಧಾರ ಜೀವರಲ್ಲುತ್ತಮನು ಮತ್ತೆ
ಪ್ರಾಣಾಪಾನ ವ್ಯಾನೋದಾನ ಸಮಾನರೊಳುತ್ಕೃಷ್ಟ
ಕ್ಷೋಣಿ ದೈತ್ಯರನ್ನು ಸೀಳಿ ಪಾಲಿಪ ಸಜ್ಜನರನ್ನು
ತ್ರಾಣದಿಂದಲಿ ಮೆರೆವ ಬಹುಜಾಣ ಗುರು ಮುಖ್ಯಪ್ರಾಣ ೧

ಕಾಮಧೇನು ಚಿಂತಾಮಣಿ ಕಲ್ಪವೃಕ್ಷನಾದ ಸ್ವಾಮಿ
ಪ್ರೇಮದಿಂದಲಿ ನೆನೆಯುವವರ ಭಾಗ್ಯಕ್ಕೆಣೆಯುಂಟೆ
ಸಾಮಾನ್ಯವಲ್ಲವೊ ಈತ ಮೋಕ್ಷಾದಿ ಸಂಪದವಿಗಳಿಗೆ
ಆ ಮಹಾ ಅಪರೋಕ್ಷಜ್ಞಾನ ದಾರಢ್ಯ ಭಕುತಿಯ ಕೊಡುವ ೨

ಅವತಾರತ್ರಯಗಳಿಂದ ಶ್ರೀಹರಿಯ ಸೇವಿಸುವ
ತವಕದಿಂದ ಪೂಜಿಪ ಮಹಾಮಹಿಮೆಯುಳ್ಳವನು
ಕವಿತಾ ವಾಕ್ಯವಲ್ಲವದು ಅವಿವೇಕಿಗಳೆಂದೆಣಿಸದಿರಿ
ಭವಬಂಧನವ ಬಿಡಿಸಿ ನಮ್ಮ ಕಾವ ಪುರಂದರವಿಠಲನ ದಾಸ ೩

ಹನುಮ ಭೀಮ ಮಧ್ವ ಮುನಿಯ—ಮುಖ್ಯಪ್ರಾಣರ ಅವತಾರತ್ರಯ.

ಪ್ರಾಣಿಗಳ...—ವಿವರಣೆಗೆ ಪ್ರಸ್ತಾವನೆ ನೋಡಿ.

ಕ್ಷೋಣಿ ದೈತ್ಯರನ್ನು—ಭೂಮಿಯ ಮೇಲಿದ್ದ ದುರುಳರನ್ನು; ಅಕ್ಷೋಣಿಯೆಂದಾದರೆ ಬಹು ಸಂಖ್ಯೆಯಲ್ಲಿ (ಅಕ್ಷೌಹಿಣಿಗೆ ಸಂಕ್ಷಿಪ್ತರೂಪ).

ಕಾಮಧೇನು...—ಕಾಮಧೇನು ಅಮೃತಮಥನವಾದಾಗ ಪಾಲುಗಡಲಿಂದ ಹೊರ ಬಂದು ದೇವಲೋಕವನ್ನು ಸೇರಿದ ಹಸು ; ಬೇಡಿದುದನ್ನು ನೀಡುವಂಥದ್ದು, ಕಲ್ಪವೃಕ್ಷ 'ಚಿಂತಿತಾರ್ಥಪ್ರದ'ವಾದ, 'ಕಲ್ಪಸ್ಥಾಯಿ'ಯಾದ (ಎಂದರೆ ಕಲ್ಪ

ಮುಗಿಯುವವರೆಗೂ ಇರುವ) ದೇವಲೋಕದ ಮರ ; ಚಿಂತಾಮಣಿ 'ಚಿಂತಿತಾರ್ಥವಿವೃದ್ಧಿದ'ವಾದ ಮಣಿವಿಶೇಷ. ಮೂರೂ ಉಪಮೆಗಳು ನೆನೆಸಿಕೊಂಡೊಡನೆ ಬಯಸಿದ್ದನ್ನು ಈಡೇರಿಸುವವನು ಎಂಬರ್ಥದಲ್ಲಿ.

ಮೋಕ್ಷಾದಿ ಸಂಪದವಿಗಳಿಗೆ..—ಸಂಪದವಿಗಳೆಂದರೆ ಮುಕ್ತರು ಪಡೆಯತಕ್ಕ ನಿವಾಸಸ್ಥಾನಗಳು, ಅನಂತಾಸನ, ಶ್ವೇತದ್ವೀಪ, ವೈಕುಂಠ. ಕಡೆಯದಾದ ವೈಕುಂಠವನ್ನು ಜ್ಞಾನದಿಂದಲೇ ಪಡೆಯಬೇಕು. ಜ್ಞಾನ ಸಂಪನ್ನವಾಗಲು ಭಕ್ತಿ ದೃಢವಾಗಿರಬೇಕು. ಇದು ಮುಖ್ಯಪ್ರಾಣನ ಕೊಡುಗೆಯೇ.

ಅಪರೋಕ್ಷಜ್ಞಾನ—ಜ್ಞಾನದಲ್ಲಿ ಪರೋಕ್ಷ, ಅಪರೋಕ್ಷ ಎಂದೆರಡು ಬಗೆ ಪರೋಕ್ಷವೆಂದರೆ ಇಂದ್ರಿಯ, ಮನಸ್ಸುಗಳಿಂದ, ಅನುಮಾನದಿಂದ, ಆಗಮದಿಂದ ಒದಗಿದ್ದು. ಅಪರೋಕ್ಷವೆಂದರೆ ನೇರಾಗಿ ಅನುಭವದಲ್ಲೇ (ಅಂತರಂಗದಲ್ಲಿ) ಒದಗಿಬಂದದ್ದು. ಸಾಧನೆಯಿಂದ ಹೃದಯಕಮಲದಲ್ಲೇ ಅಂತರ್ಯಾಮಿಯಾಗಿರುವ ಬಿಂಬರೂಪೀ ಪರಮಾತ್ಮನನ್ನು ಅರಿತುಕೊಳ್ಳುವುದು ಅಪರೋಕ್ಷಜ್ಞಾನ.

ದಾರಢ್ಯ—ದಾರ್ಢ್ಯ ; ಭಕ್ತಿಗೆ ವಿಶೇಷಣ ; ದೃಢಭಕ್ತಿ.

ಕವಿತಾ ವಾಕ್ಯವಲ್ಲ—ಉತ್ಪ್ರೇಕ್ಷೆಯಲ್ಲ; ಅಲಂಕಾರದ ಮಾತಲ್ಲ.

ಅವಿವೇಕಿಗಳೆಂದೆಣಿಸದಿರಿ—ಈ ತತ್ತ್ವವನ್ನು ತಿಳಿಯದೆ ದಡ್ಡರಾಗಬೇಡಿ.



ತೋಡಿ ಚಾಪು

ಸೇವಕತನದ ರುಚಿಯೇನರಿದ್ಯೋ ಪ

ದೇವ ಹನುಮರಾಯ ವೈರಾಗ್ಯ ಬೇಡಿ ಅ

ಉದಧಿಯ ದಾಟಿ ಸೀತೆಯ ಕಂಡು ಬಂದಾಗ
ಮದುವೆಯ ಮಾಡೆನ್ನಬಾರದಿತ್ತೆ
ಪದದಿ ಪಾಷಾಣ ಪೆಣ್ಣ ಮಾಡಿದವನಿಗೆ
ಇದು ಏನಾಶ್ಚರ್ಯವೊ ನೀ ಬಯಸಲೊಲ್ಲದೆ ೧

ಕ್ಷಣದೊಳು ಸಂಜೀವನಗಿರಿ ತಂದಾಗ
ಹಣ ಹೊನ್ನು ಬೇಡಲು ಕೊಡದಿಹನೆ
ವಿನಯದ ವಿಭೀಷಣಗೆ ರಾಜ್ಯವಿತ್ತ
ವನಿಗೇನಾಶ್ಚರ್ಯವೊ ಹನುಮ ನೀನೊಲ್ಲದೆ ೨

ಸಾರ್ವಭೌಮನು ತಾನೆ ಮೆಚ್ಚಿ ಬಂದಾಗಲೆ
ಉರ್ವಿಯ ಬೇಡಲು ಕೊಡದಿಹನೆ
ಸರ್ವವ ತೊರೆದು ಶ್ರೀ ಪುರಂದರವಿಠಲನ
ನಿರ್ವ್ಯಾಜ ಭಕುತಿಯ ಬೇಡಿಕೊಂಡ್ಯಲ್ಲದೆ ೩

ಅರಿದ್ಯೋ—ಅರಿತೆಯೊ.

ಪದದಿ ಪಾಷಾಣ ಪೆಣ್ಣ ಮಾಡಿದವನಿಗೆ—ರಾಮನು ತನ್ನ ಕಾಲುಗಳನ್ನು ಕಲ್ಲಿಗೆ ತಾಗಿಸಲಾಗಿ, ಶಾಪದಿಂದ ಕಲ್ಲಾಗಿದ್ದ ಅಹಲ್ಯೆಗೆ ಶಾಪನಿವೃತ್ತಿಯಾಗಿ, ಕಲ್ಲು ಹೆಣ್ಣಾಗಿ ಮಾರ್ಪಟ್ಟಿತೆಂಬ ಪ್ರಸಂಗ.

ಕ್ಷಣದೊಳು ಸಂಜೀವನಗಿರಿ ತಂದಾಗ—ಯುದ್ಧದಲ್ಲಿ ಲಕ್ಷ್ಮಣ ಮೂರ್ಛೆಬಿದ್ದಾಗ, ಅವನನ್ನು ಬದುಕಿಸಲು ಹನುಮಂತನು ದೂರದಿಂದ ಸಂಜೀವನಬೆಟ್ಟವನ್ನು ಹೊತ್ತುತಂದ ಪ್ರಸಂಗ.

ಉರ್ವಿಯ—ಭೂಮಿಯನ್ನು.

ನಿರ್ವ್ಯಾಜ ಭಕುತಿ—ಯಾವ ಕಾಮನೆಯಿಲ್ಲದೆ, ತನ್ನ ಅಂತರ್ಯಾಮಿಯಾಗಿ, ಪ್ರೇರಕನೂ, ಆತ್ಮನೂ, ನಿಯಾಮಕನೂ ಆಗಿರುವ ಸ್ವಾಮಿಗೆ ತಾನು ಸ್ವರೂಪದಿಂದಲೇ ದಾಸ ಎನ್ನುವ ಭಕ್ತಿ.

ಕಾಪಿ

ಚಾಪು

ಕರವ ಮುಗಿದ ಮುಖ್ಯಪ್ರಾಣ
ಕರವ ಮುಗಿದ ಪ

ಕರವ ಮುಗಿದ ಶ್ರೀಹರಿಗೆ ಎದುರಾಗಿ
ಮರುಳರ ಜರಿದು ಶರಣರ ಪೊರೆಯೆಂದು ಅ

ತಾರತಮ್ಯ ಪಂಚಭೇದ ಸತ್ಯವೆಂಬ
ಮಾರುತ ಮತ ಪೊಂದಿದವರ ನೀ ಕಾಯೆಂದು ೧

ಜೀವೇಶರೈಕ್ಯ ಜಗತು ಮಿಥ್ಯಾ ಎಂದು
ಈ ವಿಧ ಪೇಳುವ ಮಾಯಿಗಳ ತಳಿಯೆಂದು ೨

ಇಲ್ಲಿ ಮಾತ್ರ ಭೇದ ಅಲ್ಲಿ ಒಂದೇ ಎಂಬ
ಕ್ಷುಲ್ಲಕರನು ಹಿಡಿದು ಹಲ್ಲು ಮುರೀಯೆಂದು ೩

ಪರಿಪರಿ ಭಕ್ತರ ಹೃದಯದೊಳಗೆ ನಿಂತು
ನಿರುತ ಮಾಡುವ ಕರ್ಮ ಹರಿಗೆ ಅರ್ಪಿತವೆಂದು ೪

ಹರಿ ಮಾಡುವ ವ್ಯಾಪಾರ ಬಲ್ಲ ಕಾರಣನಾಗಿ
ಸಿರಿ ಪುರಂದರವಿಠ್ಠಲಗೆರಗಿ ನಿಂತು ೫

ತಾರತಮ್ಯ. —ವಿವರಣೆಗೆ ಪ್ರಸ್ತಾವನೆ ನೋಡಿ

ಜೀವೇಶರೈಕ್ಯ —ಜೀವಾತ್ಮ, ಪರಮಾತ್ಮರಲ್ಲಿ ಭೇದವಿರದು ; ಪ್ರಪಂಚವು ಮಿಥ್ಯಾರೂಪವಾದದ್ದು ಎಂಬ ಮಾಯಾವಾದದ ಪ್ರಮೇಯಗಳು ; ಇವು ಅದ್ವೈತಮತದ ಪ್ರಕ್ರಿಯೆಗಳೆಂದು ವಿದ್ಯಾರಣ್ಯರ ಕಾಲದಿಂದ ನಂಬಿಕೆ ಬಂದಿದೆ ಆದರೆ ಶಂಕರಾಚಾರ್ಯರ ಭಾಷ್ಯಗ್ರಂಥಗಳಲ್ಲಿ ಇವು ಕಾಣುವುದಿಲ್ಲ.

ಇಲ್ಲಿ ಮಾತ್ರ ಭೇದ.. —ಸಂಸಾರಾವಸ್ಥೆಯಲ್ಲಿ ಜೀವಾತ್ಮ ಪರಮಾತ್ಮರು ವಿಭಿನ್ನರು, ಆದರೆ ಮುಕ್ತಿಯ ಅವಸ್ಥೆಯಲ್ಲಿ ಅವರೊಳಗೆ ಭೇದವಿಲ್ಲ ಎನ್ನುವ ಭೇದಾಭೇದವಾದ.

ಪರಿಪರಿ ಭಕ್ತರ. —ಅವರವರ ಯೋಗ್ಯತಾನುಸಾರವಾಗಿ

## ೫೩

ಮೋಹನ | ಅಟ್ಟ

ಮಾ ಮರ್ಝು ಭಾಪುರೆ ಭಳಿರೆ ಹನುಮಂತ ಪ

ರಾಮಪದ ಸೇವಿಪ ವೀರ ಹನುಮಂತ ಅ

ಹುಟ್ಟುತಲೆ ಹೊನ್ನ ಕಚ್ಚುಟವ ಕುಂಡಲವೆರಸಿ
ನಿಷ್ಠೆಯಲಿ ರಘುಪತಿಯ ಪಾದವನೆ ಕಂಡು
ದಿಟ್ಟ ಹರಿದಾಡಿ ಮನಮುಟ್ಟಿ ಪೂಜಿಸಲಜನ
ಪಟ್ಟಕನುವಾದ ಸಿರಿವಂತ ಹನುಮಂತ ೧

ಅಂಬರಕೆ ಪುಟನೆಗೆದು ಅಂಬುಧಿಯ ನೆರೆದಾಟಿ
ಕುಂಭಿಣಿಯ ಮಗಳಿಗುಂಗುರವನಿತ್ತು
ಬೆಂಬಿಡದೆ ಲಂಕೆಯನು ಸಂಭ್ರಮದಿ ಸಖಿಗಿತ್ತು
ಗಂಭೀರ ವೀರಾಧಿವೀರ ಹನುಮಂತ ೨

ಅತಿ ದುರುಳ ರಕ್ಕಸನು ರಥದ ಮೇಲಿರಲು ರಘು
ಪತಿಯು ಪದಚರಿಯಾಗಿ ನಿಂತಿರಲು
ಪೃಥಿವಿ ಗಗನಕೆ ಬೆಳೆದು ರಥವಾದೆ ಒಡೆಯನಿಗೆ
ಅತಿ ಭಯಂಕರ ಸತ್ವವಂತ ಹನುಮಂತ ೩

ಒಡೆಯ ಉಣಕರೆಯಲಂದಡಿಗಡಿಗೆ ಕೈ ಮುಗಿದು
ದೃಢ ಭಕುತಿಯಿಂದ ಮೌನದಲಿ ಕುಳಿತು
ಎಡೆಯ ಕೊಂಡೆದ್ದೋಡಿ ಗಗನದಲಿ ಸುರರಿಗೆ
ಕೊಡುತ ಸವಿದುಂಡ ಗುಣವಂತ ಹನುಮಂತ ೪

ಪ್ರಥಮದಲ್ಲಿ ಹನುಮಂತ ದ್ವಿತಿಯದಲ್ಲಿ ಕಲಿಭೀಮ
ತೃತಿಯದಲಿ ಗುರು ಮಧ್ವಮುನಿಯು ಎನಿಸಿ
ಪ್ರತಿಯಿಲ್ಲದೆಲೆ ಮೆರೆದೆ ಪುರಂದರವಿಠ್ಠಲನ
ಭಕ್ತ ನಿನಗಾರು ಸರಿ ವಿಜಯ ಹನುಮಂತ ೫

ಮಾ ಮರ್ಘು ಭಾಪುರೆ—ಮರಾಠೀ ಪದ ; ಕನ್ನಡದಲ್ಲಿ 'ಭಲೆ ಭಲೆ', ಭಳಿರೆ.

ಹುಟ್ಟುತಲೆ...—ಹನುಮಂತನು ಹುಟ್ಟುವಾಗಲೇ ಬಂಗಾರದ ಕಾಚಾ (ಕಚ್ಚುಟ) ಮತ್ತು ಕರ್ಣಕುಂಡಲಗಳನ್ನು ಧರಿಸಿದ್ದನೆಂದು ನಂಬಿಕೆ.

ದಿಟ್ಟಿ ಹರಿದಾಡಿ—ದೃಷ್ಟಿಯನ್ನು ಅವನಲ್ಲೇ ನೆಲೆಗೊಳಿಸಿ.

ಅಜನ ಪಟ್ಟಕೆ—ಎರಡನೆಯ ಕಕ್ಷೆಯಲ್ಲಿರುವ ಹನುಮಂತನು ಮುಂಬರುವ ಕಲ್ಪದಲ್ಲಿ ಅದೇ ಕಕ್ಷೆಯಲ್ಲಿ ಉತ್ತಮಸ್ಥಾನವಾದ ಬ್ರಹ್ಮಪದವಿಯನ್ನು ಪಡೆಯುವನೆಂದು ನಂಬಿಕೆ.

ಕುಂಭಿಣಿಯ ಮಗಳಿಗೆ—ಭೂಮಿಯ ಮಗಳಾದ ಸೀತೆಗೆ.

ಸಖಿಗಿತ್ತೆ—ವಾಯುವಿನ ಸ್ನೇಹಿತನೆಂದರೆ ಅಗ್ನಿ, ಬೆಂಕಿ ; ಲಂಕೆಯನ್ನು ಸುಟ್ಟೆ ಎಂದರ್ಥ.

ಅತಿ ದುರುಳ ರಕ್ಕಸನು—ರಾವಣನು ಯುದ್ಧಮಾಡುವಾಗ ರಥವನ್ನೇರಿದ್ದು, ಎದುರಾಳಿಯಾದ ರಾಮನು ಕಾಲಮೇಲೆ ನಿಂತಿರಲು, ಹನುಮಂತನು ಎತ್ತರಕ್ಕೆ ಬೆಳೆದು ರಾಮನನ್ನು ತನ್ನ ಹೆಗಲ ಮೇಲೇರಿಸಿಕೊಂಡನೆಂದು ಕತೆ.

ಒಡೆಯ ಉಣಕರೆಯಲು—ರಾಮನು ಅಯೋಧ್ಯೆಗೆ ಹಿಂದಿರುಗಿ ವಿಜಯೋತ್ಸವವನ್ನು ಆಚರಿಸಿದಾಗ ಹನುಮಂತನನ್ನು ಸಹಪಂಕ್ತಿಭೋಜನಕ್ಕೆ ಕರೆದನೆಂದೂ, ಸೇವಕನಾದ ತನ್ನ ಯೋಗ್ಯತೆಗೆ ಮೀರಿದ ಗೌರವವೆಂದು ಬಗೆದು, ಆದರೆ ಸ್ವಾಮಿಯ ಕರೆಯನ್ನು ಮನ್ನಿಸಿ, ಅವನಿತ್ತ ಭಕ್ಷ್ಯಗಳನ್ನು ಮಹಾಪ್ರಸಾದವೆಂದು ಕೊಂಡೊಯ್ದು, ಅದು ದೇವಯೋಗ್ಯವಾದುದೆಂದು ದೇವತೆಗಳಿಗೆ ಹಂಚಿ, ತಾನೂ ಉಂಡನೆಂಬುದು ಸಂದರ್ಭ.

ಪ್ರತಿಯಿಲ್ಲದೆಲೆ—ಎಣೆಯಿಲ್ಲದಂತೆ.

ನಾದನಾಮಕ್ರಿಯೆ ಆದಿ

ಬಿಡುವೆನೇನಯ್ಯಾ ಹನುಮ ಬಿಡುವೆನೇನಯ್ಯಾ
ನಾ ಸುಮ್ಮನೆ ಬಿಡುವೆನೇನಯ್ಯಾ ಪ

ಬಿಡುವೆನೇನೋ ಹನುಮಾ ನಿನ್ನ
ಅಡಿಗಳಿಗೆ ಶಿರವಾ ಕಟ್ಟಿ
ಒಡೆಯನಲ್ಲಿ ಜ್ಞಾನ ಭಕ್ತಿಯನೆನಗೆ
ಕೊಡುವ ತನಕ ಸುಮ್ಮನೆ ನಿನ್ನ ೧

ಹಸ್ತವನೆತ್ತಿದರೇನು
ಹಾರಾಕಾಲನು ಇಟ್ಟರೇನು
ಭೃತ್ಯನು ನಿನ್ನವನು ನಾನು
ಹಸ್ತಿವರದನ ತೋರುವತನಕ ೨

ಹಲ್ಲು ಮುಡಿಯ ಕಚ್ಚಿದರೇನು
ಅಂಜುವೆನೆ ನಿನಗೆ ನಾನು
ಫುಲ್ಲನಾಭನಲ್ಲಿ ಎನ್ನ
ಮನಸ ನೀ ನಿಲ್ಲಿಸೋತನಕ ೩

ಡೊಂಕುಮೋರೆ ಬಾಲವ ತಿದ್ದಿ
ಹೂಂಕರಿಸಿದರೆ ಅಂಜುವನಲ್ಲ
ಕಿಂಕಾರಾ ನಿನ್ನವನು ನಾನು
ಪುರಂದರವಿಠಲನ ತೋರುವತನಕ ೪

ಒಡೆಯನಲ್ಲಿ—ಸರ್ವೋತ್ತಮನಾದ ಹರಿಯಲ್ಲಿ.
ಹಸ್ತಿವರದನ—ಗಜೇಂದ್ರವೋಕ್ಷದ ಹಿನ್ನೆಲೆ.
ಕಿಂಕಾರಾ—ಕಿಂಕರ, ಸೇವಕ.

ಖರಹರಪ್ರಿಯ ಆದಿ

ಹನುಮನ ಮತವೆ ಹರಿಯ ಮತವೊ ಪ

ಹರಿಯ ಮತವೆ ಹನುಮನ ಮತವೊ ಅ

ಹನುಮನ ನಂಬಿದ ಸುಗ್ರೀವ ಗೆದ್ದ
ಹನುಮನ ನಂಬದ ವಾಲಿಯು ಬಿದ್ದ ೧

ಹನುಮನ ನಂಬಿದ ವಿಭೀಷಣ ಗೆದ್ದ
ಹನುಮನ ನಂಬದ ರಾವಣ ಬಿದ್ದ ೨

ಹನುಮ ಪುರಂದರವಿಠಲನ ದಾಸ
ಪುರಂದರವಿಠಲನು ಹನುಮನೋಳ್ಲಾಸ ೩

[ಬ್ರಹ್ಮಾಂಡ, ಪಿಂಡಾಂಡಗಳ ವ್ಯಾಪಾರಗಳಿಗೆಲ್ಲ ಹರಿಯೇ ಮುಖ್ಯನಿಯಾಮಕ ನಾದರೂ, ವಾಯುದೇವನು ಈ ವ್ಯಾಪಾರಗಳಲ್ಲಿ ಹರಿಯ ಮುಖ್ಯಾಂಗ. ವಾಯು ದೇವನ ಮೂಲಕವೇ ಎಲ್ಲ ವ್ಯಾಪಾರಗಳೂ ನಡೆಯುವುವು. ಹರಿಯ ಸಂಕಲ್ಪ (ಮತ) ವನ್ನು ಹನುಮನು ಈಡೇರಿಸಿ ಸೇವೆ ಸಲ್ಲಿಸುತ್ತಿರುವುದರಿಂದ ಹರಿಗೆ ಪರಮಾತ್ಮ.]

ಹನುಮನೋಳ್ಲಾಸ—ಹರಿಯು ಮುಖ್ಯಪ್ರಾಣನಲ್ಲಿ ಅಂತರ್ಯಾಮಿಯಾಗಿ ಇರುವನು; ಬಿಂಬರೂಪಿಯಾಗಿ. ಮತ್ತೆಲ್ಲ ಜೀವರಿಗೂ ಹರಿಯು ಮುಖ್ಯಪ್ರಾಣನ ಮೂಲಕವೇ ಬಿಂಬವಾಗಿ ಹೃದಯಕಮಲದಲ್ಲಿರುವನು.

ಸಾವೇರಿ　　　　　　　　　　　　　　　　　　　　　　　ಝಂಪೆ

ಸೋಮಕುಲವಾರಿನಿಧಿಸೋಮನುದ್ದಾಮ ರಣ
ಭೀಮ ಜಯ ಜಯ ಭೀಮಸೇನ ಭಾಪುರೆ ಪ

ಮರೆಸಿ ಕೌರವರಿತ್ತ ವಿಷವುಂಡು ತೇಗಿ ಹಸಿ
ದುರಗಗಳ ಮೇಲೆ ಬಿಡಲವನೊರಸಿದೆ
ಸುರನದಿಯೊಳಗೆ ನೂಕೆ ಭರದಲೆದ್ದಾ ಖಳನ
ಪರಿಪರಿಯ ಭಂಗಪಡಿಸಿದೆಲ ಭಾಪುರೆ ೧

ನರನ ಮಗಧೇಶ ನೀಕರಿಸಿ ನಿನ್ನನು ರಣಕೆ
ವರಿಸೆ ಹರಿಗಿದಿರಲಾ ಖಳನ ಮುರಿದೆ
ಧರೆಯೊಳತಿ ಬಲನೆನಿಪ ಕೀಚಕನ ಸಾನುಜರ
ಮುರಿದು ಮುಟ್ಟಿಗೆಯ ಮಾಡಿದೆಲ ಭಾಪುರೆ ೨

ನರನಮಿತ ಗುರು ರಥವ ತಿರುಹಿ ನಭಕೀಡಾಡಿ
ಕುರುಭೂಮಿಪಾನುಜರ ಕುಸುರಿದರಿದೆ
ಹರಿಯ ಶರಕಿದಿರಾದ ಗಿರಿಶನವತಾರವಹ
ಗುರುಸುತನ ಭಂಗಬಡಿದೆಲ ಭಾಪುರೆ ೩

ದುರುಳ ದುಶ್ಶಾಸನನ ತೊಡೆಯ ಮೇಲಡಗೆಡಹಿ
ಎರಡು ಬಲದತಿರಥರ ಜರೆದಳಲಿಸಿ
ನರಹರಿಯ ಲೀಲೆಯಿಂದವನುರವ ಬಗಿದು ನಿಡಿ
ಗರುಳ ನಿಜಸತಿಗೆ ಮುಡಿಸಿದೆಲ ಭಾಪುರೆ ೪

ಕುರುಪತಿ ಯಮಜ ಪಾರ್ಥ ನಕುಲ ಸಹದೇವರನು
ಜರೆದು ನಿನ್ನನು ಸಂಗರಕೆ ವರಿಸಲು
ಧರೆಭಾರಹಾರಿ ಗುರು ಪುರಂದರವಿಠಲನಿದಿರ–
ಲುರವಣಿಸೆ ಅವನ ಮುರಿದೆಲ ಭಾಪುರೆ ೫

[ಈ ಪದವು ಪೂರ್ತಿಯಾಗಿ ಭೀಮಾವತಾರವನ್ನೇ ಕುರಿತದ್ದು. ಮುಖ್ಯಪ್ರಾಣನ ದ್ವಾಪರಯುಗದ ಅವತಾರವಾದ್ದರಿಂದ ಇಲ್ಲಿ ಸೇರಿಸಿದೆ. ಮಹಾಭಾರತದಲ್ಲಿ ಭೀಮನ ಪಾತ್ರವನ್ನು ಬಣ್ಣಿಸುವ ಪದ ಇದು.]

ನರನ ಮಗಧೇಶ ನೀಕರಿಸಿ...—ಮಗಧಾಧಿಪತಿ ಜರಾಸಂಧನು ದ್ವಂದ್ವಯುದ್ಧಕ್ಕೆ ನರ (ಅರ್ಜುನ)ನನ್ನು ನೀಕರಿಸಿ (ತಿರಸ್ಕರಿಸಿ) ಭೀಮನೊಂದಿಗೆ ಯುದ್ಧಮಾಡಿದ ಪ್ರಸಂಗ.

ಕೀಚಕ ಸಾನುಜರ—ಕೀಚಕ ಮತ್ತು ಅವನ ತಮ್ಮಂದಿರನ್ನು ಕೊಂದ ಪ್ರಕರಣ.

ಮುಟ್ಟಿಗೆ—ಮುಷ್ಟಿಕಾ. ಹಿಂಡಿಹಿಪ್ಪೆ ಮಾಡು, ಸುಡುವ ಸೌದೆ.

ಗುರುಸುತ—ಅಶ್ವತ್ಥಾಮ.

ಅಡಗೆಡಹಿ—ಅಡ್ಡಲಾಗಿ ಬೀಳಿಸಿ.

ನಿಡಿಗರುಳ—ಉದ್ದನೆಯ ಕರುಳನ್ನು.

ನರಹರಿಯ ಲೀಲೆಯಿಂದ...—ನರಸಿಂಹಾವತಾರದಲ್ಲಿ ವಿಷ್ಣು ಹಿರಣ್ಯಕಶಿಪುವಿಗೆ ಮಾಡಿದಂತೆ. ಯುದ್ಧದಲ್ಲಿ ಭೀಮನು ದುಃಶಾಸನನನ್ನು ಕೊಂದು, ಅವನ ರಕ್ತದಿಂದಲೇ ದ್ರೌಪದಿಯ ಮುಡಿಯನ್ನು ಕಟ್ಟಿ ತನ್ನ ಪೂರ್ವ ಪ್ರತಿಜ್ಞೆಯನ್ನು ಪಾಲಿಸಿದ. ದುಃಶಾಸನನು ಕೌರವಸಭೆಯಲ್ಲಿ ದ್ರೌಪದಿಯನ್ನು ಎಳೆತಂದು ಅವಮಾನಗೊಳಿಸಿದಾಗ ಭೀಮನು ಸೇಡನ್ನು ತೀರಿಸಿಕೊಳ್ಳುವುದಾಗಿ ಪ್ರತಿಜ್ಞೆಮಾಡಿದ್ದನು.

ಕುರುಪತಿ ಯಮಜ—ಕುರುಪತಿ (ದುರ್ಯೋಧನನು) ಧರ್ಮರಾಯ, ಅರ್ಜುನ, ನಕುಲ ಸಹದೇವರನ್ನು ಜರೆದು ಭೀಮನೊಡನೆ ಯುದ್ಧಕ್ಕೆ ನಿಂತಾಗ (ಭೂಭಾರವನ್ನಿಳಿಸುವ ಕೃಷ್ಣನ ಸೂಚನೆಯಂತೆ) ಆ ಕೌರವನನ್ನು ಕೊಂದ ಪ್ರಸಂಗ.

ನಾದನಾಮಕ್ರಿಯೆ ಆದಿ

ಜಾಣ ನೀನಹುದೋ ಗುರು ಮುಖ್ಯ
ಪ್ರಾಣ ನೀನಹುದೋ ಪ

ಭಾರತಿರಮಣ ನಿನಗೆಣೆ ಕಾಣೆ
ಮೂರು ಲೋಕದಲ್ಲಿದ್ದಂಥ
ಸಕಲ ಪ್ರಾಣದಲ್ಲಿದ್ದಂಥ
ಪಂಚಪ್ರಾಣಗಳಿಗೆ ಪ್ರಾಣನಾಥ ಅ

ಕೊಟ್ಟ ರಾಮಮುದ್ರಿಕೆಯು
ಬೆಟ್ಟದಲ್ಲಿ ಸಾಗರ ದಾಟಿ ಸೀತೆ ಮುಂ
ದಿಟ್ಟು ಕರಗಳ ಕಟ್ಟಿಕೊಂಡ ವೀರ ಹನುಮ ೧

ಕುಂತಿಸುತ ನೀನಹುದೊ ಅಸುರರಿಗೆ
ಹಂತಕಾರಿ ನೀನಹುದೊ
ಚಿಂತಿತ ನಮಚರಿತ ಸಂಗ
ಚಿಂತಿಸುವ ಸಜ್ಜನರ
ಅಂತರಂಗವಾದ ನಮ್ಮ
ಹೊಂತಕಾರಿ ಶೂರ ಭೀಮ ೨

ಮುದ್ದು ಮುಖದವ ನೀನಹುದೊ ಮುಜ್ಜಗದವ
ಸದ್ಗುಣವಂದ್ಯ ನೀನಹುದೊ
ಶುದ್ಧ ಮತವನೇ ನೀ
ನುದ್ಧರಿಪೆನೆಂದು ವೀರ
ಬದ್ಧ ಕಂಕಣ ತೊಟ್ಟ
ಮಧ್ವಮುನಿರಾಯ ಬಲು ೩

ಇಂದುವದನ ನೀನಹುದೊ ಗುರುರಾಯ ಆ
ನಂದತೀರ್ಥ ನೀನಹುದೊ
ನೊಂದು ಬಂದ ಜನರು
ವಂದಿಸೆ ನಿಮ್ಮ ಚರಣಕಮಲ
ನಂಬಿದಂಥ ಭಕ್ತರನ್ನು
ಕುಂದದೆ ಪೊರೆಯುವಿಯಂತೆ ೪

ಶೂರ ನೀನಹುದೊ ವಾಯುಕು
ಮಾರ ನೀನಹುದೊ
ಪರಮನನ್ನ ನಂಬಿ ಬಲು
ಪರಮ ಮಹಿಮನೆ ನಮ್ಮ
ಪುರಂದರವಿಠಲನ ಸೇವಿಸಿದ ಕೀರ್ತಿ ಪಡೆದ 3

ಸಕಲ ಪ್ರಾಣದಲ್ಲಿ—ಎಲ್ಲ ಚೇತನವರ್ಗದಲ್ಲಿ.

ಪಂಚಪ್ರಾಣಗಳಿಗೆ ..—ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ಪ್ರಾಣಪ್ರವೃತ್ತಿಗಳು, ಅವುಗಳಲ್ಲಿ ತಾನೇ ನಿಂತು ಅವುಗಳ ಕಾರ್ಯವನ್ನು ಮಾಡಿಸುವವನು ಪ್ರಾಣನಾಥ.

ಕರಗಳ ಕಟ್ಟಿಕೊಂಡ—ವಿನೀತಭಾವದಿಂದ ನಿಂತ.

ಕುಂತಿಸುತ—ಭೀಮನಾಗಿ.

ಚಿಂತಿತ ನಮುಚರಿತ ಸಂಗ—ಪಾಠ ಅಶುದ್ಧವಾಗಿದೆ.

ಹೊಂತಕಾರಿ—ತುಂಬ ಜಾಣ; ನಾನಾ ಉಪಾಯಗಳನ್ನು ಬಲ್ಲವನು.

ಮುಜ್ಜಗದವ—ಮೂರು ಲೋಕಗಳಲ್ಲೂ ವ್ಯಾಪಕನಾದವನು.

ಇಂದುವದನ—ಚಂದ್ರನಂತೆ ಆಹ್ಲಾದಕರವಾದ ಮುಖವುಳ್ಳವನು.

ಆನಂದ ತೀರ್ಥ—ಮಧ್ವಾಚಾರ್ಯರ ಹೆಸರು.

ಪರಮನನ್ನು—ಹರಿಯನ್ನು.

ಭೂಪಾಳಿ ಅಟ್ಟ

ಹನುಮಂತದೇವ ನಮೋ ಪ

ವನಧಿಯನು ದಾಟಿ ರಾವಣನ ದಂಡಿಸಿದೆ ಅ

ಅಂಜನೆಯ ಗರ್ಭದಿಂದುದಿಸಿ ನೀ ಮೆರೆದೆಯೋ
ಕಂಜಸಖ ಮಂಡಲಕೆ ಕೈ ದುಡುಕಿದೆ
ಭಂಜಿಸೀರೇಳು ಜಗಂಗಳನು ಉಳುಹಿದೆ
ಭಂಜನಾತ್ಮಕ ಗುರುವೆ ಸರಿಗಾಣೆ ನಿನಗೆ ೧

ಹೇಮಕುಂಡಲ ಹೇಮಯಜ್ಞೋಪವೀತಧರ
ಕಟಿಸೂತ್ರ ಕೌಪೀನವನು ಧರಿಸಿ
ರೋಮರೋಮಕೆ ಕೋಟಿಲಿಂಗ ಸರ್ವಾಂಗ
ರಾಮಭೃತ್ಯನೇ ನಿನಗೆ ಸರಿಗಾಣೆ ಗುರುವೆ ೨

ಅಕ್ಷಯಕುಮಾರನ ನಿಕ್ಕರಿಸಿ ಬಿಸುಟು ನೀ
ರಾಕ್ಷಸರೊಳಗಧಿಕ ರಾವಣನ ರಣದಲ್ಲಿ
ವಕ್ಷಸ್ಥಳ ಒಡೆದು ಮೂರ್ಛಿಸಿ ಬಿಸಾಟೆ ತ್ರಿಜಗ
ರಕ್ಷಕನ ಶಿಕ್ಷಕ ಶ್ರೀರಾಮದಳರಕ್ಷ ೩

ರಾಮಲಕ್ಷ್ಮಣರ ಕಟ್ಟಾಳಾಗಿ ನೀ ನಡೆದೆ
ಭೂಮಿಜೆಗೆ ಮುದ್ರೆಯುಂಗುರವನಿತ್ತೆ
ಆ ಮಹಾಲಂಕೆನಗರವನೆಲ್ಲವನು ಸುಟ್ಟು
ಧಾಮಧೂಮವ ಮಾಡಿ ಮೆರೆದೆಯೋ ಮಹಾತ್ಮ ೪

ಶ್ರೀಮಧ್ವಾಚಾರ್ಯರ ಕುಲದವನೆಂದೆನಿಸಿ
ಶ್ರೀಮಹಾಲಕುಮಿ ನಾರಾಯಣ ರೂಪ
ಶ್ರೀಮನೋಹರ ಪುರಂದರವಿಠಲರಾಯನ
ಪ್ರೇಮದಾಳು ಹನುಮಂತ ಬಲವಂತ ೫

ವನಧಿಯನು—ಸಮುದ್ರವನ್ನು.

ಅಂಜನೆಯ—ಅಂಜನಿಯ ; ವಿವರಣೆ ಆಗಲೆ ಬಂದಿದೆ.

ಕಂಜಸಖಮಂಡಲಕೆ—ತಾವರೆಯ ಸ್ನೇಹಿತ, ಸೂರ್ಯ ; ಅವನ ಮಂಡಲ. ಹನುಮಂತನು ಮಗುವಾಗಿರುವಾಗಲೇ ಸೂರ್ಯಮಂಡಲವನ್ನು ಹಣ್ಣೆಂದು ಬಗೆದು ತಿನ್ನಲು ತೊಡಗಿದನೆಂದು ಕತೆ.

ಭುಂಜಿಸಿ ಈರೇಳು ಜಗಂಗಳನು—ಸಮುದ್ರಮಥನ ಸಂದರ್ಭದಲ್ಲಿ ಹೊರಬಂದ ಕಾಲ-ಕೂಟ ವಿಷವನ್ನು ಉಂಡು ಹದಿನಾಲ್ಕು ಲೋಕಗಳನ್ನು ಕಾಪಾಡಿದೆ ; ಇಲ್ಲಿ ಹನುಮಂತನು ರುದ್ರಾತ್ಮಕನೆಂಬುದು ಹಿನ್ನೆಲೆ.

ಪ್ರಭಂಜನ—ವಾಯುದೇವರ ಹೆಸರು.

ಹೇಮಕುಂಡಲ ..—ಹನುಮಂತನು ಹುಟ್ಟುವಾಗಲೇ ಬಂಗಾರದ ಕಿವಿಯೋಲೆ, ಜನಿವಾರ, ಉಡಿದಾರ, ಕೌಪೀನಗಳನ್ನು ಧರಿಸಿದ್ದನೆಂದು ಕತೆ.

ರೋಮರೋಮಕೆ ಕೋಟಿಲಿಂಗ—ಯುಧಿಷ್ಠಿರನ ರಾಜಸೂಯ ಯಾಗಕ್ಕೆ ಪುರುಷಾ ಮೃಗವನ್ನು ಕರೆತರಲು ಹೊರಟ ಭೀಮನು ದಾರಿಯಲ್ಲಿ ಹನುಮಂತನಿಂದ ಅವನ ಮೈಗೂದಲುಗಳನ್ನು ಪಡೆದನೆಂದೂ, ಅವನ್ನು ಹಸ್ತಿನಾಪತಿಯವರೆಗೆ ಚೆಲ್ಲಲು, ರುದ್ರಾಂಶದ ಹನುಮಂತನ ಒಂದೊಂದು ರೋಮದಿಂದಲೂ ಕೋಟಿ ಲಿಂಗಗಳು ತೋರಿಕೊಂಡುವೆಂದೂ, ಶಿವಭಕ್ತನಾದ ಪುರುಷಾಮೃಗವು ಈ ಲಿಂಗಗಳನ್ನು ಪೂಜೆ ಮಾಡುತ್ತ ಮಾಡುತ್ತ ಹಸ್ತಿನಾಪುರಕ್ಕೆ ಬಂದಿತೆಂದೂ ಕತೆ. ಈ ಕತೆಗೆ ಆಧಾರವೇನೋ ತಿಳಿಯದು.

ಅಕ್ಷಯ ಕುಮಾರನ—ಯುದ್ಧದಲ್ಲಿ ರಾವಣನ ಮಗನಾದ ಅಕ್ಷಯ ಕುಮಾರನನ್ನು ಹನುಮಂತನು ಕೊಂದನು.

ತ್ರಿಜಗರಕ್ಷಕನ ಶಿಕ್ಷಕ—ಸಂದರ್ಭ ತಿಳಿಯುವುದಿಲ್ಲ.

ಭೂಮಿಜೆಗೆ—ಸೀತೆಗೆ.

ಧಾಮಧೂಮವ ಮಾಡಿ—ಮುರಾರಿಯ 'ಧಾಮ್‌ಧೂಮ್' ಕನ್ನಡದಲ್ಲಿಯೂ ಬಳಕೆಯಲ್ಲಿದೆ, ನಾಶಮಾಡು ಎಂಬರ್ಥದಲ್ಲಿ. 'ಧಾಮ'ವೆಂದರೆ ಮನೆ, 'ಧೂಮ' ವೆಂದರೆ ಹೊಗೆ. ಮನೆಯನ್ನು ಸುಟ್ಟು ಹೊಗೆಯಾಡಿಸುವುದೆಂದು ಅಕ್ಷರಾರ್ಥ.

ಶ್ರೀಮದಾಚಾರ್ಯರ ಕುಲದವನೆಂದೆನಿಸಿ—ಹಂಸನಾಮಕ ಪರಮಾತ್ಮನಿಂದ ಅಚ್ಯುತ ಪ್ರೇಕ್ಷ ತೀರ್ಥರವರೆಗೆ ಬಂದ ಆಚಾರ್ಯಪರಂಪರೆಯನ್ನು ಇಲ್ಲಿ 'ಆಚಾರ್ಯ ಕುಲ'ವೆಂದು ಕರೆದಿದ್ದಾರೆ. ಮಧ್ವಾಚಾರ್ಯರು ಅಚ್ಯುತಪ್ರೇಕ್ಷರ ಶಿಷ್ಯರಾಗಿ ಅದೇ ಕುಲದವರಾದರು.

ಸೌರಾಷ್ಟ್ರ ಅಟ್ಟ

ಏಳೇಳು ಶರಧಿಯು ಏಕವಾಗಿದೆ ಕಂಡ್ಯ
ಹ್ಯಾಗೆ ಬಂದೆ ಹೇಳೊ ಕೋತಿ ಪ

ಏಳು ಶರಧಿಯು ಎನಗೆ ಏಳು ಕಾಲುವೆಯು
ತೂಳಿ ಲಂಘಿಸಿ ಬಂದೆ ಭೂತ ಅ

ಏಳು ಸಮುದ್ರದೊಳಿರುವ ಮಕರಿ ಮತ್ಸ್ಯ
ಹ್ಯಾಗೆ ಬಿಟ್ಟರು ಹೇಳೊ ಕೋತಿ
ಏಳು ಸಮುದ್ರದ ಮಕರಿ ಮತ್ಸ್ಯದ ಕೂಡೆ
ಮಾತಾಡಿ ಬಂದೆನೊ ಭೂತ ೧

ಲಂಕಾದ್ವಾರದೊಳೊಬ್ಬ ಲಂಕಿಣಿ ಇರುವಳು
ಹ್ಯಾಗೆ ಬಿಟ್ಟಳು ಹೇಳೊ ಕೋತಿ
ಲಂಕಿಣಿಯನು ಕೊಂದು ಶಂಕೆಯಿಲ್ಲದೆ ನಾನು
ಬಿಂಕದಿಂದಲಿ ಬಂದೆ ಭೂತ ೨

ಕೊಂಬೆ ಕೊಂಬೆಗೆ ಕೋಟಿ ಮಂದಿ ರಾಕ್ಷಸರಿರೆ
ಹ್ಯಾಗೆ ಬಿಟ್ಟರು ಹೇಳೊ ಕೋತಿ
ಕೊಂಬೆ ಕೊಂಬೆಗೆ ಕೋಟಿ ಮಂದಿ ರಾಕ್ಷಸರನ್ನು
ಕೊಂದ್ಹಾಕಿ ಬಂದೆನೊ ಭೂತ ೩

ಯಾವೂರೊ ಎಲೊ ನೀನು ಯಾವ ಭೂಮಿಯೊ ನಿಂದು
ಯಾಕೆ ಬಂದೆ ಹೇಳೊ ಕೋತಿ
ಯಾವ ವನದೊಳಗೆ ಜಾನಕಿದೇವಿ ಇದ್ದಳೊ
ಅವಳ ನೋಡಬಂದೆ ಭೂತ ೪

ದಕ್ಷಿಣಪುರಿ ಲಂಕಾ ದಾನವರಿಗಲ್ಲದೆ
ತ್ರ್ಯಕ್ಷಾದ್ಯರಿಗಳವಲ್ಲ ಕೋತಿ
ಪಕ್ಷಿಧ್ವಜ ರಾಮನ ಅಪ್ಪಣೆ ಎನಗಿಲ್ಲ
ಈ ಕ್ಷಣದಿ ತಪ್ಪಿಸಿಕೊಂಡೆ ಭೂತ ೫

ದೂತನಾಗಿಹೆ ಎನ್ನ ಕೈಯೊಳು ಸಿಕ್ಕಿಹೆ
ಕೋಪವಿನ್ಯಾತಕೊ ಕೋತಿ
ನಾ ತಾಳಿಕೊಂಡಿಹೆನೊ ಈ ಕ್ಷಣದಿ ಲಂಕೆ
ನಿರ್ಧೂಮವವನು ಮಾಳ್ಪೆ ಭೂತ ೬

ನಿಮ್ಮಂಥ ದಾಸರು ನಿಮ್ಮರಸನ ಬಳಿ
ಎಷ್ಟುಮಂದಿದ್ದಾರೊ ಕೋತಿ
ನನ್ನಂಥ ದಾಸರು ನಿನ್ನಂಥ ಹೇಡಿಗಳು
ಕೋಟ್ಯನುಕೋಟಿಯೊ ಭೂತ ೭

ಎಲ್ಲಿಂದ ನೀ ಬಂದೆ ಏತಕೆಲ್ಲರ ಕೊಂದೆ
ಯಾವರಸಿನ ಭಂಟ ಕೋತಿ
ಚೆಲ್ವಯೋಧ್ಯಾಪುರದರಸು ಜಾನಕಿಪತಿ
ರಾಮಚಂದ್ರನ ಭಂಟ ಭೂತ ೮

ಸಿರಿ ರಾಮಚಂದ್ರನು ನಿನ್ನರಸನಾದರೆ
ಆತ ಮುನ್ನಾರು ಹೇಳೊ ಕೋತಿ
ಹಿರಣ್ಯಕನನು ಸೀಳಿ ಪ್ರಹ್ಲಾದಗೊಲಿದ
ಶ್ರೀ ಪುರಂದರವಿಠಲನೊ ಭೂತ ೯

[ಇದು ಹನುಮಂತ ಮತ್ತು ರಾವಣ ಇವರ ನಡುವೆ ನಡೆದ ಸಂವಾದ. ರಾವಣನು ಹನುಮಂತನನ್ನು ಕೋತಿಯೆಂದು ಕರೆದರೆ ಹನುಮಂತನು ರಾವಣನನ್ನು ಭೂತವೆಂದು ಕರೆಯುತ್ತಾನೆ. ಇದರಲ್ಲಿ ಹನುಮಂತನ ಸಾಹಸದ ಸ್ವಾರಸ್ಯವಾದ ವರ್ಣನೆಯಿದೆ.]

ಏಳೇಳು ಶರಧಿಯು ಏಕವಾಗಿದೆ—ಸಮುದ್ರಮಧ್ಯದಲ್ಲಿರುವ ಲಂಕಾಪುರವು ದುರ್ಗಮವಾದುದೆಂದೂ, ಅಜೇಯ್ಯವಾದುದೆಂದೂ ಪ್ರತೀತಿಯಿದ್ದಿತು. ಹನುಮಂತನು ಅಲ್ಲಿಗೆ ಬಂದುದನ್ನು ತಿಳಿದು ಲಂಕಾಧಿಪತಿಯಾದ ರಾವಣನಿಗೇ ಆಶ್ಚರ್ಯವಾಯಿತು.

ಮಕರಿ ಮತ್ಸ್ಯ—ಮೊಸಳೆ ಮೀನು.

ತ್ರ್ಯಕ್ಷಾದ್ಯರಿಗಳವಲ್ಲ—ತ್ರ್ಯಕ್ಷನೆಂದರೆ ಮುಕ್ಕಣ್ಣ, ಶಿವ ; ಶಿವನೇ ಮೊದಲಾದ ದೇವತೆಗಳು ಕೂಡ ದಾನವರ ಬೀಡಾದ ಲಂಕೆಗೆ ಬರಲಾರರು.

ಪಕ್ಷಿಧ್ವಜ—ಗರುಡಧ್ವಜ.

ಕಲ್ಯಾಣಿ ಅಟ್ಟ

ಅಂಜಿಕೆ ಇನ್ಯಾತಕಯ್ಯಾ ಸಜ್ಜನರಿಗೆ,
ಭಯವು ಇನ್ಯಾತಕಯ್ಯಾ ಪ

ಸಂಜೀವರಾಯರ ಸ್ಮರಣೆ ಮಾಡಿದಮೇಲೆ ಅ

ಕನಸಿಲಿ ಮನಸಿಲಿ ಕಳವಳವಾದರೆ
ಹನುಮನ ನೆನೆದರೆ ಹಾರಿಹೋಗದೆ ಭೀತಿ ೧

ರೋಮ ರೋಮಕೆ ಕೋಟಿ ಲಿಂಗವುದುರಿಸಿದ
ಭೀಮನ ನೆನೆದರೆ ಬಿಟ್ಟು ಹೋಗದೆ ಭೀತಿ ೨

ಪುರಂದರವಿಠಲನ ಪೂಜೆಯ ಮಾಡುವ
ಗುರು ಮಧ್ವರಾಯರ ಸ್ಮರಣೆ ಮಾಡಿದಮೇಲೆ ೩

ಸಂಜೀವರಾಯ—ಮುಖ್ಯಪ್ರಾಣನ ಒಂದು ಹೆಸರು.

ರೋಮರೋಮಕೆ ಕೋಟಿ ಲಿಂಗ—ಪುರುಷಾಮೃಗವನ್ನು ಭೀಮನು ಹಸ್ತಿನಾವತಿಗೆ ತಂದ ಸಂದರ್ಭ. ಕತೆ ಆಗಲೇ ಬಂದಿದೆ. ಆದರೆ ಇಲ್ಲಿ ಈ ಪವಾಡವನ್ನು ತೋರಿದವನು ಭೀಮನೇ ಎಂದಿದೆ. ಮೊದಲು ಹೇಳಿದ ಕತೆಯಲ್ಲಿ ಹನುಮಂತನದು ಈ ಪವಾಡ.

ತೋಡಿ — ರೂಪಕ

ನೆನೆವೆ ನಾನನ್ಯರ ಕಾಣೆನು ಪ

ಕೊಡುವರೊಳಗೆ ನೀನೆ ಎಂದು
ಬಡವನಾಗಿ ನಾನು ಬಂದು
ಉಡಿಯ ಪಿಡಿದು ಬೇಡಿಕೊಂಬೆ ನಾ
ಉಡಿಯ ಪಿಡಿದು ಬೇಡಿಕೊಂಬೆ
ದೃಢದಿ ವರವ ಕೊಡುವ ದೊರೆಯ ೧

ರಾಮದೂತನಾಗಿ ಬಂದು
ನಾಮ ಮುದ್ರಿಕೆ ಜಾನಕಿಗಿತ್ತು
ಭೀಮನಾಗಿ ಕರವ ಮುಗಿವನ
ಭೀಮನಾಗಿ ಕರವ ಮುಗಿದು
ಜ್ಞಾನಪೂರ್ಣ ಪ್ರಾಣನೆನಿಪನ ೨

ಈಶ ನಾರಸಿಂಹನಾದ
ವಾಸವಾದಿವಿನುತ ಶೇಷ
ದೋಷ ರಹಿತ ಪುರಂದರನ
ದೋಷ ರಹಿತ ಪುರಂದರವಿಠಲ
ದಾಸ ಭಾರತೀಶನೆನಿಪನ ೩

ಉಡಿಯ ಪಿಡಿದು—ಸೆರಗೊಡ್ಡಿ.
ಜ್ಞಾನಪೂರ್ಣ—ಸರ್ವಜ್ಞಾಚಾರ್ಯರಾಗಿ (ಮಧ್ವಾಚಾರ್ಯರಾಗಿ).

ಬೇಹಾಗು ಅಟ್ಟ

ಈತ ಮುಖ್ಯ ಪ್ರಾಣನಾಥ ಪ

ಈತ ಶ್ರೀರಾಮ ಸೇವಕನೆನಿಸಿದಾತ ಅ

ಭಾನುವಿನ ತುಡುಕಿದಾತ ಭಾರತಕೆ ಬಂದಾತ
ವಾನರೋತ್ತಮ ಹನುಮ ಹರಿಶರಣನೀತ ೧

ವಾರಿಧಿಯ ನೆಗೆದಾತ ವನಚರಾಗ್ರೇಸರನೀತ
ವಾರಿಜಾಕ್ಷಿಗೆ ಮುದ್ರಿಕೆ ವಹಿಸಿ ಇತ್ತಾತ ೨

ಲಂಕಿಣಿಯ ಗೆಲಿದಾತ ಲಂಕೆಯನು ಉರಿಸಿದಾತ
ಪಂಕಜೋದ್ಭವನ ಪಟ್ಟಭದ್ರನೀತ ೩

ವಾನರೋತ್ತಮನೀತ ವಸುಧೆಗೆ ವೆಗ್ಗಳನೀತ
ದಾನವಾಂತಕ ಹನುಮ ದಶಪ್ರಮತಿಯೀತ ೪

ಸ್ಮರನಂಬು ಗೆಲಿದಾತ ಶರಣ ಜನರಿಗೆ ದಾತ
ಸಿರಿ ಪುರಂದರವಿಠಲಗೆ ಅಚ್ಛಿನ್ನ ಭಕ್ತನೀತ ೫

ಭಾನುವಿನ ತುಡುಕಿದಾತ—ಮಗುವಾಗಿರುವಾಗ ಸೂರ್ಯನನ್ನು ಹಣ್ಣೆಂದು ಬಗೆದು ಸೂರ್ಯಮಂಡಲಕ್ಕೆ ಹಾರಿದವನು.
ಭಾರತಕೆ ಬಂದಾತ—ಮಹಾಭಾರತ ಯುದ್ಧದಲ್ಲಿ ಭೀಮನಾಗಿ ಪಾಲುಗೊಂಡವನು.
ವಾರಿಧಿಯ ನೆಗೆದಾತ—ಸೀತೆಯನ್ನು ಹುಡುಕುತ್ತ ಸಮುದ್ರವನ್ನು ಜಿಗಿದವನು.
ವನಚರಾಗ್ರೇಸರ—ಕಾಡಿನಲ್ಲಿ ಅಲೆದಾಡುವ ವಾನರರಲ್ಲಿ ಮುಂದಾದವನು.
ವಾರಿಜಾಕ್ಷಿಗೆ—ಸೀತೆಗೆ.
ಪಂಕಜೋದ್ಭವನ...—ಮುಂಬರುವ ಕಲ್ಪದಲ್ಲಿ ಹನುಮಂತನು ಬ್ರಹ್ಮ ಪಟ್ಟ (ಪಂಕಜೋದ್ಭವ ಪಟ್ಟ)ವನ್ನು ಪಡೆಯುವನೆಂದು ನಂಬಿಕೆ.
ವೆಗ್ಗಳ—ಹಿರಿಯ.
ದಶಪ್ರಮತಿ—ಮಧ್ವಾಚಾರ್ಯರ ಹೆಸರುಗಳಲ್ಲೊಂದು.
ಸ್ಮರನಂಬು ಗೆಲಿದಾತ—ಸ್ಮರನೆಂದರೆ ಮನ್ಮಥ, ಅವನ ಬಾಣ (ಅಂಬು) ಎಂದರೆ ಮೋಹ ; ಇದನ್ನು ಗೆದ್ದವನು ; ನೈಷ್ಠಿಕ ಬ್ರಹ್ಮಚಾರಿ.
ಅಚ್ಛಿನ್ನ—ಎಡೆಬಿಡದ.

ಮುಖಾರಿ ಅಟ್ಟ

ಜಯ ಮಂಗಳಂ ನಿತ್ಯ ಶುಭ ಮಂಗಳಂ ಪ

ವಾನರೇಂದ್ರನ ರೂಪವ ತಾಳಿದ
ವನಧಿಯ ದಾಟಿ ಜಾನಕಿಗುಂಗುರವಿತ್ತ
ದಾನವೇಂದ್ರನ ವನವನೆಲ್ಲವ ಕಿತ್ತು ಪಟ್ಟಣವನೆ ಸುಟ್ಟು
ಇನಕುಲದ ರಾಮಗೆರಗಿದ್ದ ಹನುಮಂತಗೆ ೧

ದುಷ್ಟ ದುರ್ಯೋಧನನ ಮಡುಹಿ
ಜ್ಯೇಷ್ಠಗೆ ಪಟ್ಟಗಟ್ಟಿ ಅವನಿಯೊಳು ಮೆರೆದವಗೆ
ದುಷ್ಟರಾಯರನೆಲ್ಲ ಮಡುಹಿದಖಿಳೇಶ್ವರನ
ಕೃಷ್ಣಗತಿಪ್ರಿಯನಾದ ಭೀಮಸೇನಗೆ ೨

ಯತಿರೂಪವ ತಾಳಿ ಶ್ರುತಿ ಶಾಸ್ತ್ರದಿಂ ಶ್ರೀ
ಪತಿಯು ಸರ್ವೋತ್ತಮನೆಂದೆನಿಸಿದವಗೆ
ಯತಿ ವೇದವ್ಯಾಸನಾದ ಪುರಂದರವಿಠಲನ್ನ
ಗತಿ ಮಾರ್ಗವ ತೋರಿದ ಮಧ್ವಮುನಿಗೆ ೩

ವನಧಿಯ—ಸಮುದ್ರವನ್ನು.
ದಾನವೇಂದ್ರನ—ರಾವಣನ.
ಇನಕುಲದ—ಸೂರ್ಯವಂಶದ.
ಮಡುಹಿ—ಸೆಣಸಿ ಸೋಲಿಸಿ.
ಜ್ಯೇಷ್ಠಗೆ—ತನ್ನ ಅಣ್ಣನಾದ ಯುಧಿಷ್ಠಿರನಿಗೆ.
ಗತಿ ಮಾರ್ಗವ—ಹೊಂದುವ ದಾರಿಯನ್ನು. ಗತಿ ಎಂದರೆ ಮೋಕ್ಷವೂ ಆಗುತ್ತದೆ.

ಹಿಂದೂಸ್ಥಾನಿ ಕಾಪಿ ಆದಿ

ಮಂಗಳಂ ಮಂಗಳಂ ಮುಖ್ಯ ಪ್ರಾಣರಾಯಗೆ ಪ

ಮಂಗಳಂ ಮಂಗಳಂ ಕವಿಜನಗೇಯಗೆ ಅ

ಪದುಮ ಮಿತ್ರ ಪುತ್ರಗೆ ರಾಜ್ಯವ ಸಾಧಿಸಿ ಕೊಟ್ಟವಗೆ
ಮುದದಿಂದ ವಾರಿಧಿಯ ಲಂಘಿಸಿ ಲಂಕೆಯ ಸುಟ್ಟವಗೆ
ಪದುಮಾಕ್ಷಿ ಜಾನಕಿಯ ನೋಡುತ ಮೋದವ ಪಟ್ಟವಗೆ
ಹದುಳದಿ ರಘುನಾಥನ ಪದದಲಿ ಶಿರವನಿಟ್ಟವಗೆ ೧

ಪುಂಡರೀಕನ ನಯನ ಸುಪ್ರಚಂಡ ಭೀಮಗೆ
ಪುಂಡರ ಶಿರಗಳ ರಣದಿ ಚಂಡನಾಡಿದವಗೆ
ಚಂಡಿಸಿ ಶಿವನ ವರಗಳನ್ನೆಲ್ಲ ಖಂಡಿಸಿದಾತಗೆ
ಶುಂಡಾಲಪುರದರಸನೆಂದು ಮಂಡಿಸಿ ಮೆರೆದಗೆ ೨

ದುರುಳ ಮಾಯಾವಾದಿಗಳನು ಮರುಳು ಮಾಡಿದವಗೆ
ಮುರಳೀಧರನೆ ಪರನೆಂದಾಗ ಧರೆಗೆ ತೋರಿದಗೆ
ಶರಣಾಗತರನು ಪೊರೆವೆನೆಂದು ಬಿರುದು ಪೊತ್ತವಗೆ
ಧರೆಯೊಳು ಪುರಂದರವಿಠಲನ ನೆನೆಯುವ ಕರುಣಾಸಾಗರಗೆ ೩

ಕವಿಜನಗೇಯ—ಕವಿಗಳು ಯಾರನ್ನು ಹಾಡಿ ಹೊಗಳುವರೋ ಅವನು.

ಪದುಮ ಮಿತ್ರ ಪುತ್ರಗೆ—ಪದ್ಮಮಿತ್ರನೆಂದರೆ ಸೂರ್ಯ; ಅವನ ವಂಶದಲ್ಲಿ ಬಂದವನು ರಾಮ.

ಹದುಳದಿ—ಸ್ಥಿರವಾಗಿ, ಕುಶಲವೆಂಬ ನೆಮ್ಮದಿಯಿಂದ.

ಪುಂಡರೀಕನ ನಯನ—ತಾವರೆ ಹೂಗಳಂತೆ ಚೆಲುವಾದ ಕಣ್ಣುಳ್ಳ.

ಚಂಡಿಸಿ...—ಸಂದರ್ಭ ತಿಳಿಯುವುದಿಲ್ಲ.

ಶುಂಡಾಲಪುರ—ಹಸ್ತಿನಾವತಿ (ಶುಂಡಾಲ–ಆನೆಯ ಸೊಂಡಿಲು, ಹಸ್ತಿ ಎನ್ನುವುದಕ್ಕೆ ಪರ್ಯಾಯ).

ಮುರಳೀಧರನೆ ಪರನೆಂದು—ಹರಿಯು ಸರ್ವೋತ್ತಮನೆಂದು.

# ರಮಾ

ರಮಾ ಅಥವಾ ಲಕ್ಷ್ಮಿ (ಮಹಾಲಕ್ಷ್ಮಿ)ನಾರಾಯಣನ ಪತ್ನಿ. ಅಚಿಂತ್ಯ ಮಹಿಮನಾದ ಅವನ ಮಾಯಾರೂಪ. ದೇವತಾತಾರತಮ್ಯದಲ್ಲಿ ಎರಡನೆಯ ಕಕ್ಷೆ ಆಕೆಯ ಅನುಗ್ರಹದಿಂದಲೇ ಬ್ರಹ್ಮನು ಸೃಷ್ಟಿಮಾಡಲು ಸಮರ್ಥ, ತತ್ತ್ವೇಶರೆಲ್ಲ ತಂತಮ್ಮ ವ್ಯಾಪಾರಗಳನ್ನು ನಡೆಸಲು ಶಕ್ತರು. ಬ್ರಹ್ಮಾಂಡದ ಪ್ರಕೃತಿಯಲ್ಲಿ ಅವಳೇ ನಿಂತು ನಾರಾಯಣನ ಸಂಕಲ್ಪದಂತೆ ಎಲ್ಲ ಜೀವರನ್ನೂ ಪ್ರೇರಿಸುವಳು. ನಿತ್ಯಮೂಲ ಪ್ರಕೃತಿಯಾಗಿ ತನ್ನ ಅಪ್ರಾಕೃತ ಸತ್ತ್ವ ಗುಣ, ರಜೋಗುಣ, ತಮೋಗುಣಗಳಿಂದ ಕ್ರಮವಾಗಿ ಶ್ರೀ, ಭೂ ಮತ್ತು ದುರ್ಗಾರೂಪಗಳನ್ನು ಧರಿಸಿ ಬ್ರಹ್ಮಾಂಡವನ್ನೆಲ್ಲ ಆಳುವಳು. ನಿತ್ಯ ಮುಕ್ತಳು, ದುಃಖಸಂಬಂಧವಿಲ್ಲದವಳು, ನಿತ್ಯವ್ಯಾಪ್ತಳು. ಪ್ರಳಯ ಕಾಲ ದಲ್ಲಿ ತತ್ತ್ವೇಶರೆಲ್ಲ ಕ್ರಮವರಿತು ತನ್ನಲ್ಲಿ ಲೀನವಾಗಲು, ತಾನು ಪರಮಾತ್ಮ ನೊಂದಿಗೆ ಆಲಿಂಗನದಲ್ಲಿ ಅವಿನಾಭಾವದಿಂದ ಇರುವವಳು ('ಬ್ರಹ್ಮಾಂಡ ಭಾಂಡಮುದರೇ ನಿಧಾಯ ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಜಾಗ್ರೇ). ಸೃಷ್ಟಿಯಲ್ಲಿ ಜೀವರಿಗೆ ಅವರವರ ಯೋಗ್ಯತಾನುಸಾರವಾಗಿ ಆನಂದವನ್ನು ಕೊಡುವವಳು ; ಪರಮಾತ್ಮನಿಗಂತೂ ನಿತ್ಯಪ್ರಣಯಿನಿ.

ಅವ್ಯಕ್ತತತ್ತ್ವದ ಅಭಿಮಾನಿದೇವತೆಯೆಂದು ಶಾಂಡಿಲ್ಯತತ್ತ್ವ, ಭಾಗವತಗಳ ಒಕ್ಕಣೆ ('ಆದ್ಯಾ ಚಾವ್ಯಕ್ತತತ್ತ್ವಾತ್ಮಾ ದೇವೀ ಲಕ್ಷ್ಮೀರುದಾಹೃತಾ'), ಜಡಪ್ರಕೃತಿಗೆ ಮುಖ್ಯನಿಯಾಮಕಳು. ಎಲ್ಲ ತತ್ತ್ವೇಶರೂ (ಬ್ರಹ್ಮ, ವಾಯು, ಸರಸ್ವತಿ, ಭಾರತಿ, ರುದ್ರ ಇತ್ಯಾದಿ) ಅವಳಿಗೆ ಅಧೀನರೇ ; ಅವಳ ಮೂಲಕವೇ ಆ ದೇವತೆಗಳಿಗೆಲ್ಲ ನಾರಾಯಣನ ಸಾನ್ನಿಧ್ಯ, ಅನುಗ್ರಹಗಳು. ಬ್ರಹ್ಮಾಂಡದ ಸಮಸ್ತ ವ್ಯಾಪಾರವನ್ನೂ ಆಲೋಚನೆ ಮಾಡದೆ ಅರಿತುಕೊಳ್ಳುವ ಸಾಮರ್ಥ್ಯ ಅವಳದ್ದು (ವಿಷ್ಣು ರಹಸ್ಯ) ; ನಾರಾಯಣನೊಂದಿಗೆ ಈಶಕೋಟಿಪ್ರವಿಷ್ಟಳಾದರೂ, ಪರ ಮಾತ್ಮನನ್ನು ಸಂಪೂರ್ಣವಾಗಿ ಅರಿತುಕೊಳ್ಳಲಾರಳು, ಅದು ನಾರಾಯಣನ ಅಚಿಂತ್ಯಾದ್ಭುತ ಮಹಿಮೆ. ಲಕ್ಷ್ಮಿಯು ನಾರಾಯಣನಿಗೆ ಅಧೀನಳು.

ನಾರಾಯಣನ ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪಗಳಿಗೆ ಅನುಗುಣವಾಗಿ ಲಕ್ಷ್ಮಿಯ ಮಾಯಾ, ಜಯಾ, ಕೃತೀ, ಶಾಂತಿ ಎಂಬ ನಾಲ್ಕು ರೂಪಗಳಿದ್ದು ಅವರಿಂದ ಕ್ರಮವಾಗಿ ಬ್ರಹ್ಮ, ವಾಯು, ವಾಣಿ (ಸರಸ್ವತಿ), ಭಾರತಿ, ಎಂಬ ತತ್ತ್ವೇಶರು ಮೂಡಿಕೊಳ್ಳುವರು; ಮುಂದೆ ಸಮಸ್ತ ಬ್ರಹ್ಮಾಂಡದ ಸೃಷ್ಟಿ. ತತ್ತ್ವೇಶರ ಬೇರೆ ಬೇರೆ ಸಾಮರ್ಥ್ಯಗಳನ್ನೂ, ಭೋಗಗಳನ್ನೂ, ಜ್ಞಾನವನ್ನೂ, ಮುಕ್ತಿ ಯನ್ನೂ (ಲಿಂಗಭಂಗ), ಆನಂದವನ್ನೂ, ಪರಮಾತ್ಮನ ಅಧೀನಳಾಗಿ ನೀಡುವಳು.

ಸರ್ವದಾ ನಾರಾಯಣನ ಧ್ಯಾನದಲ್ಲಿ ನಿರತಳು. ಅವನ ನಿವಾಸವಾದ ವೈಕುಂಠದಲ್ಲಿ ನಗರ, ಪ್ರಾಸಾದ, ಛತ್ರ, ಚಾಮರ, ವ್ಯಜನ, ದೀಪ,

ಶೋಭೆ ಎಲ್ಲವೂ ಅವಳ ರೂಪಗಳೇ. ಹೀಗೆ ತಾನೇ ಎಲ್ಲವೂ ಆಗಿ, ವಿವಿಧ ವಾಗಿ ನಾರಾಯಣನ ಸೇವೆ ಮಾಡುವಳು ; ಅವಳೇ 'ವಿಭವೈಕಪದ'. ವೈಕುಂಠವೆಂಬುದೂ ಅವಳ ರೂಪವೇ ('ಶ್ರೀರೇವ ಲೋಕರೂಪೇಣ ವಿಷ್ಣೋಽಸ್ತ್ವಿಷ್ಟತಿ ಸರ್ವದಾ'). ಅವಳೇ ತ್ರಿಧಾಮನಾಯಕಿ ; ವಿಷ್ಣುವಿನ ಮೂರು ಧಾಮಗಳು ವೈಕುಂಠ, ಶ್ವೇತದ್ವೀಪ, ಅನಂತಾಸನ. ಸಾಧಕರಿಗೆ ಲಕ್ಷ್ಮಿಯು ಬಿಂಬನ (ಎಂದರೆ ನಾರಾಯಣನ) ಸ್ವರೂಪಾಂಶವೇ (ವಿವರಣೆಗೆ ಈ ಸಂಪುಟದ ಪ್ರಸ್ತಾವನೆ ನೋಡಿ) ; ಬೋಧ (ಅರಿವು) ಮತ್ತು ಸುಖ ರೂಪ ಆದವಳು.



ತೋಡಿ                                                                    ಅಟ್ಟ

ಏನು ಧನ್ಯಳೋ ಲಕುಮಿ ಎಂಥಾ ಮಾನ್ಯಳೊ                  ಪ

ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತಿಹಳು          ಅ

ಕೋಟಿ ಕೋಟಿ ಭೃತ್ಯರಿರಲು ಹಾಟಕಾಂಬರನ ಸೇವೆ
ಸಾಟಿಯಿಲ್ಲದೆ ಪೂರ್ಣಗುಣಳು ಶ್ರೇಷ್ಠವಾಗಿ ಮಾಡುತಿಹಳು    ೧

ಛತ್ರ ಚಾಮರ ವ್ಯಜನ ಪರ್ಯಂಕ ಪಾತ್ರರೂಪದಲ್ಲಿ ನಿಂತು
ಚಿತ್ರಚರಿತವಾದ ಹರಿಯ ನಿತ್ಯಸೇವೆ ಮಾಡುತಿಹಳು          ೨

ಸರ್ವಸ್ಥಳದಿ ವ್ಯಾಪ್ತನಾದ ಸರ್ವದೋಷ ರಹಿತನಾದ
ಗರುಡಗಮನನಾದ ಪುರಂದರವಿಠ್ಠಲನ್ನ ಸೇವಿಸುವಳು          ೩

ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತಿಹಳು—ಮೊದಲ ಕಕ್ಷೆಯಲ್ಲಿರುವ ನಾರಾಯಣನಿಗೂ ಎರಡನೆಯ ಕಕ್ಷೆಯಲ್ಲಿರುವ ಲಕ್ಷ್ಮಿಗೂ ದೇಶ—ಕಾಲವ್ಯಾಪ್ತಿ ಸಮಾನವಾದುದು. ಲಕ್ಷ್ಮಿಯು ಚಿತ್‌ಪ್ರಕೃತಿ, ನಾರಾಯಣನು ಪುರುಷ. ಲಕ್ಷ್ಮಿಗೆ 'ನಿತ್ಯಪತ್ನೀಭಾವ', ಅವರಿಬ್ಬರೂ ನಿತ್ಯಾವಿಯುಕ್ತರು, ಎಂದರೆ ಎಂದಿಗೂ ಎಡೆಬಿಡದೆ ಒಟ್ಟಿಗಿರುವವರು. ಪ್ರಳಯಕಾಲದಲ್ಲಿ ಕೂಡ, ಲಕ್ಷ್ಮಿಯು ವಿಷ್ಣುವಿನೊಂದಿಗೆ ಆಲಿಂಗನದಲ್ಲಿದ್ದು ಅವನಿಗೂ ಆನಂದವನ್ನು ನೀಡಿ ತಾನೂ ಆನಂದವನ್ನು ಹೊಂದುವಳು.

ಕೋಟಿ ಕೋಟಿ ಭೃತ್ಯರಿರಲು—ಹರಿಯು ಮಾಯಾರೂಪವಾದ ಲಕ್ಷ್ಮಿಯು ಅವನಿಂದಲೇ ಸೃಷ್ಟಿಗೆ ತೊಡಗಿ, ಅವಳ ಅನುಗ್ರಹದಿಂದಲೇ ಬ್ರಹ್ಮನು ಬ್ರಹ್ಮಾಂಡವನ್ನು ಸೃಷ್ಟಿಮಾಡುವನು ; ಲಕ್ಷ್ಮಿಯು ಪರಮಾತ್ಮನ ಸಂಕಲ್ಪದಂತೆ ಬ್ರಹ್ಮಾದಿ ದೇವತೆಗಳಿಂದ ಬ್ರಹ್ಮಾಂಡದ ವ್ಯಾಪಾರವನ್ನೆಲ್ಲ ನಡೆಸುವಳು. ಮತ್ತು ಲಕ್ಷ್ಮಿಯು ಸಕಲಜೀವನಿಯಾಮಕಳು. ಆದ್ದರಿಂದ ಅವಳಿಗೆ ಬ್ರಹ್ಮನಿಂದ ಮೊದಲುಮಾಡಿಕೊಂಡು ಅಚೇತನ ಪ್ರಕೃತಿಯವರೆಗೂ ಎಲ್ಲರೂ ಭೃತ್ಯರೇ.

ಹಾಟಕಾಂಬರ—ಬಂಗಾರದಂತೆ ಹೊಳೆಯುವ ಪೀತಾಂಬರವನ್ನು ತೊಟ್ಟವನು, ನಾರಾಯಣ.

ಸಾಟಿಯಿಲ್ಲದೆ—ದೇವತಾತಾರತಮ್ಯದಲ್ಲಿ ಅವಳಿಗೆ ಯಾರೂ ಸಮರಾಗರು; ನಿತ್ಯ ಮುಕ್ತಿ, ನಿತ್ಯವ್ಯಾಪ್ತಿ, ದುಃಖಾಸ್ಪೃಷ್ಟಸುಖ ಅವಳಿಗಲ್ಲದೆ ಬೇರೆ ಯಾವ ದೇವತೆಗೂ ಇರದು.

ಛತ್ರಚಾಮರ ..—ಅಪ್ರಾಕೃತವಾದ ವೈಕುಂಠಲೋಕವು ಲಕ್ಷ್ಮೀನಾರಾಯಣರ ನಿವಾಸ ಸ್ಥಾನ; ಅದು ನಿತ್ಯ, ಸನಾತನ. ಅಲ್ಲಿರುವ ಎಲ್ಲ ಪದಾರ್ಥಗಳೂ, ಪರಿಕರಗಳೂ, ನಗರ ವಿವರಗಳೂ ಲಕ್ಷ್ಮಿಯ ರೂಪಗಳೇ. ಈ ಎಲ್ಲ ರೂಪಗಳಿಂದ ಲಕ್ಷ್ಮಿಯು ನಾರಾಯಣನಿಗೆ ಅನನ್ಯಸೇವೆ ಸಲ್ಲಿಸುವಳು.

ವ್ಯಜನ—ಬೀಸಣಿಗೆ.

ಪರ್ಯಂಕ—ಮಂಚ.

ಚಿತ್ರಚರಿತ—ಅಚಿಂತ್ಯಮಹಿಮಾದ್ಭುತಶಕ್ತಿಯುಳ್ಳ.



ಮಧ್ಯಮಾವತಿ ಆದಿ

ಭಾಗ್ಯದ ಲಕ್ಷ್ಮಿ ಬಾರಮ್ಮ ನಮ್ಮಮ್ಮ ನೀ
ಸೌಭಾಗ್ಯದ ಲಕ್ಷ್ಮಿ ಬಾರಮ್ಮ ಪ

ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ
ಗೆಜ್ಜೆಯ ಕಾಲಿನ ನಾದವ ತೋರುತ
ಸಜ್ಜನ ಸಾಧು ಪೂಜೆಯ ವೇಳೆಗೆ
ಮಜ್ಜಿಗೆಯೊಳಗಿನ ಬೆಣ್ಣೆಯಂದದಿ ೧

ಕನಕವೃಷ್ಟಿಯ ಕರೆಯುತ ಬಾರೆ
ಮನಕೆ ಮಾನವ ಸಿದ್ಧಿಯ ತೋರೆ
ದಿನಕರ ಕೋಟಿ ತೇಜದಿ ಹೊಳೆಯುವ
ಜನಕರಾಯನ ಕುಮಾರಿ ಬೇಗ ೨

ಶಂಕೆಯಿಲ್ಲದ ಭಾಗ್ಯವ ಕೊಟ್ಟು
ಕಂಕಣ ಕೈಯ ತಿರುಹುತ ಬಾರೆ
ಕುಂಕುಮಾಂಕಿತೆ ಪಂಕಜಲೋಚನೆ
ವೆಂಕಟರಮಣನ ಬಿಂಕದ ರಾಣಿ ೩

ಅತ್ತಿತ್ತಗಲದೆ ಭಕ್ತರ ಮನೆಯೊಳು
ನಿತ್ಯ ಮಹೋತ್ಸವ ನಿತ್ಯ ಸುಮಂಗಳ
ಸತ್ಯವ ತೋರುತ ಸಾಧು ಸಜ್ಜನರ
ಚಿತ್ತದಿ ಹೊಳೆಯುವ ಪುತ್ಥಳಿ ಬೊಂಬೆ ೪

ಸಕ್ಕರೆ ತುಪ್ಪ ಕಾಲುವೆ ಹರಿಸಿ
ಶುಕ್ಕರವಾರದ ಪೂಜೆಯ ವೇಳೆಗೆ
ಅಕ್ಕರೆಯುಳ್ಳ ಅಳಗಿರಿರಂಗನ
ಚೊಕ್ಕ ಪುರಂದರವಿಠಲನ ರಾಣಿ ೫

ಕನಕವೃಷ್ಟಿಯು—ಬಂಗಾರದ ಸುರಿಮಳೆಯನ್ನು, ಎಂದರೆ ಐಶ್ವರ್ಯವನ್ನು.

ಮನಕೆ ಮಾನವ ಸಿದ್ಧಿಯು—ಮನಸ್ಸಿಗೆ ಸಮಾಧಾನವನ್ನೂ (ಮಾನ), ಬಯಕೆಗಳ ಪೂರೈಕೆಯನ್ನೂ (ಸಿದ್ಧಿ).

ದಿನಕರ ಕೋಟಿ ತೇಜದಿ—ಕೋಟಿಸೂರ್ಯರ ಪ್ರಕಾಶದಿಂದ.

ಜನಕರಾಯನ ಕುಮಾರಿ—ಸೀತೆಯು ಲಕ್ಷ್ಮಿಯ ಅವತಾರವೇ.

ಸತ್ಯವ ತೋರುತ—ಹರಿಯು ಸರ್ವೋತ್ತಮನೆಂಬ ಸತ್ಯವನ್ನು ತಿಳಿಸುತ್ತ.

ಅಕ್ಕರೆಯುಳ್ಳ—ತನ್ನಲ್ಲಿ ಅತಿಶಯವಾದ ಪ್ರೀತಿಯಿರುವ.

ಅಳಗಿರಿರಂಗನ—ಅಳಗಿರಿಯೆಂಬುದು ಆಂಧ್ರಪ್ರದೇಶದ ಕಡಪಾ ಬಳಿಯಿರುವ 'ಪುಷ್ಪಗಿರಿ'ಯೆಂಬ ಕ್ಷೇತ್ರವೆಂದು ಹೇಳುತ್ತಾರೆ; ಆದರೆ ತಿರುಮಲೆ–ತಿರುಪತಿಗೂ ಅಳಗಿರಿಯೆಂಬ ಹೆಸರಿದೆ.



ಶ್ರೀರಾಗ ಅಟ್ಟ

ಪಾಲಿಸೆ ಎನ್ನ ಶ್ರೀಮಹಾಲಕ್ಷ್ಮಿ
ಪಾಲಿಸೆ ಎನ್ನನು ಪಾಲಾಬ್ಧಿ ಸಂಜಾತೆ ಪ

ಲಲಿತಾಂಗಿ ಶುಭೆ ದೇವಿ ಮಂಗಳೆ ದೇವಿ ಅ

ವೇದಾಭಿಮಾನಿ ಸಾರಸಾಕ್ಷಿ
ಶ್ರೀಧರರಮಣಿ
ಕಾದುಕೊ ನಿನ್ನಯ ಪಾದಸೇವಕರನ್ನು
ಆದಿಶಕ್ತಿ ಸರ್ವಾಧಾರೆ ಗುಣಪೂರ್ಣೆ ೧

ದಯದಿಂದ ನೋಡೆ ಭಜಿಪ ಭಕ್ತರ
ಭಯ ದೂರ ಮಾಡೆ
ದಯಪಾಲಿಸೆ ಮಾತೆ ತ್ರೈಲೋಕ್ಯ ವಿಖ್ಯಾತೆ
ಜಯ ದೇವಿ ಸುವ್ರತೆ ಜಗದೀಶನ ಪ್ರೀತೆ ೨

ನೀನಲ್ಲದನ್ಯ ರಕ್ಷಿಪರನು
ಕಾಣೆ ನಾ ಮುನ್ನ
ದಾನವಾಂತಕ ಸಿರಿ ಪುರಂದರವಿಠಲನ
ಧ್ಯಾನಿಪ ಭಕುತರ ಮಾನ ನಿನ್ನದು ತಾಯೆ ೩

ಪಾಲಾಬ್ಧಿ ಸಂಜಾತೆ—ಅಮೃತಕ್ಕಾಗಿ ದೇವದಾನವರು ಸಮುದ್ರಮಥನ ಮಾಡಿದ ಸಂದರ್ಭದಲ್ಲಿ, ಸಮುದ್ರದಿಂದ ಹೊರಬಂದು ವಿಷ್ಣುವಿನ ವಕ್ಷಃಸ್ಥಳವನ್ನು ಸೇರಿದವಳು ಲಕ್ಷ್ಮಿಯೆಂದು ಪುರಾಣದ ಕತೆ. ಪಾಲಾಬ್ಧಿಯೆಂದರೆ ಹಾಲುಗಡಲು, ಕ್ಷೀರಸಮುದ್ರ.

ವೇದಾಭಿಮಾನಿ—ವೇದವೆಂದರೆ ಹರಿಯ ಹಿರಿಮೆಯನ್ನು ತೋರಿಸುವ ಅಪೌರುಷೇಯ ಗ್ರಂಥರಾಶಿ. ಅದನ್ನು ಚತುರ್ಮುಖ ಬ್ರಹ್ಮನು ಜಗತ್ತಿನ ಜನರಿಗೆ ತಿಳಿಯಪಡಿಸುವಂತೆ ಅವನನ್ನು ಪ್ರೇರಿಸಿದವಳು ಲಕ್ಷ್ಮಿಯೇ. ಹರಿಯ ಹಿರಿಮೆ

ಲಕ್ಷ್ಮಿಗೆ ತಿಳಿದಿರುವಂತೆ ಬ್ರಹ್ಮನಿಗೂ ತಿಳಿಯದು, ಏಕೆಂದರೆ ಲಕ್ಷ್ಮಿಯು ಅವನಿಗೆ 'ನಿತ್ಯಾವಿಯೋಗಿನಿ'.

ಆದಿಶಕ್ತಿ...—ಹರಿಯ ಸಂಕಲ್ಪದಿಂದ ಬ್ರಹ್ಮಾದಿಗಳ ಸೃಷ್ಟಿ, ಬ್ರಹ್ಮನಿಂದ ಬ್ರಹ್ಮಾಂಡ ಸೃಷ್ಟಿ, ಬ್ರಹ್ಮಾದಿ ದೇವತೆಗಳಿಂದ ಬ್ರಹ್ಮಾಂಡದ ವ್ಯಾಪಾರಗಳ ವ್ಯವಸ್ಥೆ. ಇವೆಲ್ಲಕ್ಕೂ ಲಕ್ಷ್ಮಿಯ ಶಕ್ತಿಯೇ ಮೂಲಕಾರಣ ಅವಳೇ ಮೂಲಪ್ರಕೃತಿ. ಚಿತ್‌ಪ್ರಕೃತಿಯಾದುದರಿಂದ ಎಲ್ಲ ಇರವಿಗೂ ಅವಳೇ ಆಸರೆ, ಅಪ್ರಾಕೃತವಾದ ಸತ್ತ್ವ, ರಜಸ್ಸು, ತಮಸ್ಸು ಈ ಗುಣಗಳಿಂದ ಶ್ರೀ, ಭೂ, ದುರ್ಗಾ ರೂಪಗಳನ್ನು ಧರಿಸುತ್ತಾಳಾಗಿ ಗುಣಪೂರ್ಣೆ.



ಮಧ್ಯಮಾವತಿ ಆದಿ

ಮರುಳು ಮಾಡಿಕೊಂಡೆಯಲ್ಲೆ ಮಾಯಾದೇವಿಯೆ ಪ

ಇರುಳು ಹಗಲು ಏಕವಾಗಿ ಹರಿಯು ನಿನ್ನ ಬಿಡದಿಪ್ಪಂತೆ ಅ

ಜ್ಞಾನಿಗಳು ನಿತ್ಯ ಅನ್ನ ಪಾನಾದಿಗಳನ್ನು ಬಿಟ್ಟು
ನಾನಾವಿಧ ತಪವಿದ್ದರು ಧ್ಯಾನಕ್ಕೆ ಸಿಲುಕದವನ ೧

ಸರ್ವ ಸಂಗವನು ಬಿಟ್ಟು ಸನ್ಯಾಸಿಯಾದ ಕಾಲಕ್ಕು
ಸರ್ವದಾ ತನ್ನೆದೆಯ ಮೇಲೆ ಬಿಡದೆ ನಿನ್ನ ಧರಿಸಿಪ್ಪಂತೆ ೨

ಪ್ರಳಯಕಾಲದಲ್ಲಿ ಆಲದೆಲೆಯಮೇಲೆ ಮಲಗಿದ್ದಾಗ
ಹಲವು ಆಭರಣಗಳು ಜಲವು ಆಗಿ ಜಾಣತನದಿ ೩

ರಂಗನು ಭೂಲೋಕದಿ ಭುಜಂಗಗಿರಿಯೊಳಲಮೇಲು
ಮಂಗಪತಿಯಾಗಿ ನಿನ್ನ ಅಂಗೀಕರಿಸುವಂತೆ ೪

ಮಕ್ಕಳ ಪಡೆದರೆ ನಿನ್ನ ಚೊಕ್ಕತನವು ಪೋಪುದೆಂದು
ಪೊಕ್ಕುಳೊಳು ಮಕ್ಕಳ ಪಡೆದು ಕಕ್ಕುಲಾತಿಪಡುವಂತೆ ೫

ಎಡಕೆ ಭೂಮಿ ಬಲಕೆ ಶ್ರೀಯು ಎದುರಿನಲ್ಲಿ ದುರ್ಗಾದೇವಿ
ತೊಡೆಯಮೇಲೆ ಲಕುಮಿಯಾಗಿ ಬಿಡದೆ ಮುದ್ದಾಡಿಸುವಂತೆ ೬

ಎಂದೆಂದಿಗೂ ಮರೆಯೆ ನಿನ್ನಾನಂದದಿ ಜನರಿಗೆಲ್ಲ
ತಂದು ತೋರೆ ಸ್ವಾಧೀನ ಪುರಂದರವಿಠ್ಠಲರಾಯನ ೭

ಮರುಳು ಮಾಡಿಕೊಂಡೆಯಲ್ಲೆ—ಲಕ್ಷ್ಮಿಯು ಅಚಿಂತ್ಯಮಹಿಮನಾದ ಹರಿಯ ಮಾಯಾರೂಪಳು ; ಹಾಗಾಗಿ ಅವಳದ್ದು ವಿಚಿತ್ರಾನಂತಾದ್ಭುತ ಶಕ್ತಿ. ಹರಿಯ ಅನುಗ್ರಹವನ್ನು ಸಂಪೂರ್ಣವಾಗಿ ಪಡೆದುಕೊಂಡವಳು ; ಹರಿಯು ಅವಳಿಗೆ ಮರುಳಾಗಿದ್ದಾನೆಂದು ವಿನೋದದ ಮಾತು.

ಇರುಳು ಹಗಲು ಏಕವಾಗಿ ..—'ನಿತ್ಯಾವಿಯೋಗಿನಿ' ಎಂಬ ಲಕ್ಷಣದ ಕನ್ನಡರೂಪ.

ಸರ್ವ ಸಂಗವನು ಬಿಟ್ಟು...—ಸಂದರ್ಭ ತಿಳಿಯುವುದಿಲ್ಲ.

ಭುಜಂಗ ಗಿರಿಯೊಳು—ಶೇಷಾಚಲದಲ್ಲಿ (ವೇಂಕಟಗಿರಿಯಲ್ಲಿ).

ಅಲಮೇಲು ಮಂಗಪತಿಯಾಗಿ—ಅಲರ್‌ಮೇಲ್ ಮಂಗೈ ಎಂದು ಕೆಳತಿರುಪತಿ ಯಲ್ಲಿರುವ ತಿರುಚ್ಚಾನೂರು ಕ್ಷೇತ್ರದ ದೇವತೆ, ಪದ್ಮಾಪತಿಯೆಂದೂ ಲಕ್ಷ್ಮಿಯ ಪ್ರಾದುರ್ಭಾವವೇ ಎಂದೂ ನಂಬಿಕೆ. 'ಶ್ರೀನಿವಾಸ ಕಲ್ಯಾಣ'ವೆಂಬ ಪ್ರಸಂಗ ದಲ್ಲಿ ಪದ್ಮಾವತಿಗೂ ಬೆಟ್ಟದ ಮೇಲಿರುವ ವೇಂಕಟೇಶ್ವರನಿಗೂ ಮದುವೆಯಾದ ಕತೆಯಿದೆ.

ಮಕ್ಕಳ ಪಡೆದರೆ ..—ಲಕ್ಷ್ಮಿಯು ಅಪ್ರಾಕೃತಳಾದುದರಿಂದ, ಚಿತ್‌ಪ್ರಕೃತಿಯಾದುದ ರಿಂದ ಪ್ರಾಕೃತಸ್ತ್ರೀಯಂತೆ ಮಕ್ಕಳನ್ನು ಪಡೆಯುವುದಿಲ್ಲ. ಹರಿಯ ನಾಭಿ ಕಮಲದಿಂದ (ಪೊಕ್ಕುಳೊಳು) ಹೊರಬಂದ ಬ್ರಹ್ಮನು ಪ್ರಾಕೃತ ಬ್ರಹ್ಮಾಂಡದ ಸೃಷ್ಟಿಮಾಡುತ್ತಾನೆ ; ಆದರೆ ಅವನನ್ನು ಆ ಕೆಲಸದಲ್ಲಿ ತೊಡಗಿಸುವವಳು ಲಕ್ಷ್ಮಿಯೇ, ಹರಿಯ ಸಂಕಲ್ಪಾನುಸಾರವಾಗಿ.

ಎಡಕೆ ಭೂಮಿ. .—ಶುದ್ಧಪ್ರಕೃತಿಯ ಸತ್ತ್ವ, ರಜಸ್ಸು, ತಮಸ್ಸೆಂಬ ಗುಣಗಳು ಶ್ರೀ, ಭೂ, ದುರ್ಗಾರೂಪಗಳನ್ನು ತಳೆಯುವುವೆಂದೂ, ಮೂಲಪ್ರಕೃತಿ ಯಾದ ಲಕ್ಷ್ಮಿಯು ಹರಿಯೊಂದಿಗೆ ಅವಿನಾಭಾವಸಂಬಂಧವನ್ನು ಹೊಂದಿರುವ ಳೆಂದೂ (ತೊಡೆಯ ಮೇಲೆ) ಕಲ್ಪನೆ.

ಎಂದೆಂದಿಗೂ...—ಮುಕ್ತಜೀವರಿಗೂ ಸಂಸಾರಿಜೀವರಿಗೂ ಅವರವರ ಯೋಗ್ಯತಾನು ಸಾರವಾಗಿ ಆನಂದವನ್ನು ಒದಗಿಸುವಳು.

ಸ್ವಾಧೀನ—ಜೀವರು ಹರಿಯ ಅನುಗ್ರಹವನ್ನು ಪಡೆಯುವುದು ಲಕ್ಷ್ಮಿಯ ಮೂಲಕವೇ ಆದುದರಿಂವ ಜೀವರ ಪಾಲಿಗೆ ಲಕ್ಷ್ಮಿಯು ಹರಿಯನ್ನು ತನ್ನ ವಶದಲ್ಲಿರಿಸಿ ಕೊಂಡಿದ್ದಾಳೆ.

ಗಮನಕ್ರಿಯೆ ಮಟ್ಟೆ

ನೀನೇ ಗತಿಯೆನಗೆ ವನಜನೇತ್ರೆ ಪ

ಕೈಲಾಸ ಎಂಬೋದು ಕಣ್ಣಲಿ ಕಾಣೆ
ಮೈಲುವಾಹನಪಿತ ಎತ್ತ ಪೋದನೊ ಕಾಣೆ ೧

ಸತ್ಯಲೋಕವೆಂಬೋದು ಮಿಥ್ಯವಾಯಿತು ಕಾಣೆ
ಎತ್ತಪೋದನು ಬ್ರಹ್ಮ ಏನು ಮಾಡಲಿ ಅಮ್ಮ ೨

ಸರಸಿಜನಾಭನು ಶರಧಿಯೊಳ್ ಮುಳುಗಿದ
ಪುರಂದರವಿಠಲನ ಕರುಣಕ್ಕೆ ಪಾತ್ರಳೆ ೩

[ಮುಕ್ತಿಗೆ ಕಾರಣವಾಗುವ ಭಕ್ತಿಯನ್ನು ಜೀವರಿಗೆ ಒದಗಿಸುವವಳು ಲಕ್ಷ್ಮಿಯೇ ಆದುದರಿಂದ ಅವಳಲ್ಲದೆ ಬೇರೆ ಯಾವ ದೇವತೆಯೂ ನೆರವಿಗೆ ಬಾರರು ; ತ್ರಿಮೂರ್ತಿಗಳೂ ಕಣ್ಮರೆಯಾಗಿ ತಲೆತಪ್ಪಿಸಿಕೊಳ್ಳುವರು ಎಂದು ಪದದ ತಾತ್ಪರ್ಯ.]

ವನಜನೇತ್ರೆ—ತಾವರೆಗಣ್ಣಿನವಳೆ.

ಮೈಲುವಾಹನಪಿತ—ಮಯಿಲ ಎಂದರೆ ನವಿಲು, ಅದನ್ನೇರಿ ಸಾಗುವವನು ಷಣ್ಮುಖ, ಕುಮಾರಸ್ವಾಮಿ ; ಅವನ ತಂದೆ, ಶಿವ.

ಸರಸಿಜನಾಭನು—ತಾವರೆಯನ್ನು ಹೊಕ್ಕುಳಲ್ಲಿ ಹೊಂದಿದವನು ವಿಷ್ಣು.

ಮಧ್ಯಮಾವತಿ ತ್ರಿವಿಡೆ

ಮುದ್ದು ಮಾಡಲರಿಯೆ ಮುದ್ದು ರಮಾದೇವಿ ಪ

ಮುದ್ದು ಬಾಲಕೃಷ್ಣನಲ್ಲಿ ಮನ ಸಿದ್ಧವಾಗಿ ನಿಲ್ಲುವಂತೆ ಅ

ವಚನಗಳೆಲ್ಲ ವಾಸುದೇವನ ಕಥೆಯೆಂದು
ರಚನೆ ಮಾಡುವರಲ್ಲಿ ರಕ್ತಿ ನಿಲ್ಲೋ ಹಾಂಗೆ ೧

ಸಂತೆ ನೆರಹಿದ ಸತಿಸುತರು ತನ್ನವರೆಂಬ
ಭ್ರಾಂತಿ ಬಿಟ್ಟು ನಿಶ್ಚಿಂತನಾಗೋ ಹಾಂಗೆ ೨

ಎನ್ನೊಡೆಯ ಸಿರಿ ಪುರಂದರವಿಠಲನ್ನ
ಸನ್ಮತಿಯಿಂದ ನಾ ಹಾಡಿ ಪಾಡೋ ಹಾಂಗೆ ೩

ವಚನಗಳೆಲ್ಲ...—ಆಡುವ ಮಾತುಗಳೆಲ್ಲ ಹರಿಯ ಕತೆಗಳೇ ಇರುವಂತೆ ; 'ನುಡಿದ ಶಬ್ದಗಳೆಲ್ಲ ಹೊಗಳು, ನಡೆವುದೆಲ್ಲವು ನಾಟ್ಯಂಗಳು', (ವ್ಯಾಸರಾಯರು).

ರಕ್ತಿ—ಅನುರಾಗ, ಪ್ರೀತಿ, 'ನಿನಗಿಂತ ಬೇರೆ ಸುಖವಿಲ್ಲ' ಎಂಬ ಮನೋವೃತ್ತಿ.

ಸಂತೆ ನೆರಹಿದ—ಸಂತೆಯಲ್ಲಿ ಸೇರಿದ.

ಭ್ರಾಂತಿ—ಜೀವನು ಹರಿಯ ಇಚ್ಛಾನುಸಾರ ತ್ರಿಗುಣಾತ್ಮಕವಾದ ಲಿಂಗದೇಹಸಂಬಂಧವನ್ನು ಪಡೆದು ಸಂಸಾರಿಯಾಗಿ ಹರಿಯು ಸರ್ವೋತ್ತಮನೆಂಬುದನ್ನೂ, ಸ್ವತಂತ್ರ ಕರ್ತನೆಂಬುದನ್ನೂ, ತಾನು ಪರಾಧೀನಕರ್ತನೆಂಬುದನ್ನೂ ಮರೆತು ತಾನೇ ಸ್ವತಂತ್ರನೆಂದು ಬಗೆಯುತ್ತಾನೆ. ಇದು ಸ್ವಾತಂತ್ರ್ಯ ಭ್ರಮೆ. ಇದರಿಂದಾಗಿ ತಾನು, ತನ್ನದು ಎಂಬ ಅಭಿಮಾನ ಒದಗುತ್ತದೆ. ಇದು ಮಮಕಾರ ಭ್ರಮೆ. ಈ ಬಗೆಯ ಭ್ರಾಂತಿಯಿಂದ ಸುಖ, ದುಃಖ, ಜ್ಞಾನ, ಅಜ್ಞಾನಗಳು ಕೂಡಿರುವ ಮಿಶ್ರಾನುಭವ. ಇದನ್ನು ತೊರೆದರೆ ನಿಶ್ಚಿಂತೆ.

ಬಿಲಹರಿ ಅಟ್ಟ

ಈಗಲೇ ಬಂದಳು ಇಂದಿರಾದೇವಿ ಅನು
ರಾಗದಿಂ ಪತಿಯೊಡನೆ ಸುಖನಿದ್ರೆಗೆಯ್ದೆದ್ದು ಪ

ಕಡೆಗಣ್ಣಿನ ಕಪ್ಪ ಅಂಗೈಯಿಂದೊರಸುತ
ಕಡಗ ಕಂಕಣ ಬಳೆ ಝಣಿರೆನ್ನುತ
ಮುಡಿದ ಮಲ್ಲಿಗೆ ಹೂವು ಎಡಬಲಕೆ ಸರಿಸುತ್ತ
ನಡುವಿನ ಒಡ್ಯಾಣ ನಾರಿಮಣಿ ಇಡುತ ೧

ತೋರ ಕಂಚಗಾಯ ಹಿಂಬೆರಳಿನಿಂದೌಕುತ್ತ
ಮೋರೆಯ ಕಿರುಬೆವರ ಸೆರಗಿನಿಂದೊರಸುತ್ತ
ನೆರದ ಮೇಲಿನ ಗುಳ್ಳೆ ಜೋಕೆಯಿಂದೌಕುತ್ತ
ಹಾರದ ತೊಡರುಗಳ ಬೆರಳಿಂದ ಬಿಡಿಸುತ್ತ ೨

ಕಕ್ಕಸ ಕುಚದ ನಡುವೆ ಕಸ್ತೂರಿ ಒರೆಸುತ್ತ
ಫಕ್ಕನೆ ಕನ್ನಡಿಲ್ಲಿ ಮುಖ ನೋಡುತ್ತ
ಸಕ್ಕರೆ ಬಾಯ ತಾಂಬೂಲ ಸವಿದುಗುಳುತ್ತ
ಚೊಕ್ಕ ಪುರಂದರವಿಠಲನ ನೋಡಿ ನಗುತ ೩

[ಲಕ್ಷ್ಮಿಯು ವೈಕುಂಠದಲ್ಲಿ ನಾರಾಯಣನೊಂದಿಗೆ ಆಲಿಂಗನ ಸುಖದಲ್ಲಿದ್ದು ತಾನೇ ಸೃಷ್ಟಿಯ ಸಮಸ್ತ ಕಾರ್ಯದ ನಿಯಾಮಕಳಾದುದರಿಂದ ನಿದ್ರೆಯಿಂದ ಎಚ್ಚೆತ್ತು ಜೀವರಿಗಭಿಮುಖಳಾಗಿ ಇರುವಳೆಂಬ ಕಲ್ಪನೆಯ ಹಿನ್ನೆಲೆಯಲ್ಲಿ, ಲಕ್ಷ್ಮಿಯು ಎದ್ದು ಬರುವ ಸಂಭ್ರಮವನ್ನು ದಾಸರು ಇಲ್ಲಿ ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ.]

# ಹರಿ

ದೇವತಾತಾರತಮ್ಯದಲ್ಲಿ ಹರಿಯೇ ಸರ್ವೋತ್ತಮ ; ಅವನಿಗೆ ಎಣೆಯೂ ಇಲ್ಲ, ಮಿಗಿಲೂ ಇಲ್ಲ. ಜೀವೋತ್ತಮನಾದ ವಾಯುವಿಗೆ ಕೋಟಿಗುಣಗಳಿಂದ ಉತ್ತಮಳಾದ ರಮಾದೇವಿಗೂ ಅನಂತಗುಣಗಳಿಂದ ಉತ್ತಮನಾದವನು. ಹರಿದಾಸರು ವೈಷ್ಣವಸಂಪ್ರದಾಯದವರಾದುದರಿಂದ ವಿಷ್ಣುವಿನ ಪಾರಮ್ಯವನ್ನು ಹೇಳುವುದು ಸಹಜವೇ. ಆದರೆ ವೈಷ್ಣವರು ವಿಷ್ಣುವೆಂದಾಗ ಶೈವರು ಶಿವನೆಂದಾಗ ಶಾಕ್ತರು ಶಕ್ತಿಯೆಂದಾಗ ಅವರೆಲ್ಲ ಒಬ್ಬ ಪರಮಾತ್ಮನನ್ನೇ ಸೂಚಿಸುವುದು. ವೇದಾಂತಿಗಳು ಪರಬ್ರಹ್ಮ ಎಂದು ಕರೆಯುವುದನ್ನು ಇದನ್ನೇ. ಹರಿಸರ್ವೋತ್ತಮತ್ವವು ಮತಛಲದ ಪ್ರಕ್ರಿಯೆ ಎಂದು ಭಾವಿಸಲಾಗದು. ಹರಿ (ವಿಷ್ಣು) ಎಂಬ ಹೆಸರಿದ್ದ ಮಾತ್ರಕ್ಕೆ ಸಂಕುಚಿತವಾದ ಆಧ್ಯಾತ್ಮಿಕ ಪ್ರವೃತ್ತಿಯೇನಲ್ಲ. ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವುದರಿಂದಲೇ ವಿಷ್ಣು ('ವ್ಯಾಪ್ನೋತೀತಿ ವಿಷ್ಣುಃ'); ಮುಕ್ತಿಗೆ ಅಡ್ಡವಾದ ದುರಿತಗಳನ್ನು ಹೊಡೆದಟ್ಟುವುದರಿಂದ ಹರಿ ("ಹರಿರ್ಹರತಿ ಪಾಪಾನಿ"). ಎಲ್ಲ ದೇವತೆಗಳೂ ತಾತ್ಪರ್ಯದಲ್ಲಿ ಅವನೇ ; ಎಲ್ಲ ಹೆಸರುಗಳೂ ಅವನನ್ನು ಹೇಳುವುವೇ.

ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಅಜ್ಞಾನ, ಜ್ಞಾನ, ಬಂಧ, ಮುಕ್ತಿ ಎಂಬ ಎಂಟು ಮಹಾಕಾರ್ಯಗಳಿಗೆ ಅವನೇ ಪ್ರೇರಕ, ನಿಯಾಮಕ. ಸರ್ವಶಕ್ತ, ಸರ್ವಗುಣಪರಿಪೂರ್ಣ, ಸ್ವತಂತ್ರ, ಸ್ವಗತಭೇದವಿವರ್ಜಿತ. ಜೀವರುಗಳ ಸಾಧನೆಗಾಗಿ, ಉದ್ಧಾರಕ್ಕಾಗಿ ಜಗತ್ತಿನ ಸೃಷ್ಟಿ ಮೊದಲಾದ ಮಹಾಕಾರ್ಯಗಳು. ಸಾಧುಜನರ ಉದ್ಧಾರಕ್ಕೆಂದೇ ಅವನ ಅನಂತಾವತಾರಗಳು ಅವನದ್ದು ಅಚಿಂತ್ಯಾದ್ಭುತ ಶಕ್ತಿ ; 'ಸಕಲಗ್ರಹಬಲ', ಸರ್ವವ್ಯಾಪ್ತ, ಆಪ್ತಕಾಮ, ಲೋಕವಿಲಕ್ಷಣ (ಅಣುವಿಗಿಂತ ಸೂಕ್ಷ್ಮ, ಮಹತ್ತತ್ತ್ವಕ್ಕಿಂತ ವ್ಯಾಪಕ; 'ಅಣುಮಹತ್ತೆರಡು ಒಂದಾಗಬಲ್ಲ'), ಅಖಂಡ ಸಚ್ಚಿದಾನಂದ ವಿಗ್ರಹ.

ಜೀವನಲ್ಲಿ ಅಂತರ್ಯಾಮಿ ; ಅಂತಃಪ್ರವಿಷ್ಟನಾಗಿ ವ್ಯಾಪ್ತನಾದರೂ ನಿರ್ಲಿಪ್ತ. ಜೀವ ಪ್ರತಿಬಿಂಬವಾದರೆ ಅವನು ಬಿಂಬರೂಪ. ಅವನು ತೋರಿಕೊಳ್ಳುವುದು 'ಯೋಗಿನಾಂ ಹೃದಯೇ . ಅವನಿಗೆ ಮತ್ಸ್ಯಾದಿ ದಶಾವತಾರಗಳನ್ನೂ ನಾರಾಯಣಾದಿ ಶತರೂಪಗಳನ್ನೂ ವಿಶ್ವಾದಿ ಸಹಸ್ರ ರೂಪಗಳನ್ನೂ ಪರಾಧಿ ಬಹುರೂಪಗಳನ್ನೂ ಅಜಿತಾದಿ ಅನಂತರೂಪಗಳನ್ನೂ ಹೇಳುತ್ತಾರೆ. ಆದರೆ ಇವೆಲ್ಲ ರೂಪಗಳಲ್ಲೂ ಅವನು ಜ್ಞಾನಾನಂದಾದಿ ಅನಂತಗುಣಪರಿಪೂರ್ಣನೇ. ಅವನಲ್ಲಿ ಸ್ವಗತವಾದ ಭೇದವಿರದು.

ಬಿಂಬನಾಗಿ ಅವನ ನೆಲೆ ಜಾಗ್ರದವಸ್ಥೆಯಲ್ಲಿ ಬಲಗಣ್ಣು, ಸ್ವಪ್ನಾವಸ್ಥೆಯಲ್ಲಿ ಕಂಠ, ಸುಷುಪ್ತಿಯ ಅವಸ್ಥೆಯಲ್ಲಿ ಹೃದಯ ; ಮುಕ್ತಿಯಲ್ಲಿ ತುರೀಯ ರೂಪದಿಂದ ಶಿರಸ್ಸಿನ ಮೇಲ್ಭಾಗದಲ್ಲಿ. ಸರ್ವೋತ್ತಮನಾಗಿ ಮೂರು ನೆಲೆಗಳನ್ನು ಹೇಳುತ್ತಾರೆ—ಸತ್ಯಲೋಕದ ಮೇಲೆ ಲಕ್ಷಯೋಜನ ಮೇಲ್ಭಾಗದಲ್ಲಿ ಅನಂತಾಸನ, ಅಲ್ಲಿಂದ ಐವತ್ತು ಲಕ್ಷಯೋಜನ ಮೇಲ್ಭಾಗ

ದಲ್ಲಿ ಶ್ವೇತದ್ವೀಪ, ಅಲ್ಲಿಂದ ನಲವತ್ತೊಂದು ಯೋಜನ ಮೇಲ್ಭಾಗದಲ್ಲಿ ವೈಕುಂಠ ಈ ಮೂರೂ 'ಹರಿಪುರ'ಗಳು ಮುಕ್ತರ ಮನೆ. ವೈಕುಂಠ ವೆನ್ನುವುದು ಅಪ್ರಾಕೃತ, ನಿತ್ಯ, ಸನಾತನ; ಎಲ್ಲ ತತ್ತ್ವರಾಶಿಗಳೂ ಅಲ್ಲಿವೆ; ವಾಪೀ–ಕೂಪ–ತಟಾಕ–ಪ್ರಾಸಾದ–ಉದ್ಯಾನ ಎಲ್ಲವೂ ಇವೆ. ಆದರೆ ಅವೆಲ್ಲ ಚೇತನರೂಪದ ಸ್ವಯಂ ರಮಾದೇವಿಯೇ, "ಸಿರಿದೇವಿ ತಾನೆ ಪರಿಪರಿಯ ರೂಪದಲಿ ಮಿರಿಮಿರಿ ಮಿಂಚುವಳು" ಮಾಯೆಯ ಸಂಪರ್ಕ ಅಲ್ಲಿರದು. ಅಲ್ಲಿರುವ ಮುಕ್ತರು ನಾಲ್ಕು ವಿಧವಾದ ಮುಕ್ತಿಯನ್ನನುಭವಿಸುವರು : ಸಾಯುಜ್ಯ (ದೇವತೆಗಳಿಗೆ ಹರಿಯ ಅಂಗದಲ್ಲೇ ವಾಸ; ತತ್ತ್ವೇಶರೆಲ್ಲ ಹರಿಯ ದೇಹದಲ್ಲೇ ಸೇರಿರುವರು, ಇದನ್ನು 'ಏಕಾಂಗ ಸಾಯುಜ್ಯ' ಎಂದೂ ಕರೆಯುತ್ತಾರೆ), ಸಾಲೋಕ್ಯ (ಯೋಗ್ಯ ಜೀವರು ಹರಿಯ ಲೋಕ ದಲ್ಲೇ ಇರುವುದು, ಇದು ಎಲ್ಲ ಮುಕ್ತರಿಗೂ ಸಮಾನ), ಸಾಮೀಪ್ಯ (ಹರಿಯ ಹತ್ತಿರ ಇರುವುದು), ಸಾರೂಪ್ಯ (ಹರಿಯ ರೂಪವನ್ನೇ, ಎಂದರೆ ಚತುರ್ಭುಜ, ಶಂಖ–ಚಕ್ರಾಯುಧಗಳು, ಶ್ರೀವತ್ಸ ಕೌಸ್ತುಭ ಮಣಿಗಳನ್ನು ಬಿಟ್ಟು ಉಳಿದೆಲ್ಲ ಆಭರಣಗಳು ಮೊದಲಾದುವನ್ನು ಹೊಂದಿರುವುದು), ಮತ್ತು ಸಾರಿಷ್ಟಿ (ಸಾಯುಜ್ಯದಲ್ಲೇ ಒಂದು ಪ್ರಕಾರ, ತತ್ತ್ವೇಶರಿಗೆ ಏಕಾಂಗ ಸಾಯುಜ್ಯವಿರುವಂತೆ ಋಜುಗಣದ ಮುಕ್ತರಿಗೆ ಸರ್ವಾಂಗ ಸಾಯುಜ್ಯ). ಮುಕ್ತರ ಆನಂದಾನುಭವದಲ್ಲಿ ಸ್ವಾಭಾವಿಕ ತಾರತಮ್ಯವಿದೆ. ಸಂಸಾರದಲ್ಲೂ ಮುಕ್ತಿಯಲ್ಲೂ ಜೀವರು ಹರಿಗೆ ಅಧೀನರೇ. ಮುಕ್ತಿಯೆಂದರೆ ಹರಿಯ ಅನುಗ್ರಹದಿಂದ ಸಾಧಕರಿಗೆ ಸ್ವಸ್ವರೂಪದ ಪೂರ್ಣ ಆವಿರ್ಭಾವ. ಜ್ಞಾನವೇ ಹರಿಪ್ರಸಾದ ದ್ವಾರಾ ಮೋಕ್ಷಕ್ಕೆ ಕಾರಣ.

ಮುಕ್ತಿಗೆ ಮೊದಲು ವಿರಜಾಸ್ನಾನದಿಂದ ಲಿಂಗಭಂಗವಾಗುವುದೆಂಬ ಕಲ್ಪನೆಯಿದೆ. ವಿ–ರಜವೆಂದರೆ ರಜಸ್ಸನ್ನು ಬಿಟ್ಟಿರುವ ರೂಪ; ಲಕ್ಷ್ಮಿಯದೇ. ಅಲ್ಲಿ ಮುಕ್ತಿಯೋಗ್ಯನಾದ ಜೀವನು ಸ್ನಾನಮಾಡಿ, ತನ್ನ ಬಂಧಕ್ಕೆ ಕಾರಣ ವಾದ ಲಿಂಗದೇಹವನ್ನು ಕಳೆದುಕೊಳ್ಳುತ್ತಾನೆ. ಎಲ್ಲ ಜೀವರಲ್ಲಿ ಉಪಾಸ್ಯನೂ, ಇಷ್ಟನೂ ಅಂತಃಪ್ರೇರಕನೂ ಆಗಿರುವ ಶ್ವಾಸರೂಪೀ ವಾಯುದೇವನು ಸಾತ್ತ್ವಿಕ ಜೀವರಲ್ಲಿ 'ಹಂಸಃ' ಎಂದೂ ರಾಜಸಜೀವರಲ್ಲಿ 'ಸ್ವಾಹಾ' ಎಂದೂ, ತಾಮಸಜೀವರಲ್ಲಿ 'ಸೋಹಂ' ಎಂದೂ ಜಪ ಮಾಡುತ್ತ, ಜೀವರಿಂದ ಮಾಡಿಸುತ್ತ, ಹರಿಪ್ರೀತಿಯನ್ನು ಪಡೆಯುತ್ತಾನೆ. ಲಿಂಗಭಂಗವಾಗುವುದು ಸಾತ್ತ್ವಿಕ ಜೀವರಿಗೆ ನರಸಿಂಹನ ಖಡ್ಗದಿಂದ, ರಾಜಸಜೀವರಿಗೆ ವಾಯುದೇವನ ಹುಂಕಾರದಿಂದ, ತಾಮಸಜೀವರಿಗೆ ವಾಯುದೇವನ ಗದಾಪ್ರಹಾರದಿಂದ ಎಂದು ಕಲ್ಪನೆ. ನರಸಿಂಹನಿಗೆ 'ಜೀವನಾಮ' ಎಂಬ ನಿರ್ದೇಶನವಿದೆ; ಹರಿಯು ಜೀವರ ಸ್ವರೂಪದಲ್ಲಿ ಅಡಗಿ ಅವರ ಅಂತರಂಗವನ್ನೆಲ್ಲ ವ್ಯಾಪಿಸಿಕೊಂಡಿರುವ ಬಗೆ ನರಸಿಂಹ ('ಸರ್ವಜೀವ ಸ್ವರೂಪೇ ಚ ನೃಸಿಂಹೋಂತರಾತ್ಮವಾನ್').

ಸರ್ವಜೀವರಿಗೂ ಹರಿಗೂ ಸಂಬಂಧವಿರುವುದು ಜೀವೋತ್ತಮನೆನಿಸಿ ಕೊಂಡ ವಾಯುವಿನ ಮೂಲಕ. ಆದ್ದರಿಂದ ಜೀವರಿಗೆ ವಾಯುವು 'ಆಪ್ತತಮ'. ಪ್ರಳಯ ಕಾಲದಲ್ಲಿ ಎಲ್ಲ ಜೀವರೂ ಸುಷುಪ್ತಿಯಲ್ಲಿದ್ದು ವ್ಯಾಪಾರಶೂನ್ಯರಾಗಿರುವಾಗ ಜಾಗ್ರತನಾಗಿರುವವನು ವಾಯುವೊಬ್ಬನೇ.

ಉಳಿದ ತತ್ತ್ವಾಭಿಮಾನಿಗಳೆಲ್ಲ ತಾರತಮ್ಯಕ್ರಮದಲ್ಲಿ ವಾಯುವಿನಲ್ಲಿ ಲೀನವಾಗಿರುತ್ತಾರೆ ವಾಯುವೊಬ್ಬನು ಲಕ್ಷ್ಮಿಯನ್ನು ಸಾಕ್ಷಾತ್ಕರಿಸಿ ಕೊಂಡು ಪರಮಾತ್ಮನ ಸನ್ನಿಧಿಯಲ್ಲಿರುತ್ತಾನೆ ಹೀಗೆ ಹರಿಯು ಸರ್ವೋತ್ತಮತ್ವ, ಸರ್ವಾಂತರ್ಯಾಮಿತ್ವಗಳು ದೇವತಾತಾರತಮ್ಯದಲ್ಲಿ ಸಿದ್ಧವಾಗಿವೆ ವ್ಯಾಸರಾಯಸ್ವಾಮಿಗಳ ಸುಳಾದಿಯೊಂದು ಇದನ್ನು ಮನಗಾಣಿಸುತ್ತದೆ

'ತಾಯಿ ಈ ಲೋಕಕ್ಕೆ ಶ್ರೀ ಹರಿ ಕಾಯದಿ ಜಗವನಿಟ್ಟವನಾಗಿ
ತಂದೆ ಈ ಲೋಕಕ್ಕೆ ಶ್ರೀಹರಿ ಅಂದೆ ಬೊಮ್ಮಾದಿಗಳ
ಸೃಷ್ಟಿಸಿದನಾಗಿ
ಗತಿ ಈ ಲೋಕಕ್ಕೆ ಶ್ರೀಹರಿ ಶ್ರೀಪತಿ ತನ್ನ ನೆನೆವವರಿಗಭಯವ
ನೀವನಾಗಿ
ಈಶ ಈ ಲೋಕಕ್ಕೆ ಶ್ರೀಹರಿ ವ್ಯಾಸಾದಿರೂಪದಿ ಜ್ಞಾನವನೀವನಾಗಿ
ದೈವವೀ ಲೋಕಕ್ಕೆ ಶ್ರೀಹರಿ ಸರ್ವಧರ್ಮಂಗಳಿಂದ ಸೇವ್ಯನಾಗಿ
ಪರತತ್ತ್ವವೀ ಲೋಕಕ್ಕೆ ಶ್ರೀಕೃಷ್ಣ ಓರ್ವನೆ ಸತ್ಯವ್ಯಾಪಕನಾಗಿ'



2–13

ಆನಂದಭೈರವಿ ಧ್ರುವ

ಶ್ರೀಮನ್ನಾರಾಯಣ ದೇವ ನೀನು ಶ್ರೀ ಲ
ಕೊಮಿಯ ಕೂಡ ಸುಖಿಸುತಿದ್ದು
ಶ್ರೀಮನ್ನಾರಾಯಣದೇವ ಶ್ರೀವಾಸುದೇವಾ ಮಾಯಾದೇವಿ
ಶ್ರೀ ಸಂಕರುಷಣ ದೇವಾ ಜಯಾ ದೇವಿ
ಶ್ರೀ ಪ್ರದ್ಯುಮ್ನ ದೇವಾ ಕೃತಿದೇವಿ
ಶ್ರೀ ಅನಿರುದ್ಧ ದೇವಾ ಶಾಂತಿದೇವಿ
ಶ್ರೀ ಮನ್ನಾರಾಯಣ ದೇವಾ ಶ್ರೀ ವಾಸುದೇವಾ
ಮಾಯಾದೇವಿಯಲ್ಲಿ ಆ
ಬೊಮ್ಮ ಕುಮಾರನ ಪಡೆದೆಯಲ್ಲಾ
ಶ್ರೀ ಸಂಕರುಷಣ ದೇವಾ ಜಯಾದೇವಿಯಲ್ಲಿ
ವಾಯುಕುಮಾರನ ಪಡೆದೆಯಲ್ಲಾ
ಶ್ರೀ ಪ್ರದ್ಯುಮ್ನ ದೇವಾ ಕೃತಿದೇವಿಯಲ್ಲಿ
ವಾಣಿ ಭಾರತಿಯರ ಪಡೆದೆಯಲ್ಲಾ
ಶ್ರೀ ಅನಿರುದ್ಧ ದೇವಾ ಶಾಂತಿದೇವಿಯಲ್ಲಿ
ಬೊಮ್ಮ ಸರಸ್ವತಿಯರ ಪಡೆದೆಯಲ್ಲಾ
ಆ ಕುವರರಿಗೆ ಈ ಕುವರಿಯರನೆ ಇತ್ತು
ಮದುವೆಯಾ ಮಾಡಿದೆ ಪುರಂದರವಿಟ್ಠಲ ೧

ಮಟ್ಟ

ವಾಸುದೇವ ನಿಮ್ಮೊಳು ನೀವೇ ನೀವೆ
ಕೊಡಲುಳ್ಳವರಾದಿರಿ ನಿಮ್ಮೊಳು ನೀವೆ
ಬೀಗರಾದಿರಿ ನಿಮ್ಮೊಳು ನೀವೆ ಬಿಜ್ಜಣರಾದಿರಿ
ನಿಮ್ಮೊಳು ನೀವೆ ಬಿಜ್ಜಣಗರಿಗಳು
ನಿಮ್ಮೊಳು ನೀವೇ ಪುರಂದರವಿಟ್ಠಲ ೨

ತ್ರಿವಿಡೆ

ಬೊಮ್ಮ ಸರಸ್ವತಿಯರ ಪಡೆದರಯ್ಯಾ ಶೇಷ
ಸುಪರ್ನ ಗಿರೀಶ ಮಹೇಂದ್ರರಾ
ವಾಯು ಭಾರತಿ ಪಡೆದರಯ್ಯಾ ಪುತ್ರ ಪೌತ್ರ
ಪರಂಪರೆಯಾಗಿಪ್ಪೆ ಪುರಂದರವಿಟ್ಠಲ ೩

ರೂಪಕ

ಆದಿ ಸೃಷ್ಟಿಯಲಿ ಜಯ ವಿಜಯರುದಿಸಿದರು
ಅವರಿಗಿಂತ ಅಮರರೆ ಅಧಿಕರಯ್ಯಾ ಅಯ್ಯಾ
ಅವರಂತರಂತರದಲ್ಲಿ ಅವರುದಿಸಿದರು
ಅವರಂತರಂತರದಲ್ಲಿ ಅವರ ನೋಡಯ್ಯಾ
ತಾರತಮ್ಯ ಅನಾದಿ ಸಿದ್ಧವಯ್ಯಾ
ಪುರಂದರವಿಟ್ಠಲನ ಸಂತತಿ ನೋಡಯ್ಯಾ ೪

ಝಂಪೆ

ಸಿರಿ ಚತುರ್ಮುಖ ಪಂಚಮುಖಾದಿ
ಸುರರು ಮನು ಮುನಿ ಮನುಜೋತ್ತಮರು
ತಾರತಮ್ಯ ಯುಕುತರು ಪುರಂದರವಿಟ್ಠಲನ್ನ
ಚರಣ ಸೇವಕರು ಸಾದೇವರು ೫

ಅಟ್ಟ

ನಿತ್ಯ ಪತ್ನೀಭಾವ ಲಕುಮಿಗಯ್ಯಾ
ನಿತ್ಯ ಪುತ್ರಭಾವ ಬೊಮ್ಮ ಪ್ರಾಣರಿಗಯ್ಯಾ
ನಿತ್ಯ ಪೌತ್ರಭಾವ ವೈನತೇಯ ಶೇಷಗಿರೀಶಗಯ್ಯಾ
ನಿತ್ಯ ಜಾರಭಾವ ಅಪ್ಸರ ಸ್ತ್ರೀಯರಿಗೆ
ನಿತ್ಯ ಪುರಂದರವಿಟ್ಠಲ ರೇಯಾ ೬

ಆದಿ

ಸತ್ಯ ಸ್ವರೂಪನೆ ಸತ್ಯ ನೇಮನೆ
ಸತ್ಯ ಸಂಕಲ್ಪನೆ ಸತ್ಯ ಕಾಮನೆ
ಸತ್ಯ ಭಾಷಣನೆ ಸತ್ಯ ಭೂಷಣನೆ
ಸತ್ಯ ಸದ್ಗುಣಾಢ್ಯನೆ ಸತ್ಯ ಕರ್ಮನೆ
ಸತ್ಯ ಶ್ರೀ ಪುರಂದರವಿಟ್ಠಲ ೭

ಜೊತೆ

ಮನವಚನಗಳಲ್ಲಿ ಕಾಯ ಕರ್ಮಗಳಲ್ಲಿ
ನೀನೆ ನೀನೇ ಶ್ರೀ ಪುರಂದರವಿಟ್ಠಲ ೮

[ಈ ಸುಳಾದಿಯನ್ನು ಪುರಂದರದಾಸರದ್ದೆಂದು ಲಿಂಗಸೂಗೂರಿನ ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದ ಪ್ರಕಟನೆಯಾದ 'ಮೋಕ್ಷಮಾರ್ಗಪ್ರದೀಪಿಕಾ ಅಥವಾ ತಾರತಮ್ಯಸಾರ' ಎಂಬ ಗ್ರಂಥದಲ್ಲಿ ಕೊಟ್ಟಿದೆ (ಶಕೆ 1867, ಪ್ರಕಟನೆ 3). ಆದರೆ ಸುಳಾದಿಯ ಶೈಲಿಯನ್ನು ನೋಡಿದರೆ ಪುರಂದರದಾಸರದಿದ್ದಂತೆ ತೋರುವುದಿಲ್ಲ. ಒಕ್ಕಣೆಯೂ ವಿಜಯದಾಸರ ಕಾಲದನಂತರ ಕಾಣುವಂಥದೇ. ಆದರೆ ತಾರತಮ್ಯವನ್ನು ಹರಿಸರ್ವೋತ್ತಮಕ್ಕೆ ಹೊಂದಿಸಿರುವ ಬಗೆ ಇಲ್ಲಿ ಪ್ರಸ್ತುತವಾದುದರಿಂದಲೂ ಈ ಸುಳಾದಿಯು ಪುರಂದರದಾಸರದ್ದೇ ಎಂದು ದಾಸಕೂಟದವರು ನಂಬಿರುವುದರಿಂದಲೂ ಅದನ್ನು ಇಲ್ಲಿ ಕೊಟ್ಟಿದೆ.]

ಶ್ರೀಮನ್ನಾರಾಯಣದೇವ ಶ್ರೀವಾಸುದೇವಾ . —ಈ ಸುಳಾದಿಯಲ್ಲಿ ಹರಿಯ ನಾಲ್ಕು ವ್ಯೂಹಾವತಾರಗಳಾದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ರೂಪಗಳಿಗೂ ರಮಾದೇವಿಯ ನಾಲ್ಕು ಅವತಾರಗಳಾದ ಮಾಯಾ, ಜಯಾ, ಕೃತೀ, ಶಾಂತಿ ಎಂಬ ರೂಪಗಳಿಗೂ ಇರುವ ಪುರುಷ–ಮೂಲಪ್ರಕೃತಿ ಸಂಬಂಧವನ್ನು ಸೂಚಿಸಿ, ಈಶಕೋಟಿ ಪ್ರವಿಷ್ಟರಾದ ಇವರಿಬ್ಬರಿಂದ ಇಡೀ ದೇವತಾತಾರತಮ್ಯ, ಬ್ರಹ್ಮಾಂಡವ್ಯವಸ್ಥೆಯಾದುದನ್ನೂ ವಾಸುದೇವ–ಮಾಯೆಯರಿಂದ ಬ್ರಹ್ಮ, ಸಂಕರ್ಷಣ–ಜಯೆ ಇವರಿಂದ ವಾಯು, ಪ್ರದ್ಯುಮ್ನ–ಕೃತಿಯರಿಂದ ಭಾರತಿ, ಅನಿರುದ್ಧ–ಶಾಂತಿಯರಿಂದ ಸರಸ್ವತಿ ಈ ದೇವತೆಗಳು ಹೊರಹೊಮ್ಮಿದುದನ್ನೂ, ಮುಂದೆ ದೇವತಾತರತಮಭಾವ ವಂಶವೃಕ್ಷದಂತೆ ಬೆಳೆದುದನ್ನೂ ಹೇಳುತ್ತದೆ.

ವಾಸುದೇವ ನಿಮ್ಮೊಳು...—ಒಂದೇ ಪರತತ್ತ್ವದ ಹರಿಯಿಂದ ನಿಖಿಳದೇವತಾವರ್ಗ ಮೂಡಿಕೊಂಡಿತಾಗಿ, ಪ್ರಾಪಂಚಿಕ ವ್ಯವಹಾರದಲ್ಲಿ ಹೇಳುವ ಬೀಗರು, ಬಳಗ, ನೆಂಟರು, ಇಷ್ಟರು ಎಲ್ಲವೂ ದಿಟವಾಗಿ ಹರಿಯೇ.

ಜಯವಿಜಯರು—ವೈಕುಂಠದ ದ್ವಾರಪಾಲಕರು.

ಚತುರ್ಮುಖ.. —ಬ್ರಹ್ಮ (ಚತುರ್ಮುಖ), ರುದ್ರ (ಪಂಚಮುಖ) ಮೊದಲಾಗಿ ಮನುಷ್ಯೋತ್ತಮರವರೆಗೆ ಎಲ್ಲರೂ ಹರಿಯ ಅಧೀನರೇ.

ಆನಂದಭೈರವಿ ಆದಿ

ಜಗದಂತರ್ಯಾಮಿಯೆನ್ನ ಸ್ವಾಮಿ ಪ

ಅಗಣಿತಗುಣ ನೀನು ನಿನ್ನ ಗುಣವಲ್ಲವೆಂದು
ಬಗೆವವ ಜಗದೊಳಗೆ ಬ್ರಹ್ಮಹತ್ಯಗಾರ ೧

ಜಗತು ಕರ್ತ ನೀನಿರಲು ಅನ್ಯರನ್ನೆ ದೈವವೆಂದು
ಬಗೆದವ ಜಗದೊಳಗೆ ಸ್ವರ್ಣಸ್ತೇಯಿ ೨

ಜಗದೊಡೆಯ ನೀನಿರಲು ಅನ್ಯದೈವರೊಡೆಯರೆಂದು
ಬಗೆದವ ಜಗದೊಳಗೆ ಮದ್ಯಪಾಯಿ ೩

ಜಗದ ತಾಯಿ ತಂದೆ ನೀನು ನಿನ್ನ ತಾನೇ ಎಂದುಕೊಂಡು
ಬಗೆವವ ಜಗದೊಳಗೆ ಗುರುತಲ್ಪಗ ೪

ಅವರ ತತ್ಸಂಯೋಗಿಗಳು ಪಂಚಮಹಾಪಾತಕರು
ದಾಸರ ಸಂಗದೊಳಿಡು ಪುರಂದರವಿಠಲ ೫

[ಪಂಚಮಹಾಪಾತಕಗಳು : ಬ್ರಹ್ಮಜ್ಞಾನಿಯನ್ನು ಕೊಲ್ಲುವುದು, ಬಂಗಾರವನ್ನು ಕದಿಯುವುದು, ಹೆಂಡ ಕುಡಿಯುವುದು, ಗುರುವಿನ ಹೆಂಡತಿಯೊಡನೆ ಕೂಡಿಕೊಳ್ಳುವುದು ಮತ್ತು ಇವನ್ನು ಮಾಡಿದವರೊಂದಿಗೆ ಸೇರುವುದು. ಇದು ಮನುಧರ್ಮಶಾಸ್ತ್ರದಲ್ಲಿ ಬರುವ ಎಣಿಕೆ. ಈ ಪದದಲ್ಲಿ ದಾಸರು ಮಾರ್ಮಿಕವಾಗಿ ಈ ಪಾಪಗಳನ್ನು ಹರಿ ಸರ್ವೋತ್ತಮತ್ವವನ್ನು ಒಪ್ಪದವರಿಗೆ ಹೊಂದಿಸಿದ್ದಾರೆ.]

ಗುಣವಲ್ಲ...—ನಿರ್ಗುಣನೆಂದು. ವೈಷ್ಣವ ಸಂಪ್ರದಾಯದಲ್ಲಿ ಹರಿಯು ಸಗುಣ, ಸಾಕಾರ.

ಬ್ರಹ್ಮಹತ್ಯಗಾರ—ಪರಬ್ರಹ್ಮವಸ್ತುವನ್ನೇ ನಿರಾಕರಿಸುವವರು.

ಅನ್ಯರನ್ನೆ...—ಜಗತ್ತಿನ ಕಾರಣವಾಗಿ ಯದೃಚ್ಛಾ, ಕಾಲ, ನಿಯತಿ ಇವನ್ನು ಹೇಳುವವರು.

ಸ್ವರ್ಣಸ್ತೇಯಿ—'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರವಾಕ್ಯವನ್ನೇ ಕದ್ದು ಮರೆ ಮಾಚಿದಂತೆ.

ಅನ್ಯದೈವರು.. —ತಾರತಮ್ಯಕ್ರಮದಲ್ಲಿ ಹರಿಗೆ ಅಧೀನರಾದ ಅವರರನ್ನು ಜ್ಯೇಷ್ಠ ರೆಂದು ಹೇಳುವವರು, ಹಿತವಲ್ಲದ, ಮದವನ್ನುಂಟುಮಾಡುವ ಹೆಂಡವನ್ನು ಕುಡಿದವರಂತೆ

ನಿನ್ನ ತಾನೆ.. —"ಸೋऽಹಂ" ಎಂದು ಜೀವವೇ ಪರಮಾತ್ಮನೆಂದು ಬಗೆಯುವವರು ತನಗೆ ಮೂಲಗುರುವಾದ ನಾರಾಯಣನ ಶಕ್ತಿಯಾದ ಲಕ್ಷ್ಮಿಯನ್ನು ಕೂಡಿ ಕೊಳ್ಳಲು ಯತ್ನಿಸಿದಂತೆ.

ತತ್ಸಂಯೋಗಿಗಳು—ಮೇಲೆ ಹೇಳಿದ ನಾಲ್ವರು ಪಾತಕಿಗಳೊಡನೆ ಸಂಸರ್ಗದಲ್ಲಿರು ವವರು.



ಬೇಹಾಗು ಆದಿ

ನಮ್ಮ ದೇವ ನಿಮ್ಮ ದೇವ ತಮ್ಮ ದೇವನೆನ್ನಬೇಡಿ
ಬೊಮ್ಮನ ಪಡೆದ ದೇವನೊಬ್ಬನೆ ಕಾಣಿರೋ ಪ

ಆದಿಯಲ್ಲಿ ಕರಿ ಮಕರಿಗೆ ಸಿಕ್ಕಿ ಬಾಧೆಯಿಂದ
ಆದಿದೇವ ಕಾಯೆಂದು ಮೊರೆಯಿಡಲು
ಆ ದೇವ ಈ ದೇವ ಕಾಯ್ವುದಿಲ್ಲ ಕೇಳಿ
ಮಾಧವ ತಾ ಬಂದು ಸಲಹಿದ ಕಾರಣ ೧

ಹರಿಹರ ಬ್ರಹ್ಮರೊಳು ಹಿರಿಯವರಾರೆಂದು
ಪರಿಕಿಸಿ ಸುರಾಸುರರೆಲ್ಲರನು
ವರಭೃಗುಮುನಿ ಬಂದು ಕರವೆತ್ತಿ ಸ್ಥಿರವಾಗಿ
ಹರಿಯೇ ಪರದೈವವೆಂದು ಅರುಹಿದ ಕಾರಣ ೨

ಏಕೋ ವಿಷ್ಣು ಎಂತೆಂದು ವೇದಗಳು ಅ
ನೇಕ ಮುಖಗಳಿಂದ ಸಾರುತಿರೆ
ಕಾಕುಮತಿಯ ನೀಗಿ ಜೋಕೆಯಿಂದ ಭಜಿಸಿರೊ
ಶ್ರೀಕಾಂತ ಪುರಂದರವಿಠ್ಠಲರಾಯನ ೩

ಬೊಮ್ಮನ ಪಡೆದ—ತನ್ನ ಸಂಕಲ್ಪದಿಂದ ಚತುರ್ಮುಖ ಬ್ರಹ್ಮನನ್ನು ಹೊರ ಹೊಮ್ಮಿಸಿ, ಅವನಿಂದ ಬ್ರಹ್ಮಾಂಡವನ್ನು ಸೃಷ್ಟಿಮಾಡಿಸಿದವನು.

ಆದಿಯಲ್ಲಿ...—ಗಜೇಂದ್ರಮೋಕ್ಷದ ಸಂದರ್ಭ; ಇದು ರೌಚ್ಯಕಮನ್ವಂತರದಲ್ಲಿ ನಡೆದದ್ದೆಂದು ನಂಬಿಕೆ.

ಹರಿಹರ ಬ್ರಹ್ಮರೊಳು—ಸ್ವಾಯಂಭುವ ಮನ್ವಂತರದ ಬ್ರಹ್ಮರ್ಷಿಯಾದ ಭೃಗುವು ದೇವತೆಗಳಲ್ಲಿ ಅಧಿಕರು ಯಾರೆಂದು ಪರೀಕ್ಷೆ ಮಾಡಿದ ಕತೆ ಕೆಲವು ಪುರಾಣಗಳಲ್ಲಿ ಬರುತ್ತದೆ.

ಏಕೋ ವಿಷ್ಣು—'ಏಕೋ ವೈ ವಿಷ್ಣುಃ', 'ವಿಷ್ಣುರ್ದೇವಾನಾಂ ಪ್ರಥಮಃ ಅಗ್ನಿರವಮಃ' ಮೊದಲಾದ ಶ್ರುತಿವಚನಗಳು.

ಅನೇಕಮುಖಗಳಿಂದ—ವೇದೋಪಬ್ರುಂಹಣಕ್ಕಾಗಿ ಸಿದ್ಧವಾದ ಪುರಾಣ, ಇತಿಹಾಸ, ಸ್ಮೃತಿಗಳಿಂದ.

ಪಂತುವರಾಳಿ                                   ಅಟ್ಟ

ಎನಗೊಬ್ಬ ಧೊರೆ ಧೊರೆಕಿದನು    ಪ

ವನಜ ಸಂಭವನಯ್ಯ ಹನುಮನಂತರ್ಯಾಮಿ    ಅ

ಮಾತಾಪಿತನಾದ ಭ್ರಾತ ಬಾಂಧವನಾದ
ಪ್ರೀತಿಯಿಂದಲಿ ತಾನೆ ನಾಥನಾದ
ಖ್ಯಾತನು ತಾನಾದ ದಾತನು ತಾನಾದ
ಭೂತೇಶವಂದ್ಯ ವಿಭೂತಿಪ್ರದನಾದ    ೧

ಅಜರಾಮರನಾದ ಅಪ್ರಾಕೃತನಾದ
ವಿಜಯಗೊಲಿದು ನಿಜ ಸೂತನಾದ
ಭುಜಗಶಯನನಾದ ತ್ರಿಜಗವಂದಿತನಾದ
ಅಜಾಮಿಳನಂತ್ಯಕ್ಕತ್ಯಂತ ಸುಹೃದನಾದ    ೨

ಶಂಖ ಚಕ್ರಾಂಕಿತ ಸಂಕರ್ಷಣನಾದ
ಬಿಂಕದಿಂದಲಿ ಬಿರುದು ಪೊತ್ತವನಾದ
ಪಂಕಜನಯನ ಮೀನಾಂಕ ಜನಕನಾದ
ಓಂಕಾರ ಮೂರುತಿ ಪುರಂದರವಿಠಲ    ೩

ವನಜ ಸಂಭವನಯ್ಯ—ಬ್ರಹ್ಮನ ತಂದೆ.

ಮಾತಾಪಿತನಾದ—ಜಗತ್ತಿಗೆ ಮಾತೃಸ್ಥಾನದಲ್ಲಿರುವ ಮೂಲಪ್ರಕೃತಿಯು(ಲಕ್ಷ್ಮಿಯು) ಆವನ ಸ್ವರೂಪಾಂಶವೇ ; ಜಗತ್ತಿಗೆ ಪಿತೃಸ್ಥಾನದಲ್ಲಿರುವ ಚತುರ್ಮುಖ ಬ್ರಹ್ಮನು ಆವನ ಸಂಕಲ್ಪಾನುಸಾರ ಇರುವನಾಗಿ ಆವನನ್ನೇ ತನ್ನ ಬಿಂಬವಾಗಿ ಪಡೆದವನು.

ಭ್ರಾತ ಬಾಂಧವ—ದೇವತಾತಾರತಮ್ಯದಲ್ಲಿ ಹಿರಿಯಣ್ಣ ; ಎಲ್ಲ ದೇವತೆಗಳೊಳಗೂ ನಿಯಾಮಕನಾಗಿ ತಾನೇ ಇರುವುದರಿಂದ ಬಾಂಧವ.

ಪ್ರೀತಿಯಿಂದ—ಸ್ವಭಾವಭೂತವಾದ ಕಾರುಣ್ಯದಿಂದ.

ಖ್ಯಾತನು—ಸರ್ವಾನುಭವಸಾಕ್ಷಿಯಾಗಿ ಆಗಮೈಕವೇದ್ಯನಾಗಿ ಪ್ರಸಿದ್ಧ.

ದಾತನು—ಎಲ್ಲ ತತ್ತ್ವೇಶರಿಗೂ ಸ್ವಕಾರ್ಯನಿರ್ವಹಣೆಯ ಸ್ವಾತಂತ್ರ್ಯವನ್ನು ಕೊಡುವವನು.

ಭೂತೇಶವಂದ್ಯ—ರುದ್ರನಿಂದ ಸ್ತುತನಾದವನು.

ವಿಭೂತಿಪ್ರದ—ದೇವತೆಗಳಿಗೂ ಜೀವರಿಗೂ ಸ್ವರೂಪಯೋಗ್ಯವಾದ ಮಹಿಮೆಯನ್ನು ಕೊಡುವವನು.

ವಿಜಯಗೊಲಿದು ..—ಅರ್ಜುನನ ಮೇಲಣ ವಿಶ್ವಾಸದಿಂದ ಅವನ ರಥಕ್ಕೆ ಸಾರಥಿಯಾದ.

ಅಜಾಮಿಳನಂತ್ಯಕ್ಕೆ ಅತ್ಯಂತ ಸುಹೃದನಾದ — ಕಾನ್ಯಕುಬ್ಜದ ದುರಾಚಾರಿ ಬ್ರಾಹ್ಮಣನು ಕಡೆಗಾಲದಲ್ಲಿ ತನ್ನ ಮಗನನ್ನು ನಾರಾಯಣನೆಂಬ ಹೆಸರಿನಿಂದ ಕರೆಯಲು, ನಾಮಸ್ಮರಣೆಯ ಮಹಿಮೆಯಿಂದ ಸ್ವರ್ಗವನ್ನು ಪಡೆದ ಕತೆ ಹಿನ್ನೆಲೆ.

ಸಂಕರ್ಷಣ—ವಿಷ್ಣುವಿನ ಚತುರ್ವ್ಯೂಹಗಳಲ್ಲಿ ಒಂದು.

ಬಿಂಕದಿಂದಲಿ —ಸರ್ವೋತ್ತಮನೆಂಬ ಕೀರ್ತಿಯನ್ನು ಪಡೆದವನು.

ಮೀನಾಂಕಜನಕ—ಮೀನನ್ನು ಧ್ವಜವಾಗಿ ಉಳ್ಳ ಮನ್ಮಥನ ತಂದೆ.



ಅನಂತಕೋಟಿ ಬ್ರಹ್ಮಾಂಡನಾಯಕ, ರಮಾಬ್ರಹ್ಮ ರುದ್ರೇಂದ್ರಾದಿವಂದ್ಯ, ಭಕ್ತವತ್ಸಲ, ಭವರೋಗವೈದ್ಯ, ಶರಣಾಗತ ವಜ್ರ ಪಂಜರ, ಆಪದ್ಬಾಂಧವ, ಅನಾಥಬಂಧೋ, ಅನಿಮಿತ್ತ ಬಂಧೋ, ಪತಿತಪಾವನ, ಮಹಾರೋಗನಿವಾರಣ, ಮಹಾ ದುರಿತನಿವಾರಣ, ಮಹಾಭಯನಿವಾರಣ, ಮಹಾಬಂಧ ವಿಮೋಚನ, ಭಯಕೃದ್ಭಯವಿನಾಶನ, ಕೃಪಾವಾರಿಧಿ, ದೇವದೇವೋತ್ತಮ, ದೇವಶಿಖಾಮಣಿ, ಕಪಟನಾಟಕ ಸೂತ್ರಧಾರ, ನಿತ್ಯರೊಳು ನಿತ್ಯ, ಸತ್ಯಸಂಕಲ್ಪ, ಮುಕ್ತಾಮುಕ್ತ ನಿಯಾಮಕ, ಮೋಕ್ಷಧರ, ಸುವೈಕುಂಠಪತಿ, ವೈಕುಂಠ ವಿಹಾರಿ, ತ್ರಿಧಾಮಾ, ತ್ರಿಗುಣವರ್ಜಿತ, ಜಗಜ್ಜನ್ಮಾದಿ ಕಾರಣ, ಜಗತ್ಪತೇ, ಜಗದತ್ಯಂತಭಿನ್ನ, ಜಗದೀಶ, ಜಗದುದ್ಧಾರ, ಜಗತ್ಸ್ವಾಮಿ, ಜಗದ್ವಿಲಕ್ಷಣ, ಜಗನ್ನಾಥ, ವಿಶ್ವಕುಟುಂಬಿ, ವಿರಾಟ ಮೂರ್ತಿ, ಹೇ ಮಂಗಳಾಂಗ, ಹೇ ಶುಭಾಂಗ, ಪರಮಮಂಗಳಮೂರ್ತಿ, ಕೋಮಲಾಂಗ, ನೀಲಮೇಘಶ್ಯಾಮ, ಇಂದುವದನ, ಬಹುಸುಂದರ, ಇಂದಿರಾವಂದಿತಚರಣ, ವೃಕೋದರವಂದ್ಯ, ಕೇಶವಾದಿರೂಪ, ಅಜಾದಿರೂಪ, ವಿಶ್ವಾದಿರೂಪ, ಆತ್ಮಾದಿರೂಪ, ಅನಿರುದ್ಧಾದಿರೂಪ, ಅನ್ನಮಯಾದಿರೂಪ, ಅನೇಕ ಮಂತ್ರ ಪ್ರತಿಪಾದ್ಯ, ಸರ್ವಸಾರಭೋಕ್ತ, ಅಷ್ಟೈಶ್ವರ್ಯಪ್ರದಾತ, ಓಂಕಾರಶಬ್ದವಾಚ್ಯ, ವಿಶಿಷ್ಟತಾರತಮ್ಯವಾಚ್ಯ, ಅನಂತಾನಂತಶಬ್ದವಾಚ್ಯ, ಅಣುಮಹದ್ರೂಪ, ಶಂಖಚಕ್ರಪೀತಾಂಬರಧಾರಿ, ಕಮಲಾಕ್ಷ, ಕಮಲನಾಭ, ವೈಜಯಂತಿ ವನಮಾಲಾ ಶೋಭಿತ, ಕೌಸ್ತುಭಭೂಷಿತ, ಸುವರ್ಣವರ್ಣ, ನವರತ್ನ ಕುಂಡಲಧಾರಿ, ಕಸ್ತೂರೀ ಶ್ರೀಗಂಧ ಲೇಪನ, ಗರುಡಾರೂಢ ಶೋಭಿತ, ಕಾಮಧೇನು, ಶ್ರೀವತ್ಸಲಾಂಛನ, ಕಲ್ಪವೃಕ್ಷ, ಚಿಂತಾಮಣಿ, ಕ್ಷೀರಾಬ್ಧಿ ಶಾಯಿ, ಶೇಷಶಾಯಿ, ವಟಪತ್ರಶಾಯಿ, ಖಗವಾಹನ, ದೇಶಕಾಲಗುಣಾತೀತ, ಅನಂತಬ್ರಹ್ಮ, ಅನಂತಶಕ್ತಿ, ಅನಂತಮೂರ್ತಿ, ಅನಂತಕೀರ್ತಿ, ಪುರಾಣಪುರುಷೋತ್ತಮ, ಅಕ್ರೂರವರದ, ಅಂಬರೀಷವರದ, ನಾರದವರದ, ಪ್ರಹ್ಲಾದವರದ ಗಜೇಂದ್ರವರದ, ಮುಚುಕುಂದವರದ, ಧ್ರುವವರದ, ವಿಭೀಷಣವರದ, ಕುಲಾಲಭೀಮಸಂರಕ್ಷಕ, ಪುಂಡರೀಕವರದ, ಪರಾಶರವರದ, ಪಾರ್ಥಸಾರಥಿ, ಪಾಪವಿದೂರ, ಅನಜನ ಪ್ರ ಚ ಂ ಡ , ಚಾಣೂರಮಲ್ಲಮುಷ್ಟಿಕಾಸುರಮರ್ದನ, ಕಾಳಿಂದೀಕೂಲವನಕಂಠೀರವ, ಮದನಗೋಪಾಲ, ವೇಣುಗೋಪಾಲ, ವೇಣುನಾದಪ್ರಿಯ, ಷೋಡಶಸಹಸ್ರಗೋಪಿಕಾ ಪ್ರಿಯರ ವಿಲಾಸ, ಅಹಲ್ಯಾಶಾಪವಿಮೋಚನ, ದ್ರೌಪದೀ ಅಭಿಮಾನರಕ್ಷಕ, ದುಷ್ಟಜನಮರ್ದನ, ಶಿಷ್ಟಜನಪರಿಪಾಲನ, ಮುಕುಂದ, ಮುರಾರೇ, ಕಂಸಾರೇ, ಅಸುರಾರೇ, ದೈತ್ಯಕುಲಸಂಹಾರ, ಕ್ಷಾತ್ರಕುಲಾಂತಕ, ಸೋಮಕಾಸುರಾಂತಕ, ಹಿರಣ್ಯಾಕ್ಷ ಹಿರಣ್ಯಕಶಿಪು ಸಂಹಾರ, ರಾವಣ ಕುಂಭಕರ್ಣಮರ್ದನ, ಶಿಶುಪಾಲದಂತವಕ್ರಶಿರಚ್ಛೇದನ, ರಘುಕುಲೋದ್ಭವ, ದಶರಥಕೌಸಲ್ಯಾ

ನಂದನ, ಸಿಂಧುವರದ, ಸೀತಾಪತೇ, ಶ್ರೀ ರಾಮಚಂದ್ರ, ಯದುಕುಲೋತ್ಪನ್ನ, ಯದುಕುಲೋದ್ಧಾರಿ, ಯದುಕುಲ ತಿಲಕ, ಯದುಕುಲಶ್ರೇಷ್ಠ, ವಸುದೇವದೇವಕೀ ನಂದನ, ಯಶೋದಾಕಂದ, ವೃಂದಾವನವಾಸಿ, ಗೋಪಕುಮಾರ, ಗೋಕುಲದ್ವಾರಕಾ ವಾಸ, ಗೋವರ್ಧನೋದ್ಧಾರಿ, ಕಾಲೀಯಮರ್ದನ, ಪೂತನಾಪ್ರಾಣಾಪಹಾರಿ, ಶಕಟಾ ಸುರ ಮರ್ದನ, ಪಾಂಡವಬಂಧೋ, ಪಾಂಡವಪರಿಪಾಲ, ಪಾಂಡವಪ್ರಿಯ, ಸುದಾಮ ಸಖ, ರುಕ್ಮಿಣೀವಲ್ಲಭ, ಸತ್ಯಭಾಮಾಪ್ರಿಯ, ಗೋಪೀಜನಜಾರ, ನವನೀತಚೋರ, ಗೋಪಾಲಕೃಷ್ಣ, ಗಂಗಾಜನಕ, ಪ್ರಯಾಗಮಾಧವ, ಕಾಶೀಬಿಂದುಮಾಧವ, ಪಂಪಾ ಪತಿ, ಗುಲುಗಂಜಿಮಾಧವ, ರಾಮೇಶ್ವರಸೇತುಮಾಧವ, ಬದರೀನಾರಾಯಣ, ಶ್ರೀರಂಗನಾಥ, ಪಡ್ಡಿ ಜಗನ್ನಾಥ, ಉಡುಪಿ ಶ್ರೀಕೃಷ್ಣ, ಮೇಲುಕೋಟೆಯ ಚೆಲುವ ರಾಯ, ಬೇಲೂರ ಚೆನ್ನಿಗರಾಯ, ಅಹೋಬಲ ನರಸಿಂಹ, ಪಾಂಡುರಂಗವಿಟ್ಠಲ, ಶ್ರೀಶೈಲವಾಸ, ಅರುಣಾಚಲನಿಲಯ, ವೃಷಭಾಚಲವಿಹಾರಿ, ಅನಂತಶಯನ, ದರ್ಭ ಶಯನ, ಕಪಿಲ, ಹಯಗ್ರೀವ, ದತ್ತಾತ್ರೇಯ, ಶಿಂಶುಮಾರ, ಧನ್ವಂತರಿ, ಮಮ ಸ್ವಾಮಿ, ಸರ್ವಸ್ವಾಮಿ, ಜಗದಂತರ್ಯಾಮಿ, ಜಗದೀಶ, ಪ್ರಾಣೇಶ, ದ್ವಿಜಫಣಿಪಮೃಡೇಶ, ಶ್ರೀರಮಣ, ಭೂರಮಣ, ದುರ್ಗಾರಮಣ, ಶ್ರೀಲಕ್ಷ್ಮೀ ವೇಂಕಟರಮಣ, ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸೀತಾಪತೇ ಶ್ರೀರಾಮ ಚಂದ್ರ, ಸಾಕ್ಷಾತ್ ಮನ್ಮಥಮನ್ಮಥ, ಹರಿವಿಟ್ಠಲ, ಪುಂಡರೀಕವರದ ಪಾಂಡುರಂಗ ವಿಟ್ಠಲ, ಪುರಂದರವಿಟ್ಠಲ ನಮೋ ನಮಃ

[ಇದು ಗದ್ಯವೆಂದು ಹೆಸರಾಗಿದೆ. ಇದರಲ್ಲಿ ಒಂದುನೂರು ಎಂಬತ್ತು ಹೆಸರು ಗಳಿದ್ದು ಒಂದೊಂದೂ ಹೆಸರೂ ಹರಿಯ ಮಹಿಮೆಯನ್ನು ಹೇಳುತ್ತದೆ. ಹರಿಯ ಕಲ್ಯಾಣಗುಣಗಳು, ಅವತಾರ ವಿಶೇಷಗಳು, ಕ್ಷೇತ್ರ ಸನ್ನಿಧಾನಗಳು, ಭಕ್ತರನ್ನು ಕಾಪಿಟ್ಟ ಸಂದರ್ಭಗಳು ಬಂದಿವೆ. ಇದು ನಾಮಾವಳಿಯೆಂಬ ವರ್ಗಕ್ಕೆ ಸೇರಿದ ರಚನೆ.]

೭೭

ಭೈರವಿ ಝಂಪೆ

ಜಯಮಂಗಳಂ ನಿತ್ಯ ಶುಭಮಂಗಳಂ ಪ

ಮಂಗಳಂ ಮಧು ಕೈಟಭಾಸುರ ಮರ್ದನಗೆ
ಮಂಗಳಂ ಸ್ಮರಕೋಟಿ ಲಾವಣ್ಯಗೆ
ಮಂಗಳಂ ಜಗದಂತರಂಗ ಕೃಪಾಂಗಗೆ
ಮಂಗಳಂ ಯದುಕುಲ ಸಾರ್ವಭೌಮನಿಗೆ ೧

ಶ್ರೀವತ್ಸಲಾಂಛನಗೆ ಶ್ರೀದೇವಿ ಅರಸಗೆ
ಗೋವರ್ಧನೋದ್ಧಾರ ಗೋವಿಂದಗೆ
ಮಾವ ಕಂಸನ ಕೊಂದ ಮಕರಕುಂಡಲಧರಗೆ
ಭಾವಜಾರಿ ಪ್ರಿಯ ಚಿನ್ಮಯನಿಗೆ ೨

ಅಂಬುಜನಾಭಗೆ ಅಖಿಲ ಭೂತೇಶಗೆ
ಶಂಭು ಅಜ ಸುರ ಮುನಿವಂದಿತನಿಗೆ
ಎಂಭತ್ತುನಾಲ್ಕುಲಕ್ಷ ಜೀವರಾಶಿಗಳನ್ನು
ಬೊಂಬೆಗಳ ಮಾಡಿ ಕುಣಿಸುವ ದೇವಗೆ ೩

ಸಕಲ ಗುಣಪೂರ್ಣಗೆ ಸರ್ವ ಸ್ವತಂತ್ರಗೆ
ಅಕಳಂಕ ಆದಿ ನಿರ್ದೋಷ ಹರಿಗೆ
ಭಕುತವತ್ಸಲನಿಗೆ ಭವರೋಗ ವೈದ್ಯನಿಗೆ
ಅಖಿಲ ಜೀವರ ದಯಾಪರ ಮೂರ್ತಿಗೆ ೪

ಪನ್ನಂಗ ಶಯನಗೆ ಪಾವನ್ನ ಚರಿತಗೆ
ಸನ್ನುತಾನಂತ ಸದ್ಗುಣ ಭರಿತಗೆ
ಎನ್ನೊಡೆಯ ಪುರಂದರವಿಠಲರಾಯನಿಗೆ
ತನ್ನ ನಂಬಿದರ ಸಲಹುವ ದೇವಗೆ ೫

ಮಧುಕೈಟಭಾಸುರ ಮರ್ದನ—ಪ್ರಳಯಕಾಲದಲ್ಲಿ ವಟಪತ್ರಶಾಯಿಯಾಗಿ ಮಲಗಿದ್ದ ವಿಷ್ಣುವಿನ ಕಿವಿಯ ಕೊಳೆಯಿಂದ ಹುಟ್ಟಿದ ಅಸುರರು ಮಧು-ಕೈಟಭರು. ಹುಟ್ಟಿದೊಡನೆ ವಿಷ್ಣುವಿನ ನಾಭಿಕಮಲದಲ್ಲಿದ್ದ ಬ್ರಹ್ಮನನ್ನು ಕಾಡತೊಡಗಿದರು. ಬ್ರಹ್ಮನ ಮೊರೆಯನ್ನು ಕೇಳಿ ವಿಷ್ಣು ಅವರನ್ನು ಕೊಂದನು. ಶಿವ ಪುರಾಣ, ಕಾಳಿಕಾಪುರಾಣಗಳಲ್ಲಿ ಈ ಕತೆಯಿದೆ.

ಸ್ಮರಕೋಟಿಲಾವಣ್ಯ—ಕೋಟಿಸಂಖ್ಯೆಯ ಮನ್ಮಥರಷ್ಟು ಚೆಲುವ.

ಜಗದಂತರಂಗ—ಜಗತ್ತಿನ ಅಂತರ್ಯಾಮಿ.

ಶ್ರೀವತ್ಸಲಾಂಛನ—ಶ್ರೀವತ್ಸವೆನ್ನುವುದು ವಿಷ್ಣುವಿನ ಆಭರಣ ವಿಶೇಷ.

ಭಾವಜಾರಿಪ್ರಿಯ—ಭಾವಜನೆಂದರೆ ಮನ್ಮಥ ; ಅವನಿಗೆ ಶತ್ರು ಶಿವ (ಮದನ ದಹನದ ಕತೆ) ; ಶಿವನಿಗೆ ಪ್ರಿಯನಾದವನು.

ಬೊಂಬೆಗಳ ಮಾಡಿ—ತಾನೇ ಸ್ವತಂತ್ರನಾದರೂ, ಜೀವರಿಂದ ಅವರವರ ಸ್ವರೂಪ ಯೋಗ್ಯತಾನುಸಾರವಾಗಿ ಕರ್ಮಗಳನ್ನು ಮಾಡಿಸುವವನು, ಕರ್ಮಫಲಗಳನ್ನು ಅನುಭವಿಸುವಂತೆ ಮಾಡುವವನು.



# ಭಾಗ ೨

# ಮಾಹಾತ್ಮ್ಯ ದರ್ಶನ

ಹರಿ ಸರ್ವೋತ್ತಮ
ಅವತಾರ ವಿಶೇಷ
ಬಿಂಬರೂಪ

# ಹರಿ ಸರ್ವೋತ್ತಮ

ಸಾಧನೆಯಲ್ಲಿ ಮುಖ್ಯವಾದ ವಿವರಗಳೆಂದರೆ ಹರಿಯ ಮಾಹಾತ್ಮ್ಯ ಜ್ಞಾನ ಮತ್ತು ಅದರಿಂದ ಒದಗುವ ಅತ್ಯಧಿಕವಾದ ಸ್ನೇಹ ಹರಿಯೇ ಸರ್ವೋತ್ತಮನೆಂದು ಮನದಟ್ಟುಮಾಡಿಕೊಳ್ಳುವುದೇ ಮಾಹಾತ್ಮ್ಯಜ್ಞಾನ. ದೇವತಾತಾರತಮ್ಯದಲ್ಲಿ ಕೆಳಗಿನಿಂದ ಮೇಲಿನವರೆಗೆ ('ತೃಣ ಪ್ರಾರಂಭಮಾಡಿ ಪರಮೇಷ್ಠಿಪರ್ಯಂತ') ಎಣಿಸುವಾಗ ಗುಣಿಸುವುದೂ ಇದೆ ಚಂದ್ರನಿಗಿಂತ ಪ್ರವಹ (ಮರೀಚಿನಾಮಕ) ಎರಡು ಗುಣಗಳಿಂದ ಅಧಿಕ ಅಷ್ಟೆ ; ಆದರೆ ಪ್ರವಹನಿಗಿಂತ ಸ್ವಾಯಂಭುವ–ಮನು ದಕ್ಷ ಇತ್ಯಾದಿಗಳು ಐದು ಗುಣಗಳಿಗಿಂತ ಅಧಿಕರು; ಆಹಂಕಾರಿಕ ಪ್ರಾಣಕ್ಕಿಂತ ಕಾಮ–ಇಂದ್ರರು ಹತ್ತು ಗುಣಗಳಿಂದ ಅಧಿಕರು, ಗರುಡ, ಶೇಷ, ರುದ್ರರಿಗಿಂತ ವಾಣಿ–ಭಾರತಿಯರು ನೂರು ಗುಣಗಳಿಂದ ಅಧಿಕರು, ಅವರಿಗಿಂತ ಬ್ರಹ್ಮ–ವಾಯುಗಳು ಮತ್ತೆ ನೂರು ಗುಣಗಳಿಂದ ಅಧಿಕರು, ಬ್ರಹ್ಮ–ವಾಯುಗಳಿಗಿಂತ ರಮಾದೇವಿಯು (ಲಕ್ಷ್ಮಿ) ಒಂದು ಕೋಟಿ ಗುಣಗಳಿಂದ ಅಧಿಕಳು, ರಮಾದೇವಿಗಿಂತ ಹರಿಯು ಅನಂತ ಗುಣಗಳಿಗಿಂತ ಅಧಿಕ ಅವನಿಗಿಂತ ಅಧಿಕರೂ ಇಲ್ಲ, ಅವನಿಗೆ ಸಮರೂ ಇಲ್ಲ ಇದು ಸರ್ವೋತ್ತಮತ್ವ

ಅವನು ತನ್ನ 'ಅಪಾರ ಮಹಿಮೆಯನ್ನು ನೆರಹಿಕೊಂಡು ಅಪ್ರಮೇಯ ತಾನಾಗಿ ಸರ್ವದೇವತೆಗಳನೊಂದೊಂದು ವ್ಯಾಪಾರಗಳಲಿಟ್ಟು.' 'ನಿರುಪಾಧಿಕ, ಸ್ವತಂತ್ರ, ನಿತ್ಯನಿಖಿಲೈಶ್ವರ್ಯಭೂಮ, ಪರಬೊಮ್ಮ, ಸರ್ವಜ್ಞ, ವ್ಯಾಪ್ತ, ಸ್ವರಮಣ ಸುಗುಣ ಸಾಕಾರ ಸುಂದರ'. ಪರತತ್ತ್ವವಾದರೂ ನಾನಾ ರೂಪಗಳನ್ನು ಧರಿಸಿದ್ದಾನೆ; ಎಲ್ಲ ಜೀವಗಳಲ್ಲೂ ಅಂತರ್ಯಾಮಿ, ಎಲ್ಲ ದೇವತೆಗಳಿಗೂ ನಿಯಾಮಕ ; ಅವನದ್ದು ಪೂರ್ಣೈಶ್ವರ್ಯ, ಸಮಗ್ರ ಪೂರ್ಣಾನಂದ. 'ವಿಶ್ವವ್ಯಾಪಕಮೂರ್ತಿಯಾಗಿ ಅವ್ಯಾಕೃತನು, ಶೂನ್ಯನಾಮಕನು', ಆದರೆ ಸುಗಂಧ ವ್ಯಾಪಿಸಿದಂತೆ ಬೊಮ್ಮಾಂಡವನ್ನೆಲ್ಲ ವ್ಯಾಪಿಸಿದ್ದಾನೆ. 'ಬೊಮ್ಮಾಂಡವೆಲ್ಲ ಒಂದು ಘನ ಅಂಗುಷ್ಠವೆ ವ್ಯಾಪ್ತ' ಮತ್ತು ಪರಮ ಮಂಗಳಮೂರ್ತಿ.

ಈ ದೃಷ್ಟಿಯನ್ನು ಹಮ್ಮಿಕೊಂಡ ಹರಿದಾಸರಲ್ಲಿ ಶ್ರೀಪಾದರಾಜರು ಮೊದಲಿಗರು ಅವರು

'ಬಿಡಿ ಬಿಡಿ ಸಂಹೇಹವ ಪೊಡವಿಮನುಷ್ಯರೆಲ್ಲ
ಒಡೆಯನೊಬ್ಬನೆ ಜಗಕೆಲ್ಲ ರಂಗವಿಠಲ'

ಎಂದು ಸೂತ್ರರೂಪದಲ್ಲಿ ಹೇಳಿದರು. ಅವರ ಶಿಷ್ಯರೂ ಪುರಂದರದಾಸರ ಗುರುಗಳೂ ಆದ ವ್ಯಾಸರಾಯ ಸ್ವಾಮಿಗಳು

'ಹರಿ ನಿನ್ನ ರೋಮಕೂಪದಲ್ಲಿ ಜೀವಿಪ
ಸರಸಿಜ ಬ್ರಹ್ಮಾಂಡ ಕೋಟಿಯಲಿ
ತುರುಗಿಪ್ಪ ಬ್ರಹ್ಮರುದ್ರಾದಿ ಜೀವರುಗಳು
ಹರಿ ನಿನ್ನ ಮಹಿಮೆಯ ಪೇರ್ಮೆಯ ಬಲ್ಲರೆ ?'

ಎಂದು ಆಶ್ಚರ್ಯಪಟ್ಟು

'ಉಕ್ಕುವ ತುಪ್ಪಕ್ಕೆ ಕೈಯಿಕ್ಕುವೆ ನಾನು
ಚಕ್ರಧರ ಪರಮಾತ್ಮನೊಬ್ಬ ಸಲ್ಲದಿಲ್ಲವೆಂದು !'

ಎಂದು ಶಪಥ ಮಾಡಿ ಹೇಳಿದರು. ಅವರನ್ನನುಸರಿಸಿ ಪುರಂದರದಾಸರೂ ಈ ವೀರ ಪ್ರತಿಜ್ಞೆಯನ್ನು ಮಾಡಿದರು

'ವಿಧಾತೃದೇವತೆಗಳೆಲ್ಲ ವಿಷ್ಣುವಿನ ಹಿಂದೆ
ಇದಕೆ ನಾ ಫಣಿಫಣ ಕೈಯಾಗೆ ಪಿಡಿವೆ !'

ಮಾಧ್ವಸಿದ್ಧಾಂತದಲ್ಲಿ ತಾರತಮ್ಯ, ಪಂಚಭೇದಗಳನ್ನು ಒತ್ತಿಹೇಳುವುದರ ಉದ್ದೇಶವೇ ಹರಿಸರ್ವೋತ್ತಮತ್ವವನ್ನು ಸಾಧಿಸುವುದು. ತತ್ತ್ವಗಳಲ್ಲಿ ಈಶ, ಜೀವ, ಜಡ ಎಂದು ಮೂರು ಪ್ರತಿಯೋಗಿಗಳು ; ಮತ್ತೆ ಈ ಮೂರು ಎರಡು ವಿಭಾಗಗಳು, ಈಶ ಮತ್ತು ಜೀವ–ಜಡ. ಈಶನೆಂಬುದು (ಅದೇ ಹರಿ) ಸ್ವತಂತ್ರತತ್ತ್ವ ; ಜೀವ–ಜಡ ಅಸ್ವತಂತ್ರತತ್ತ್ವ. ಇವೆರಡನ್ನು ಮೀರಿ ತತ್ತ್ವವಿಲ್ಲ ಜೀವರಲ್ಲಿ ತಾರತಮ್ಯ. ಅಧಮಕಕ್ಷೆಯನ್ನು ಹಿಡಿದರೆ ಸ್ಥಾವರ–ಜಂಗಮ ಪ್ರಾಣಿಗಳಿಂದ ಮೊದಲು ಮಾಡಿ ಮೇಲೆ ಮೇಲೆ ಉತ್ತಮವಾದ ಕಕ್ಷೆಗಳು, ಬ್ರಹ್ಮ–ವಾಯುಗಳ ವರೆಗೆ. ವಾಯುವು ಜೀವೋತ್ತಮ ; ಬ್ರಹ್ಮನು ಅವನಿಗಿಂತ ಉತ್ತಮವಾದ ಪದವಿಯನ್ನು ಹೊಂದಿದ್ದು ಸೃಷ್ಟಿಕರ್ತ. ಈ ಜೀವಕೋಟಿಗಿಂತ ಬೇರೆಯಾದುದು ಜಡ ಜಗತ್ತು. ಜೀವಕೋಟಿಯಲ್ಲೆಲ್ಲ ಅಂತರ್ಯಾಮಿಯಾಗಿ ನಿಯಾಮಕನಾದ ಜಡಜಗತ್ತಿಗೆ ವಿಧಾತನಾಗಿ ಇರುವವನು ಈಶ. ಹಾಗಾಗಿ ಜೀವ, ಜಡ ಎರಡರಿಂದಲೂ ಬೇರೆಯಾದವನು ; ಎರಡಕ್ಕಿಂತಲೂ ಉತ್ತಮನಾದವನು. ಜೀವಕೋಟಿಯಲ್ಲಾಗಲಿ ಜಡಜಗತ್ತಿನಲ್ಲಾಗಲಿ 'ನ ತತ್ ಸಮಃ, ನಾಭ್ಯಧಿಕಃ'. ಜೀವಜೀವರಲ್ಲಿ ತರತಮಭಾವ ; ತೃಣ, ತರು, ಪಶು, ಮೃಗ, ಮನುಷ್ಯ, ಮನೋಷ್ಯೋತ್ತಮ, ಚಕ್ರವರ್ತಿ, ಮುನಿ, ಗಂಧರ್ವ, ದೇವತೆ, ತತ್ತ್ವೇಶ ಇವರೆಲ್ಲ ಭಿನ್ನರಾದವರು. ಜಡಕ್ಕೂ ಜೀವಕ್ಕೂ ಭೇದವಿರುವುದು ಸಹಜವೇ, ಜಡಜಗತ್ತಿನಲ್ಲೂ ಸ್ವಗತವಾದ ಭೇದವಿರುವುದು ಸಹಜವೇ. ಜಡಕ್ಕೆ ಸ್ವಂತವಾದ ಪ್ರವೃತ್ತಿಯಿಲ್ಲ; ಜೀವ ಅದನ್ನು ಪ್ರೇರಿಸಬೇಕು. ಆದರೆ ಜೀವನಿಗೆ ಸ್ವತಂತ್ರವಾದ ಪ್ರೇರಕ ಶಕ್ತಿಯಿಲ್ಲ, ಈಶನಿಂದಲೇ ಅದು ಬರಬೇಕು. ಮನುಷ್ಯನಾಗಲಿ ದೇವತೆಯಾಗಲಿ ಅವರು ಕೆಲಸ ಮಾಡುವುದು ಈಶನಿಂದ ದತ್ತವಾದ ಸ್ವಾತಂತ್ರ್ಯದಿಂದಲೇ. ಹೀಗೆ ಅವನು ಸರ್ವೋತ್ತಮ.

ಪುರಂದರದಾಸರು ಹರಿಯನ್ನು 'ಬ್ರಹ್ಮಾಂಡದೊಳಗಿನ ಗಂಡ'ನೆಂದು ಕರೆದಿದ್ದಾರೆ. ಅವನ ಹೆಗ್ಗಳಿಕೆಯನ್ನು ನಗಾರಿಯ ಮೇಲೆ ಕೈಯನ್ನು ಹೊಡೆದು, ಡಂಗುರವ ಸಾರಿ, ಅಡಿಗಡಿಗೆ ಹಾಡಿ ಹೊಗಳಿದ್ದಾರೆ. ಅವರ ಕೃತಿಗಳಲ್ಲಿ ಹೆಚ್ಚಿನವು ಈ ತತ್ತ್ವಪ್ರತಿಪಾದನೆಗೇ ಮೀಸಲಾದುವು.

ಕಾಂಬೋದಿ ಝಂಪೆ

ವಿದಿತ ದೈವಗಳೆಲ್ಲ ವಿಷ್ಣುವಿನ ಹಿಂದೆ ಪ

ಇದಕೆ ನಾ ಫಣಿಫಣವ ಕೈಯಾಗೆ ಪಿಡಿವೆ ಅ

ಸಕಲ ತೀರ್ಥಗಳೆಲ್ಲ ಸಾಲಿಗ್ರಾಮದ ಹಿಂದೆ
ಸಕಲ ವೃಕ್ಷಗಳೆಲ್ಲ ಶ್ರೀ ತುಳಸಿ ಹಿಂದೆ
ಸಕಲ ದ್ರವ್ಯಗಳೆಲ್ಲ ವಿದ್ಯಾದ್ರವ್ಯದ ಹಿಂದೆ
ಪ್ರಕಟ ಗ್ರಂಥಗಳೆಲ್ಲ ಭಾರತದ ಹಿಂದೆ ೧

ಮತಗಳೆಲ್ಲವು ಮಧ್ವಮತ ಸಂಸಾರದ ಹಿಂದೆ
ಇತರ ವರ್ಣಗಳೆಲ್ಲ ವಿಪ್ರರ ಹಿಂದೆ
ವ್ರತಗಳೆಲ್ಲವು ಹರಿವಾಸರ ವ್ರತದ ಹಿಂದೆ
ಅತಿಶಯದ ದಾನಗಳು ಅನ್ನದಾನದ ಹಿಂದೆ ೨

ಉತ್ತಮ ಗುಣಗಳೆಲ್ಲ ಔದಾರ್ಯಗುಣದ ಹಿಂದೆ
ಮತ್ತೆ ಕರ್ಮಗಳೆಲ್ಲ ಮಜ್ಜನದ ಹಿಂದೆ
ನಿತ್ಯ ನೇಮಗಳು ಗಾಯತ್ರಿ ಜಪದಾ ಹಿಂದೆ
ಚಿತ್ತಜನಯ್ಯ ಶ್ರೀ ಪುರಂದರವಿಠಲ ೩

ವಿದಿತ—ಜನರಿಗೆ ತಿಳಿದಿರುವ.

ನಾ ಫಣಿಫಣವ ಪಿಡಿವೆ—ಇದು ಸತ್ಯವೆಂದು ಸಾರಲು ಮಾಡುವ ಶಪಥ ; ಹಾವಿನ ಹೆಡೆಯನ್ನು ಕೈಯಲ್ಲಿ ಹಿಡಿದು ಹೇಳುತ್ತೇನೆ ಎಂದು ಪ್ರಮಾಣ ಮಾಡುವುದು.

ತೀರ್ಥಗಳು—ವಿಷ್ಣುಪಾದೋದಕ.

ಹರಿದಾಸರ ವ್ರತ—ಏಕಾದಶೀ ವ್ರತ.

ಮಜ್ಜನದ ಹಿಂದೆ—ಯಾವ ವಿಧಿವಿಹಿತಕರ್ಮ ಮಾಡುವ ಮೊದಲು ಸ್ನಾನಮಾಡಬೇಕೆಂದು ನಿಯಮ.

ಆರಭಿ　　　　　　　　　　　　　　　　　　　　　　　　　ಆದಿ

ಅಂದೇ ನಿರ್ಣೈಸಿದರು ಕಾಣೊ
ಇಂದಿರಾಪತಿ ಪರದೈವವೆಂದು　　　ಪ

ಅಂದು ಚತುರ್ಮುಖ ನಾರದರಿಗೆ ತಮ್ಮ
ತಂದೆ ಶ್ರೀಹರಿ ಪರದೈವವೆಂತೆಂದು
ಸಂದೇಹವ ಪರಿಹರಿಸಿಹ ದ್ವಿತೀಯ
ಸ್ಕಂಧದೊಳೈದನೆಯ ಅಧ್ಯಾಯದಲಿ　　　೧

ವೇದೋಪಾಸ್ಯಕ ವೇದವಿಧಾಯಕ
ವೇದಾತೀತ ವಿಧಾತನಂತೆ
ವೇದಾಕ್ಷರಗಳು ಹರಿನಾಮಗಳೆಂದು
ವೇದಾಂತ ಶ್ರುತಿ ಸ್ಮೃತಿ ಶಾಸ್ತ್ರಗಳಿಂದ　　　೨

ಅಂದು ಕಪಿಲದೇವ ದೇವಹೂತಿಗೆ ತಾನು
ಚೆಂದದ ತತ್ತ್ವವನೆಲ್ಲ ಬೋಧಿಸಿದ
ಅಂದದಲರ್ಜುನ ಉದ್ಧವರಿಗೆ ಅಂದಾ
ನಂದದಿ ಗೀತಾಶಾಸ್ತ್ರವನೊರೆದನೆಂದು　　　೩

ಬಿಡು ಪಾಷಂಡಮತದ ದುರ್ಬುದ್ಧಿಯ
ಬಿಡದೆ ಮಾಡು ಸಜ್ಜನರ ಸಂಗವನು
ದೃಢಭಕುತಿಯಲಿ ಹರಿಯ ಸೇವಿಸಲು
ಮೃಡಪ್ರಿಯ ಪುರಂದರವಿಠಲನೊಲಿವನೆಂದು　　　೪

ಅಂದೇ—ಪುರಾಣಗಳು (ಮುಖ್ಯವಾಗಿ ಭಾಗವತ) ಸಿದ್ಧವಾದ ಕಾಲದಲ್ಲಿ. ಹರಿದಾಸರಿಗೆ ಪುರಾಣಗಳೇ ಪರಮಪ್ರಮಾಣ. ಅವು ಶ್ರುತ್ಯರ್ಥದ ಉಪಬೃಂಹಣಕ್ಕಾಗಿ ಸಿದ್ಧವಾದುವೆಂದು ನಂಬಿಕೆ. ಹದಿನೆಂಟು ಪುರಾಣಗಳಲ್ಲಿ

'ಆರು ಪುರಾಣ ಗೌರಿಯು ಗಂಡನವು ಮ
ತ್ತಾರು ಪುರಾಣ ಚತುರಮುಖನವು
ಆರು ಪುರಾಣ ಹಯವದನನವು'

ಎಂದು ವಾದಿರಾಜರ ಎಣಿಕೆ. ಇಲ್ಲಿ ಉಲ್ಲೇಖಿಸಿರುವ ಭಾಗವತ ಪುರಾಣ ವೈಷ್ಣವ ಪುರಾಣಗಳ ಗುಂಪಿಗೆ ಸೇರಿದ್ದು.

ವೇದೋಪಾಸ್ಯಕ—ವೇದಗಳಿಂದ ಉಪಾಸ್ಯನಾದ, ಎಂದರೆ ಮಧ್ವಾಚಾರ್ಯರು ಹರಿಯನ್ನು 'ಸದಾಗಮೈಕವೇದ್ಯ'ನೆಂದು ಬಣ್ಣಿಸಿರುವುದು ಈ ಮಾತಿನ ಹಿನ್ನೆಲೆ.

ವೇದಾಕ್ಷರಗಳು ..—ಮಧ್ವಾಚಾರ್ಯರು ಋಗ್ಭಾಷ್ಯದಲ್ಲಿ "ಸಕಲವೇದಾನಾಂ ಮುಖ್ಯತೋ ಭಗವತ್ಪ್ರತಿಪತ್ತಿ ಹೇತುತ್ವಾತ್" ಎಂದು ಹೇಳಿರುವುದರ ತಾತ್ಪರ್ಯ.

ಕಪಿಲದೇವ—ವಿಷ್ಣುವಿನ ಅವತಾರವಾದ ಮಹರ್ಷಿ ; ಕರ್ದಮ–ದೇವಹೂತಿಯರ ಮಗ. ತನ್ನ ತಾಯಿಗೆ ಸಾಂಖ್ಯಶಾಸ್ತ್ರವನ್ನು ಬೋಧಿಸಿದನೆಂದು ಭಾಗವತದಲ್ಲಿದೆ.

ಅರ್ಜುನ ಉದ್ಧವರಿಗೆ—ಪಾಂಡವರಲ್ಲಿ ಒಬ್ಬನಾದ ಅರ್ಜುನನಿಗೆ ಕೃಷ್ಣನು ಬೋಧಿಸಿದ ಭಗವದ್ಗೀತೆಯೂ, ಕೃಷ್ಣನು ತನ್ನ ಸಚಿವನೂ ತನ್ನ ಚಿಕ್ಕಪ್ಪ ದೇವಭಾಗನ ಮಗನೂ ಆದ ಉದ್ಧವನಿಗೆ, ತನ್ನ ಕಡೆಯ ಗಳಿಗೆಯಲ್ಲಿ ಜ್ಞಾನೋಪದೇಶ ಮಾಡಿದ ಉದ್ಧವಗೀತೆಯೂ ಪ್ರಸಿದ್ಧವಾಗಿವೆ. ಕೃಷ್ಣನು ತೀರಿಕೊಂಡಮೇಲೆ ಉದ್ಧವನು ಬದರಿಕಾಶ್ರಮಕ್ಕೆ ಹೋದನು.

ಪಾಷಂಡಮತ—ವೇದಪ್ರಾಮಾಣ್ಯವನ್ನು ಒಪ್ಪದ ನಾಸ್ತಿಕಮತ.

ಮೃಡಪ್ರಿಯ—ರುದ್ರನ ಮಿತ್ರನಾದ ವಿಷ್ಣು.



ಕಾಂಬೋದಿ ಝಂಪೆ

ಈ ಪರಿಯ ಸೊಬಗಾವ ದೇವರಲಿ ಕಾಣೆ ಪ

ಗೋಪೀಜನಪ್ರಿಯ ಗೋಪಾಲಗಲ್ಲದೆ ಅ

ಧೊರೆಯತನದಲ್ಲಿ ನೋಡೆ ಧರಣಿದೇವಿಗೆ ರಮಣ
ಸಿರಿಯತನದಲಿ ನೋಡೆ ಶ್ರೀ ಕಾಂತನು
ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ
ಗುರುವುತನದಲಿ ನೋಡೆ ಜಗದಾದಿ ಗುರುವು ೧

ಪಾವನತ್ವದಿ ನೋಡೆ ಅಮರಗಂಗಾಜನಕ
ದೇವತ್ವದಲಿ ನೋಡೆ ದಿವಿಜರೊಡೆಯ
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ
ಆವ ಧೈರ್ಯದಿ ನೋಡೆ ಅಸುರಾಂತಕ ೨

ಗಗನದಲಿ ಸಂಚರಿಪ ಗರುಡದೇವನೆ ತುರಗ
ಜಗತೀಧರ ಶೇಷ ಪರಿಯಂಕ ಶಯನ
ನಿಗಮಗೋಚರ ಪುರಂದರವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯವುಂಟೆ ೩

ಗುರುವುತನದಲಿ—ಗುರುಪರಂಪರೆಯಲ್ಲಿ ಆದಿ; ಎಲ್ಲ ಗುರುಪರಂಪರೆಗಳೂ ನಾರಾಯಣನಿಂದಲೇ ಮೊದಲಾಗುತ್ತವೆ; ಅವನ ಮಗ ಬ್ರಹ್ಮನೇ ವೇದಗಳನ್ನು ಪ್ರಕಟಿಸಿದವನು. ಭಗವದ್ಗೀತೆಯಲ್ಲಿ ಕೃಷ್ಣನೇ ಜಗದ್ಗುರು.
ಅಮರಗಂಗಾ—ಸುರನದಿಯಾದ ಗಂಗೆ ; ತ್ರಿವಿಕ್ರಮಾವತಾರದಲಿ ಅವನ ಅಡಿಗಳಿಂದ ಹೊರಬಂದ ನದಿ.
ದಿವಿಜರೊಡೆಯ—ದೇವತೆಗಳಿಗೆಲ್ಲ ಅಂತರ್ಯಾಮಿ ; ನಿಯಾಮಕ, ಪ್ರೇರಕ.
ಆವ—ಯಾವ ಬಗೆಯದಾದರೂ, ಕಾವ (ಕಾಪಿಡುವ) ಎಂದು ಪಾಠಾಂತರ.
ಜಗತೀಧರ ಶೇಷ—ಜಗತ್ತನ್ನು ಹೊತ್ತಿರುವ ಆದಿಶೇಷನೇ ಮಂಚ (ಪರ್ಯಂಕ).
ನಿಗಮಗೋಚರ—ವೇದವೇದ್ಯ.

ಕಾಂಬೋದಿ ಅಟ್ಟ

ಸಕಲ ಗ್ರಹಬಲ ನೀನೆ ಸರಸಿಜಾಕ್ಷ ಪ

ನಿಖಿಳ ರಕ್ಷಕ ನೀನೆ ವಿಶ್ವವ್ಯಾಪಕನೆ ಅ

ರವಿ ಚಂದ್ರ ಬುಧ ನೀನೆ ರಾಹು ಕೇತುವು ನೀನೆ
ಕವಿ ಗುರು ಶನಿಯು ಮಂಗಳನು ನೀನೆ
ದಿವರಾತ್ರಿಯು ನೀನೆ ನವ ವಿಧಾನವು ನೀನೆ
ಭವರೋಗಹರ ನೀನೆ ಭೇಷಜನು ನೀನೆ ೧

ಪಕ್ಷಮಾಸವು ನೀನೆ ಪರ್ವಕಾಲವು ನೀನೆ
ನಕ್ಷತ್ರ ಯೋಗ ತಿಥಿಕರಣ ನೀನೆ
ಅಕ್ಷಯವೆಂದು ದ್ರೌಪದಿಯ ಮಾನವ ಕಾಯ್ದ
ಪಕ್ಷಿವಾಹನ ದೀನರಕ್ಷಕನು ನೀನೆ ೨

ಋತು ವತ್ಸರವು ನೀನೆ ಪೃಥಿವಿಗಾದಿಯು ನೀನೆ
ಕ್ರತು ಹೋಮ ಯಜ್ಞ ಸದ್ಗತಿಯು ನೀನೆ
ಜಿತವಾಗಿ ಎನ್ನೊಡೆಯ ಪುರಂದರವಿಠ್ಠಲನೆ
ಶ್ರುತಿಗೆ ಸಿಲುಕದ ಅಪ್ರತಿಮ ಮಹಿಮ ನೀನೆ ೩

ಕವಿ—ಶುಕ್ರ.

ದಿವರಾತ್ರಿ—ಹಗಲು ಇರುಳು.

ನವ ವಿಧಾನ—ವಿಧಾನವೆಂದರೆ ವೇದಾದಿಶಾಸ್ತ್ರಗಳು ; ಆರು ವೇದಾಂಗಗಳು (ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ), ಮೀಮಾಂಸಾ, ನ್ಯಾಯ, ವ್ಯಾಕರಣ.

ಭೇಷಜ—ಔಷಧ.

ಪಕ್ಷಮಾಸ—ದೇವಕಾರ್ಯಕ್ಕೂ ಪಿತೃಕಾರ್ಯಕ್ಕೂ ಪ್ರಶಸ್ತವಾದ ಪಕ್ಷ (ಚಂದ್ರನ ಹದಿನೈದು ಕಲೆಗಳು) ಎಂಬ ಕಾಲ.

ಪರ್ವಕಾಲ—ಚತುರ್ದಶಿ, ಅಷ್ಟಮಿ, ಅಮಾವಾಸ್ಯೆ, ಹುಣ್ಣಿಮೆ, ಸೂರ್ಯ ಸಂಕ್ರಾಂತಿ (ಸಂಕ್ರಮಣ) ಇವು ಪರ್ವಕಾಲಗಳೆಂದು ಬ್ರಹ್ಮಪುರಾಣದ ಎಣಿಕೆ.

ನಕ್ಷತ್ರ, ಯೋಗ, ತಿಥಿ, ಕರಣ—ಈ ನಾಲ್ಕಕ್ಕೆ ವಾರವನ್ನು ಸೇರಿಸಿ ಪಂಚಾಂಗವೆಂದು ಕರೆಯುತ್ತಾರೆ.

ವತ್ಸರ—ವರ್ಷ.

ಕ್ರತು—ಯೂಪಸಹಿತವಾಗಿ ಸೋಮಸಾಧ್ಯವಾದ ಯಜ್ಞ.

ಹೋಮ—ಪಂಚಮಹಾಯಜ್ಞಗಳಲ್ಲಿ ಒಂದು, ದೇವಯಜ್ಞ : ವಿಧಿಪೂರ್ವಕವಾಗಿ ಅಗ್ನಿಯಲ್ಲಿ ಎಡೆಯನ್ನು ಹಾಕುವುದು.

ಯಜ್ಞ—ಯಾಗಾದಿಗಳು ; ಅಧ್ಯಾಪನವು ಬ್ರಹ್ಮಯಜ್ಞವೆಂದೂ, ತರ್ಪಣವು ಪಿತೃಯಜ್ಞವೆಂದೂ, ಹೋಮವು ದೇವಯಜ್ಞವೆಂದೂ, ಬಲಿ ಭೂತಯಜ್ಞವೆಂದೂ, ಅತಿಥಿಪೂಜೆಯು ಮನುಷ್ಯಯಜ್ಞವೆಂದೂ ಪಂಚಯಜ್ಞಗಳು (ಗಾರುಡಪುರಾಣ ೧೧೫).

ಸದ್ಗತಿ—ಸ್ವರ್ಗ, ಮೋಕ್ಷ.

ಜಿತವಾಗಿ—'ಜಿತ' ಎನ್ನುವುದು 'ಸ್ಥಿತ' ಎಂಬ ಸಂಸ್ಕೃತ ಮಾತಿನ ತದ್ಭವ ; ಸ್ಥಿರವಾಗಿ, ಎಡೆಬಿಡದೆ.



ಬೇಹಾಗು ಆದಿ

ದೇವ ಬಂದ ನಮ್ಮ ಸ್ವಾಮಿ ಬಂದನೊ
ದೇವರ ದೇವ ಶಿಖಾಮಣಿ ಬಂದನೊ ಪ

ಉರಗಶಯನ ಬಂದ ಗರುಡಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದ ೧

ಮಂದರೋದ್ಧರ ಬಂದ ಮಾಮನೋಹರ ಬಂದ
ಬೃಂದಾವನಪತಿ ಗೋವಿಂದ ಬಂದನೋ ೨

ನಕ್ರಹರನು ಬಂದ ಚಕ್ರಧರನು ಬಂದ
ಅಕ್ರೂರಗೊಲಿದ ತ್ರಿವಿಕ್ರಮ ಬಂದನೊ ೩

ಪಕ್ಷಿವಾಹನ ಬಂದ ಲಕ್ಷ್ಮಣಾಗ್ರಜ ಬಂದ
ಅಕ್ಷಯ ಫಲದ ಶ್ರೀ ಲಕ್ಷ್ಮೀರಮಣ ಬಂದ ೪

ನಿಗಮಗೋಚರ ಬಂದ ನಿತ್ಯತೃಪ್ತನು ಬಂದ
ನಗೆಮುಖ ಪುರಂದರವಿಠಲ ಬಂದನೊ ೫

ನರಗೊಲಿದವ—ಅರ್ಜುನನಿಗೆ ಒಲಿದವನು

ಮಾಮನೋಹರ—ಲಕ್ಷ್ಮಿ (ಮಾ) ಮನಸ್ಸನ್ನು ಅಪಹರಿಸಿದವನು (ಎಂದರೆ ಲಕ್ಷ್ಮಿಗೆ ಪ್ರಿಯನಾದವನು)

ನಕ್ರಹರ—ಮೊಸಳೆಯನ್ನು ಕೊಂದವನು (ಗಜೇಂದ್ರಮೋಕ್ಷ).

ಅಕ್ರೂರ—ಯಾದವ ಶ್ವಫಲ್ಕನ ಮಗ; ಕಂಸನ ಮಂತ್ರಿ; ಕಂಸನ ಆಣತಿಯಂತೆ ಮಥುರೆಗೆ ಕೃಷ್ಣನನ್ನು ಕರೆತರುವಾಗ ದಾರಿಯಲ್ಲಿ ಯಮುನಾ ನದಿಯಲ್ಲಿ ಸ್ನಾನ ಮಾಡುವಾಗ ಕೃಷ್ಣನ ದಿವ್ಯರೂಪವನ್ನು ಕಂಡವನು.

ಅಕ್ಷಯ ಫಲದ—ದ್ರೌಪದಿಗೆ ಅಕ್ಷಯವನ್ನು ದಾನಮಾಡಿದವನು (ದೂರ್ವಾಸಾತಿಥ್ಯದ ಪ್ರಕರಣದಲ್ಲಿ ಅಕ್ಷಯಪಾತ್ರೆ, ದುಃಶಾಸನನಿಂದ ಒದಗಿದ ಮಾನಭಂಗದ ಪ್ರಕರಣದಲ್ಲಿ ಅಕ್ಷಯವಸ್ತ್ರ).

ನಿಗಮಗೋಚರ—ವೇದಗಳಿಂದ ಮಾತ್ರ ತಿಳಿಯಲ್ಪಡತಕ್ಕವನು.

ಪೂರ್ವಿ ಝಂಪೆ

ನೀನೆ ಗತಿ ನೀನೆ ಮತಿ ನೀನೆ ಸ್ವಾಮಿ ಪ

ನೀನಲ್ಲದನ್ಯತ್ರ ದೈವಗಳ ನಾನರಿಯೆ ಅ

ನಿನ್ನ ಪಾದಾರವಿಂದದ ಸೇವೆಯ ಮಾಡಿ
ನಿನ್ನ ಧ್ಯಾನದಲಿರುವ ಹಾಗೆ ಮಾಡು
ನಿನ್ನ ದಾಸರ ಸಂಗದಿಂದ ದೂರಿಡದೆನಗೆ
ಸನ್ಮಾರ್ಗದಿರಿಸೊ ಜಗದೀಶ ಅಘನಾಶ ೧

ಕಮಲನಾಭಿಯಲಿ ಬೊಮ್ಮನ ಪುಟ್ಟಿಸಿದೆ ಹರಿಯೆ
ಕಮಲಸಖ ಕೋಟಿ ಪ್ರಕಾಶ ಈಶ
ಕಮಲಕರತಳದೆ ಅಭಯವನಿತ್ತು ಭಕುತರಿಗೆ
ಕಮಲಾಕ್ಷನೆನಿಸಿದೆಯೊ ಕಮಲಾರಮಣ ೨

ಶಿಶುಪಾಲ ದಂತವಕ್ರರ ಶಿರವ ಛೇದಿಸಿದೆ
ಪಶುಪತಿಯ ಆಭರಣ ವೈರಿವಾಹನನೆ
ಅಸುರ ಕುಲ ಸಂಹರಿಸಿ ಭಕ್ತಜನರನು ಪೊರೆದೆ
ವಸುಧೀಶ ಸಿರಿ ಪುರಂದರವಿಠಲರಾಯಾ ೩

ಗತಿ—ಮುಕ್ತಿಯನ್ನು ಕೊಡುವವನು.

ಮತಿ—ಬುದ್ಧಿಗೆ ಪ್ರೇರಕ.

ಅನ್ಯತ್ರದೈವಗಳ—ಬೇರೆಡೆಯಿರುವ ದೇವತೆಗಳನ್ನು ; ತತ್ತ್ವೇಶರೆಲ್ಲ ಹರಿಯಿಂದಲೇ ವ್ಯಾಪ್ತರು, ಹರಿಗೆ ಅಧೀನರು.

ದೂರಿಡದೆನಗೆ—ದೂರ ಹೋಗದಂತೆ ಮಾಡಿ, ನನಗೆ.

ಅಘನಾಶ—ಪಾಪಗಳನ್ನು ತೊಲಗಿಸುವವನು.

ಕಮಲಸಖ—ಸೂರ್ಯ.

ಕಮಲ ಕರತಳದೆ—ತಾವರೆಯಂತಿರುವ ಕೈಗಳಿಂದ (ಅಭಯ ಮುದ್ರೆ).

ಶಿಶುಪಾಲ ದಂತವಕ್ರರ...—ಶಿಶುಪಾಲ ಚೇದಿರಾಜ, ವಸುದೇವನ ತಂಗಿಯ ಮಗ ; ದಂತವಕ್ರ ಕರೂಶದೇಶದ ರಾಜ, ಶಿಶುಪಾಲನ ಮಿತ್ರ ; ಯುಧಿಷ್ಠಿರನು ಕೃಷ್ಣನಿಗೆ ಅಗ್ರಪೂಜೆ ಮಾಡಿದ ಸಂದರ್ಭದಲ್ಲಿ ಇವರಿಬ್ಬರೂ ಕೃಷ್ಣನನ್ನು ಎದುರಿಸಿ ಅವನಿಂದ ಕೊಲ್ಲಲ್ಪಟ್ಟರು.

ಪಶುಪತಿಯ ಆಭರಣ ವೈರಿವಾಹನ—ಶಿವನ ಆಭರಣ ಹಾವು ; ಹಾವಿನ ಹಗೆ ಗರುಡ ; ಗರುಡನನ್ನೇರಿ ಹೋಗುವವನು.



## ೮೪

ಪಂತುವರಾಳಿ | ಅಟ್ಟ

ಅರಿಯರು ಮನುಜರರಿಯರು ಪ

ಅರಿಯರು ಮನುಜರು ಅರಿತೂ ಅರಿಯರು
ಧರೆ ಈರೇಳಕ್ಕೆ ಹರಿಯಲ್ಲದಿಲ್ಲವೆಂದು ಅ

ನಾರದಮುನಿ ಬಲ್ಲ ವಾರಿಜೋದ್ಭವ ಬಲ್ಲ
ಪಾರಾಶರ ಬಲ್ಲ ಮನು ಬಲ್ಲನು
ಧೀರ ಭೀಷ್ಮನು ಬಲ್ಲ ಪಾರ್ವತಿ ಬಲ್ಲಳು
ಕಾರುಣಿಕನು ಶ್ರೀ ಹರಿಯಲ್ಲದಿಲ್ಲವೆಂದು ೧

ಶಿವ ಬಲ್ಲ ಧ್ರುವ ಬಲ್ಲ ದ್ರೌಪದಿ ಬಲ್ಲಳು
ಅವನಿಪಾಲಕ ಜನಕನೃಪ ಬಲ್ಲನು
ಯುವತಿಗೆ ಶಾಪವಿತ್ತ ಗೌತಮಮುನಿ ಬಲ್ಲ
ಭವರೋಗ ವೈದ್ಯ ಶ್ರೀ ಹರಿಯಲ್ಲದಿಲ್ಲವೆಂದು ೨

ದಿಟ್ಟ ಪ್ರಹ್ಲಾದ ಬಲ್ಲ ಕೆಟ್ಟ ಅಜಮಿಳ ಬಲ್ಲ
ಸಿಟ್ಟಿನಿಂದಲಿ ಒದ್ದ ಭೃಗು ಬಲ್ಲನು
ಕೊಟ್ಟ ಬಲಿ ಬಲ್ಲ ಮೊರೆಯಿಟ್ಟ ಗಜೇಂದ್ರ ಬಲ್ಲ
ಸೃಷ್ಟೀಶ ಪುರಂದರವಿಠಲನೆ ದೈವವೆಂದು ೩

ಧರೆ ಈರೇಳಕ್ಕೆ—ಹದಿನಾಲ್ಕು ಲೋಕಗಳಿಗೆ.
ನಾರದ—ಬ್ರಹ್ಮನ ಮಾನಸಪುತ್ರ.
ವಾರಿಜೋದ್ಭವ—ಬ್ರಹ್ಮ.
ಪಾರಾಶರ—ಪರಾಶರನ ಮಗ ವ್ಯಾಸ.
ಮನು—ಸ್ವಾಯಂಭುವ ಮನು.
ಕಾರುಣಿಕ—ಕರುಣಾಳು.
ಯುವತಿಗೆ—ಅಹಲ್ಯೆಗೆ.

[ಈ ಪದದಲ್ಲಿ ಹರಿಯ ಭಕ್ತರ ಎಣಿಕೆಯಿದೆ. ಇವರೆಲ್ಲ ಪರಮಭಾಗವತರೆಂದು ಪ್ರತೀತಿ. ಹರಿಯ ಮಾಹಾತ್ಮ್ಯಕ್ಕೆ ಇವರು ಸಾಕ್ಷಿಗಳು.]

ಪೂರ್ವಿ ಆದಿ

ಡಂಗುರವ ಸಾರಿರಯ್ಯ ಡಿಂಗರಿಗರೆಲ್ಲರು ಭೂ
ಮಂಡಲಕ್ಕೆ ಪಾಂಡುರಂಗವಿಠ್ಠಲ ಪರದೈವವೆಂದು ಪ

ಹರಿಯು ಮುಡಿದ ಹೂವು ಹರಿವಾಣದೊಳಗಿಟ್ಟುಕೊಂಡು
ಹರುಷದಿಂದ ಹಾಡಿ ಪಾಡಿ ಕುಣಿದು ಚಪ್ಪಾಳಿಕ್ಕುತ ೧

ಒಡಲ ಜಾಗಟೆಯ ಮಾಡಿ ನುಡಿವ ನಾಲಿಗೆಯ ಪಿಡಿದು
ಢಂಢಂ ಢಣಾ ಢಣಾರೆಂದು ಹೊಡೆದು ಚಪ್ಪಾಳಿಕ್ಕುತ ೨

ಇಂತು ಜಗಕೆಲ್ಲ ಲಕ್ಷ್ಮೀಕಾಂತನಲ್ಲದಿಲ್ಲವೆಂದು
ಸಂತತ ಶ್ರೀ ಪುರಂದರವಿಠ್ಠಲ ಪರದೈವವೆಂದು ೩

ಡಿಂಗರಿಗರು—ಸೇವಕರು, ಭಕ್ತರು.

ಹರಿಯು ಮುಡಿದ ಹೂವು—ಪ್ರಸಾದರೂಪವಾದುದು.

ಹರಿವಾಣ—ಚಿನ್ನದ ತಟ್ಟೆ.

ಒಡಲ...—ತನ್ನ ಹೃದಯವನ್ನೇ ಜಾಗಟೆಯನ್ನಾಗಿ ಮಾಡಿ, ಹರಿನಾಮವನ್ನು ನುಡಿಯುವ ನಾಲಗೆಯನ್ನು ಕೋಲನ್ನಾಗಿ ಮಾಡಿಕೊಂಡು ಬಡಿದರೆ, ಭಕ್ತಿಯು ಹೃದಯದಲ್ಲಿ ಮೂಡುತ್ತದೆ ಎಂದು ಭಾವ.

ಸಂತತ—ಎಂದೆಂದಿಗೂ.

ಸೌರಾಷ್ಟ್ರ ಆದಿ

ಅಂದೇ ನಿರ್ಣಯವಾದುದಕೆ
ಸಿರಿ ಇಂದಿರಾಪತಿ ಪರದೇವತೆಯೆಂದು ಪ

ಅಂದು ಸ್ವಯಂವರದಲಿ ಬ್ರಹ್ಮರುದ್ರಾದಿ
ಇಂದ್ರಾದಿಗಳೆಲ್ಲರ ಜರಿದು
ಇಂದಿರೆ ನಿತ್ಯಾನಂದ ನಿರ್ದೋಷ ಗುಣಪೂರ್ಣನೆಂದು
ಮಾಲೆಯ ತಾ ಹಾಕಿದಳು ೧

ಸರಸಿಜೋದ್ಭವ ಹರಿಪಾದವ ತೊಳೆಯಲು
ಹರ ಭಕ್ತಿಯಿಂದ ಹರಿಪಾದ ತೀರ್ಥವ
ಹರುಷದಿ ಸುರಮುನಿಗಳೆಲ್ಲರ ಮುಂದೆ
ಧರಿಸಿದನಂದು ಶಿರಸ್ಸಿನಲ್ಲಿ ೨

ವೃಕನೆಂಬಾಸುರಗೆ ಹರ ವರವನೆ ಕೊಟ್ಟು
ಚಕಿತನಾಗಿ ಓಡಿ ಬಳಲುತಿರೆ
ರುಕುಮಿಣಿ ಪತಿ ವೃಕಾಸುರನ ಭಸ್ಮವಮಾಡಿ
ಭಕುತ ರುದ್ರನೆಂದು ಪಾಲಿಸಿದ ೩

ಕರಿಯಾದಿಮೂಲಗೆ ಮೊರೆಯಿಡಲದ ಕೇಳಿ
ಸುರರು ತಾವಲ್ಲವೆಂದು ಸುಮ್ಮನಿರಲು
ಗರುಡನ ಹೆಗಲೇರಿ ಹರಿ ಬೇಗದಿ ಬಂದು
ಕರಿರಾಜನ ಅಂದು ತಾ ರಕ್ಷಿಸಿದ ೪

ಹರಿಹರ ವಿರಂಚರ ಲೋಕಗಳಿಗೆ ಪೋಗಿ
ಹರಿಹರ ವಿರಂಚರ ಪರಿಗಳನು
ಹರುಷದಿ ಭೃಗುಮುನಿ ತಿಳಿದು ಬೇಗದಿ ಬಂದು
ಸರಸ್ವತಿ ತೀರದ ಋಷಿಗಳಿಗೊರೆದ ೫

ನಾಮತ್ರಯ ಪ್ರಭಾವದಿಂದಲಿ ಬೇಗ
ಸೋಮಧರನು ವಿಷವನೆ ಧರಿಸಿ
ರಾಮನಾಮವೆಂಬ ಅಮೃತ ಪಾನದಿಂ
ಕಾಮಾರಿ ತಾ ಮೃತ್ಯುಂಜಯನಾದ ೬

'ಸಂದೇಹಾತ್ಮಾ ವಿನಶ್ಯತಿ' ಎಂದು ಶ್ರುತಿ
ವೃಂದಗಳೆಲ್ಲವು ಸಾರುತಿರೆ
ಪುರಂದರವಿಠಲ ಸರ್ವೋತ್ತಮನೆಂಬಲ್ಲಿ
ಸಂದೇಹವ ಬಿಟ್ಟು ಸುಖಿಸೆಲೊ ಜೀವ ೭

ಅಂದು—ಸಮುದ್ರಮಥನದ ಸಂದರ್ಭದಲ್ಲಿ.

ಸರಸಿಜೋದ್ಭವ—ಬ್ರಹ್ಮನು ತ್ರಿವಿಕ್ರಮಾವತಾರದ ಸಂದರ್ಭದಲ್ಲಿ ಹರಿಯ ಪಾದಗಳನ್ನು ತೊಳೆಯಲು ಅದೇ ನೀರು ಗಂಗೆಯಾಗಿ ಹರಿಯತೊಡಗಿತು ; ಮುಂದೆ ಭಗೀರಥನ ತಪಸ್ಸಿಗೆ ಮೆಚ್ಚಿ ಗಂಗೆ ದೇವಲೋಕದಿಂದ ಇಳಿದು ಬರುವಾಗ ಶಿವನ ತಲೆಯ ಮೇಲೆ ನಿಂತದ್ದು ಇಲ್ಲಿನ ಪ್ರಸಂಗ.

ವೃಕನೆಂಬ—ಭಸ್ಮಾಸುರನೆಂದು ಹೆಸರಾದ ಶಿವಭಕ್ತ.

ಕರಿಯಾದಿಮೂಲಗೆ—ಗಜೇಂದ್ರಮೋಕ್ಷದ ಕತೆ.

ಹರಿಹರ ವಿರಂಚರ—ಸರಸ್ವತೀ ನದಿಯ ದಂಡೆಯ ಮೇಲೆ ಋಷಿಗಳು ಯಜ್ಞ ಮಾಡುತ್ತಿರುವಾಗ, ಪ್ರಧಾನ ಹವಿಸ್ಸನ್ನು ಯಾವ ದೇವತೆಗೆ ಸಲ್ಲಿಸಬೇಕೆಂದು ವಿವಾದವುಂಟಾಗಿ ಭೃಗುಮುನಿಯು ಬ್ರಹ್ಮ, ವಿಷ್ಣು, ಶಿವರಲ್ಲಿ ಯಾರು ಅಧಿಕರೆಂದು ನಿರ್ಣಯಿಸಲು ತೊಡಗಿದ ಸಂದರ್ಭ.

ನಾಮತ್ರಯ...—ಸಮುದ್ರಮಥನದ ಸಂದರ್ಭದಲ್ಲಿ ಕಾಲಕೂಟವಿಷವು ಹೊರಬಂದು ದೇವತೆಗಳಿಗೆ ತೊಂದರೆಯಾದಾಗ ಶಿವನು ಅದನ್ನುಂಡು ದೇವತೆಗಳನ್ನು ಕಾಪಾಡಿದ ಕತೆ.

ಕಾಮಾರಿ— ಶಿವ (ಮನ್ಮಥನಿಗೆ ಶತ್ರು).

'ಸಂದೇಹಾತ್ಮಾ ವಿನಶ್ಯತಿ'—ಭಗವದ್ಗೀತೆಯ 'ಸಂಶಯಾತ್ಮಾ ವಿನಶ್ಯತಿ' ಎಂಬ ವಾಕ್ಯದ ಪಾಠಾಂತರ. ಇದೇ ಆರಭಿರಾಗದ ಇನ್ನೊಂದು ಕೃತಿಯಲ್ಲೂ ಬಂದಿದೆ.

## ೮೭

ನಾದನಾಮಕ್ರಿಯೆ ಆದಿ

ಹೊಡೀ ನಗಾರಿ ಮೇಲೆ ಕೈಯ ಘಡಘಡ
ಹೊಡೀ ನಗಾರಿ ಮೇಲೆ ಕೈಯ ಪ

ಮೃಡವಂದ್ಯನ ಪಾದ ಬಿಡದೆ ಭಜಿಪರಘ
ಬಿಡಿಸಿ ಪೊರೆವ ಜಗದೊಡೆಯನೆ ಪರನೆಂದು ಅ

ವೇದಗಮ್ಯ ಸಕಲಾರ್ತಿ ನಿವಾರಕ
ಮೋದವೀವ ಮಧುಸೂದನ ಪರನೆಂದು ೧

ನಿಷ್ಠೆಯಿಂದ ಮನಮುಟ್ಟಿ ಭಜಿಪ ಜನ
ರಿಷ್ಟವ ಕೊಡುವ ಶ್ರೀ ಕೃಷ್ಣನೆ ಪರನೆಂದು ೨

ವಂದಿಪ ಜನರಘವೃಂದ ಕಳೆದು ಮುದ
ದಿಂದ ಪೊರೆವ ಮುಕುಂದನೆ ಪರನೆಂದು ೩

ವಾಸುದೇವ ತನ್ನ ದಾಸಜನರ ಹೃದಯ
ವಾಸನಾಗಿ ಇಹ ಶ್ರೀಶನೆ ಪರನೆಂದು ೪

ಇಂದಿರೇಶ ಪರನೆಂದು ಭಜಿಸುವರ
ಬಂದು ಕಾಯ್ವ ಗೋವಿಂದನೆ ಪರನೆಂದು ೫

ಗಾನಲೋಲ ತನ್ನ ಧ್ಯಾನಿಸುವರನೆಲ್ಲ
ಮಾನದಿಂದ ಕಾಯ್ವ ಶ್ರೀನಿಧಿ ಪರನೆಂದು ೬

ಈ ಪೃಥ್ವಿಯೊಳು ವ್ಯಾಪಕನಾಗಿಹ
ಶ್ರೀಪತಿ ಪುರಂದರವಿಠಲನೆ ಪರನೆಂದು ೭

ಮೃಡವಂದ್ಯ—ರುದ್ರನಿಂದ ಪೂಜಿತನಾದ.

ವೇದಗಮ್ಯ—'ಸದಾಗಮ್ಯೈಕವೇದ್ಯಂ' ಎಂಬ ಮಧ್ವಾಚಾರ್ಯರ ಮಾತಿನ ಛಾಯೆ.

ಸಕಲಾರ್ತಿನಿವಾರಕ—ಎಲ್ಲ ದುಃಖಗಳನ್ನೂ ತೊಲಗಿಸುವವನು.

ಮೋದವೀವ—ಎಲ್ಲ ಜೀವರಿಗೆ ಅವರವರ ಯೋಗ್ಯತಾನುಸಾರವಾಗಿ ಆನಂದವನ್ನು ನೀಡುವವನು.

ಅಘವೃಂದ—ಪಾಪಗಳ ಗುಂಪು.

ಹೃದಯವಾಸ—ಬಿಂಬರೂಪಿಯಾಗಿ ; 'ಹೃದಿ ತಿಷ್ಠಾಮಿ' 'ಹೃದ್ದೇಶೇಽರ್ಜುನ ತಿಷ್ಠತಿ' ಮೊದಲಾದ ಸ್ಮೃತಿವಚನಗಳಿವೆ.

ಗಾನಲೋಲ—ನಾರದನಿಗೆ ನಾರಾಯಣನು ಹೇಳಿದ ಮಾತು, 'ಮದ್ಭಕ್ತಾ ಯತ್ರ ಗಾಯಂತಿ ತತ್ರತಿಷ್ಠಾಮಿ'.

ಶ್ರೀನಿಧಿ ಪರನೆಂದು—ಲಕ್ಷ್ಮಿಯನ್ನು ತನ್ನ ವಕ್ಷಃಸ್ಥಲದಲ್ಲೇ ನೆಲೆಗೊಳಿಸಿರುವ ನಾರಾಯಣನೇ ಸರ್ವೋತ್ತಮನೆಂದು.

ಈ ಪೃಥ್ವಿಯೊಳು ವ್ಯಾಪಕನಾಗಿಹ—'ಸ ಭೂಮಿಂ ವಿಶ್ವತೋ ವೃತ್ವಾ' ಎನ್ನುವ ಪುರುಷಸೂಕ್ತದ ಮಾತಿನ ಛಾಯೆ.



ಮಧ್ಯಮಾವತಿ ಅಟ್ಟ

ದುರಿತಗಜಕೆ ಪಂಚಾನನ ನರ
ಹರಿಯೆ ದೇವರ ದೇವ ಗಿರಿಯ ಗೋವಿಂದ ಪ

ಹೆತ್ತ ಮಕ್ಕಳು ಮರುಳಾದರೆ ತಾಯ್ತಂದೆ
ಎತ್ತದೆ ನೆಲಕೆ ಬಿಸುಡುವರೆ ಗೋವಿಂದ ೧

ಅರಸು ಮುಟ್ಟಲು ದಾಸಿ ರಂಭೆಯು ದೇವ
ಪರುಷ ಮುಟ್ಟಲು ಲೋಹ ಹೊನ್ನು ಗೋವಿಂದ ೨

ಹೆಸರುಳ್ಳ ನದಿಗಳನೊಳಗೊಂಬ ಜಲಧಿಯು
ಬಿಸುಡುವನೆ ಕಾಲು ಹೊಳೆಗಳನ್ನು ಗೋವಿಂದ ೩

ಮುನ್ನ ಮಾಡಿದ ಕರ್ಮ ಬೆನ್ನಟ್ಟಿ ಬಂದರೆ
ನಿನ್ನನ್ನು ಮರೆಹೋಗಲೇಕೆ ಗೋವಿಂದ ೪

ಸ್ಮರಣೆಮಾತ್ರಕಜಾಮಿಳಗೆ ಮುಕ್ತಿಯನಿತ್ತೆ
ವರದ ಪುರಂದರವಿಠಲ ಗೋವಿಂದ ೫

[ಜೀವನು ತನ್ನ ನಿಯಾಮಕರಾದ ತತ್ತ್ವೇಶರಿಗೆಲ್ಲ ನಿಯಾಮಕನಾಗಿರುವ ಹರಿಯನ್ನು ಸರ್ವೋತ್ತಮನೆಂದು ಬಗೆದು, ಅವನಲ್ಲೇ ಮೊರೆ ಹೋಗುವನು. ತತ್ತ್ವೇಶರೆಲ್ಲ ಹೆಸರುಳ್ಳ ನದಿಗಳು ; ಮುಕ್ತಿಯೋಗ್ಯರಾದ ಮನುಷ್ಯಜೀವರು ಕಾಲು ಹೊಳೆಗಳು, ಸಣ್ಣ ಸಣ್ಣ ಸೀಳು ನದಿಗಳು. ಇವೆಲ್ಲ ಹೆಸರುಳ್ಳ ನದಿಗಳನ್ನು ಸೇರಿ, ಕ್ರಮವಾಗಿ ಸಮುದ್ರವನ್ನೇ ಸೇರುವಂತೆ ಜೀವರು ತಮ್ಮ ವ್ಯಾಪಾರಗಳನ್ನೆಲ್ಲ ತತ್ತ್ವಾಭಿಮಾನಿ ದೇವತೆಗಳ ಮೂಲಕ ಸರ್ವೋತ್ತಮನಾದ ಹರಿಗೇ ಸಲ್ಲಿಸುವರು.]

ದುರಿತಗಜಕೆ ಪಂಚಾನನ— ಪಾಪವೆಂಬ ಆನೆಗೆ ಸಿಂಹದಂತಿರುವವನು.

ದೇವರ ದೇವ—ಎಲ್ಲ ದೇವತೆಗಳಿಗೂ ನಿಯಾಮಕನಾಗಿರುವವನು.

ಪರುಷ—ಕಬ್ಬಿಣವನ್ನು ಬಂಗಾರವಾಗಿಸುವ ಸ್ಪರ್ಶಮಣಿ.

ಆನಂದಭೈರವಿ ಚಾಪು

ಹೊಯ್ಯೋ ಹೊಯ್ಯೋ ಹೊಯ್ಯೋ ಡಂಗುರವ
ಅಯ್ಯ ಕೃಷ್ಣಯ್ಯನು ಪರನೆಂದು ಪ

ಭಯುವ ಬಿಡಿಸಿ ಸುರರ ಕಾದವರಾರಯ್ಯ
ಜಯನಾಮಕ ತಂದೆ ಪುರಂದರವಿಠಲನಲ್ಲದೆ ಅ

ಹರಿಗೆ ಹಾಸಿಗೆ ಆಗಬೇಕು ಎಂದೆನುತಲಿ
ಹರನು ಬಿಸುಕಾಲ ತಪ ಗೆಯ್ದು
ಸಿರಿ ಮೊದಲಾದವರು ನುತಿಸುವ ಆ ವಸ್ತು
ಪರವಸ್ತು ಎನ ತಂದೆ ಪುರಂದರವಿಠಲನ ೧

ತಾಮಸ ಪುರಾಣ ತಾಮಸ ಜೀವರಿಗೆ
ನೇಮಿಸಿ ಇಹನಾ ಕೃಷ್ಣಯ್ಯ
ಕ್ಷೇಮ ಬಯಸಲು ನೀನೊದರಯ್ಯ ಪರನೆಂದು
ಕಾಮಿತಾರ್ಥವನೀವ ತಂದೆ ಪುರಂದರವಿಠಲನ ೨

ಎಷ್ಟು ಅರಸಲು ಸಮರು ಆತಗೆ ಇಲ್ಲವೋ
ಅಷ್ಟು ಕರುಣಿಯ ಕಾಣೆನೊ
ಇಷ್ಟರ ಮನೆಯಲ್ಲಿ ಕುಣಿಕುಣಿದಾಡುವ
ಅಷ್ಟಲಕ್ಷ್ಮಿಯರೊಡನೆ ತಂದೆ ಪುರಂದರವಿಠಲ ೩

ಭಯುವ ಬಿಡಿಸಿ—ಸಜ್ಜನರಿಗೆ ದುರುಳರಿಂದ ಒದಗುವ ಆತಂಕವನ್ನು ಕೊನೆಗಾಣಿಸಿ.

ಜಯನಾಮಕ—ವಿಷ್ಣುವಿನ ಹೆಸರುಗಳಲ್ಲೊಂದು 'ಜಯ'.

ಹರಿಗೆ ಹಾಸಿಗೆ—ಶೇಷನು ರುದ್ರಾಂಶನೆಂಬ ಕಲ್ಪನೆ. ದೇವತಾತಾರತಮ್ಯದಲ್ಲಿ ಗರುಡ, ಶೇಷ, ರುದ್ರರು ಒಂದೇ ಕಕ್ಷೆಯವರು (ನೋಡಿ ತಾರತಮ್ಯ ಸ್ತೋತ್ರದ ಪ್ರಸ್ತಾವನೆ).

ತಾಮಸ ಪುರಾಣ—ಹದಿನೆಂಟು ಪುರಾಣಗಳಲ್ಲಿ ಸಾತ್ತ್ವಿಕವಾದುವು ಆರು (ವಿಷ್ಣು ಪರ), ರಾಜಸವಾದವು ಆರು (ಇತರ ದೇವತಾಪರ), ತಾಮಸವಾದುವು ಆರು. ಕಡೆಯ ಗುಂಪಿಗೆ ಸೇರಿದ ಪುರಾಣಗಳು ದುಷ್ಟರಾದವರನ್ನು ಪ್ರಲೋಭಿಸಿ ಅವರನ್ನು ಅಧೋಲೋಕಕ್ಕೆತಳ್ಳುವುವು ಜನರಲ್ಲಿ ಸಾತ್ತ್ವಿಕರು (ಉತ್ತಮರು), ರಾಜಸರು (ಮಧ್ಯಮವರ್ಗ), ತಾಮಸರು (ಅಧಮರು) ಎಂದು ಮೂರು ವರ್ಗಗಳಿದ್ದು ಮೂರು ಬಗೆಯ ಪುರಾಣಗಳು ಅವರಿಗೆ ವಿಹಿತವಾಗಿವೆ.

ಕ್ಷೇಮ ಬಯಸಲು—ಜನರಿಗೆ ಕ್ಷೇಮವೆಂದರೆ ಅಭ್ಯುದಯ ನಿಃಶ್ರೇಯಸಗಳು.

ಅಷ್ಟಲಕ್ಷ್ಮಿಯರು—ಲಕ್ಷ್ಮಿಯ ಎಂಟು ರೂಪಗಳು: ಆದಿಲಕ್ಷ್ಮಿ, ವೀರಲಕ್ಷ್ಮಿ, ಧಾನ್ಯಲಕ್ಷ್ಮಿ, ಧನಲಕ್ಷ್ಮಿ, ವಿಜಯಲಕ್ಷ್ಮಿ, ಗಜಲಕ್ಷ್ಮಿ, ಐಶ್ವರ್ಯಲಕ್ಷ್ಮಿ, ಮತ್ತು ಸಂತಾನಲಕ್ಷ್ಮಿ.



ನಾಟಕುರಂಜಿ ಆದಿ

ಅಲ್ಲಿ ನೋಡಲು ರಾಮ ಇಲ್ಲಿ ನೋಡಲು ರಾಮ
ಎಲ್ಲೆಲ್ಲಿ ನೋಡಿದರಲ್ಲಿ ರಾಮರೂಪ ಪ

ರಾವಣನ ಮೂಲಬಲವ ಕಂಡು ಕಪಿಸೇನೆ
ಆವಾಗಲೆ ಬೆದರಿ ಓಡಿದವು
ಈ ವೇಳೆ ನರನಾಗಿ ಇರಬಾರದೆಂದೆಣಿಸಿ
ದೇವ ರಾಮಚಂದ್ರ ಬಹುರೂಪ ತಾನಾದ ೧

ಅವನಿಗೆ ಇವ ರಾಮ ಇವನಿಗೆ ಅವ ರಾಮ
ಬುವಿಯೊಳಗೆ ಬೇರೆ ರೂಪವುಂಟೆ
ಅವನಿಯೊಳಿರುತಿಪ್ಪ ದುರುಳ ಜನರೆಲ್ಲ
ಅವರವರೆ ಹೊಡೆದಾಡಿ ಹತರಾಗಿ ಹೋದರು ೨

ಹನುಮಾದಿ ಸಾಧು ಜನರು ಅಪ್ಪಿಕೊಂಡು
ಕುಣಿಕುಣಿದಾಡಿದರು ಅತಿ ಹರುಷದಲಿ
ಕ್ಷಣದಲ್ಲಿ ಪುರಂದರವಿಠಲರಾಯನು
ಕೊನೆಗೊಡೆಯನು ತಾನೊಬ್ಬನಾಗಿ ನಿಂತ ೩

[ವಾಲ್ಮೀಕಿ ರಾಮಾಯಣದಲ್ಲಿ ರಾವಣನು ಸೀತಾಪಹರಣಕ್ಕಾಗಿ ಮಾರೀಚನ ಸಹಾಯವನ್ನು ಬೇಡಿದಾಗ ಮಾರೀಚನು ಹಿಂದೆ ರಾಮನಿಂದ ತನಗೊದಗಿದ ಬವಣೆಯನ್ನು ವರ್ಣಿಸುತ್ತ ರಾಮನು ಬಿಟ್ಟ ಬಾಣದಿಂದ ತಾನು ತಲ್ಲಣಿಸಿ ಎಲ್ಲೆಲ್ಲಿಯೂ ರಾಮನನ್ನೇ ಕಂಡು ಭಯಪಟ್ಟೆನೆಂದು ಹೇಳುವ ಪ್ರಸಂಗ (ಅರಣ್ಯಕಾಂಡ, ೩೯ನೆಯ ಸರ್ಗ)

ವೃಕ್ಷೇ ವೃಕ್ಷೇ ಚ ಪಶ್ಯಾಮಿ ಚೀರಕೃಷ್ಣಾಜಿನಾಂಬರಂ।
ಗೃಹೀತಧನುಷಂ ರಾಮಂ ಪಾಶಹಸ್ತಮಿವಾಂತಕಂ।
ಅಪಿ ರಾಮಸಹಸ್ರಾಣಿ ಭೀತಃ ಪಶ್ಯಾಮಿ ರಾವಣ॥
ರಾಮಭೂತಮಿದಂ ಸರ್ವಮರಣ್ಯಂ ಪ್ರತಿಭಾತಿ ಮೇ
ರಾಮಮೇವ ಹಿ ಪಶ್ಯಾಮಿ ರಹಿತೇ ರಾಕ್ಷಸಾಧಿಪ॥

ಇದೇ ಪ್ರಸಂಗ ಯುದ್ಧಕಾಂಡದಲ್ಲಿಯೂ ಬರುತ್ತದೆ. ಇದನ್ನು ಕುರಿತು ಈ ಪದ ರಚಿತವಾಗಿದೆ. ಆದರೆ ವಾಲ್ಮೀಕಿ ರಾಮಾಯಣದಲ್ಲಿ ಇದು ಪ್ರಕ್ಷಿಪ್ತ ಭಾಗ. ರಾಮಾವತಾರದಲ್ಲಿ ಹರಿಯ ಮಹಿಮೆಯನ್ನು ಹೇಳುವುದು ಈ ಪದದ ಉದ್ದೇಶ. ಸರ್ವವ್ಯಾಪಕನಾಗಿ ದುಷ್ಟ ನಿಗ್ರಹ, ಶಿಷ್ಟಪರಿಪಾಲನೆಗಳನ್ನು ನಡೆಸುವವನು ಹರಿಯೇ.]

ನಟ್ಟ ಚಾಪು

ಜಯ ಜಾನಕೀ ಕಾಂತ ಜಯ ಸಾಧುಜನ ವಿನುತ ಪ

ಜಯತು ಮಹಿಮಾನಂತ ಜಯ ಭಾಗ್ಯವಂತ ಜಯ ಜಯ ಅ

ದಶರಥನ ಮಗ ವೀರ ದಶಕಂಠ ಸಂಹಾರ
ಪಶುಪತೀಶ್ವರ ಮಿತ್ರ ಪಾವನ ಚರಿತ್ರ
ಕುಸುಮಬಾಣ ಸ್ವರೂಪ ಕುಶಲಕೀರ್ತಿ ಕಲಾಪ
ಅಸಮ ಸಾಹಸ ಶಿಕ್ಷ ಅಂಬುಜದಳಾಕ್ಷ ೧

ಸಾಮಗಾನವಿಲೋಲ ಸಾಧುಜನ ಪರಿಪಾಲ
ಕಾಮಿತಾರ್ಥಪ್ರದಾತ ಕೀರ್ತಿ ಸಂಜಾತ
ಸೋಮಸೂರ್ಯಪ್ರಕಾಶ ಸಕಲ ಲೋಕಾಧೀಶ
ಶ್ರೀ ಮಹಾ ರಘುವೀರ ಸಿಂಧುಗಂಭೀರ ೨

ಸಕಲ ಶಾಸ್ತ್ರ ವಿಚಾರ ಶರಣಜನ ಮಂದಾರ
ವಿಕಸಿತಾಂಬುಜವದನ ವಿಶ್ವಮಯಸದನ
ಸುಕೃತ ಮೋಕ್ಷಾಧೀಶ ಸಾಕೇತಪುರವಾಸ
ಭಕುತವತ್ಸಲ ರಾಮ ಪುರಂದರವಿಠಲ ೩.

[ರಾಮಾವತಾರದ ಸ್ವಾರಸ್ಯವನ್ನು ಹೇಳುವ ಪದ.]

ಪಶುಪತೀಶ್ವರಮಿತ್ರ—ರುದ್ರನಿಗೆ ಸ್ನೇಹಿತ.

ಕುಸುಮಬಾಣಸಮ—ಮನ್ಮಥನಂತೆ ಚೆಲುವ.

ಸಿಂಧುಗಂಭೀರ—ವಾಲ್ಮೀಕಿಯ 'ಸಮುದ್ರ ಇವ ಗಾಂಭೀರ್ಯೇ' ಎನ್ನುವ ನಿರೂಪಣೆಯ ಛಾಯೆ.

ವಿಕಸಿತಾಂಬುಜವದನ—ಅರಳಿದ ತಾವರೆ ಹೂವಂತಿರುವ ಮೊಗ.

ವಿಶ್ವಮಯ ಸದನ—ವಿಶ್ವವೆಲ್ಲ ಮನೆಯಾಗಿ ಉಳ್ಳವನು (ಸರ್ವವ್ಯಾಪಿ).

ಸುಕೃತ ಮೋಕ್ಷಾಧೀಶ—ಪುಣ್ಯಮಾಡಿದವರಿಗೆ ಸದ್ಗತಿಯನ್ನು ಕಾಣಿಸುವವನು.

ಪಂತುವರಾಳಿ ಅಟ್ಟ

ಹೊಯ್ಕಲೊ ಡಂಗುರವ, ಜಗ
ದಯ್ಯನಯ್ಯ ಶ್ರೀಹರಿಯಲ್ಲದಿಲ್ಲವೆಂದು ಪ

ಅಷ್ಟೈಶ್ವರ್ಯದ ಲಕುಮಿಯ ಅರಸೆಂದು
ಸೃಷ್ಟಿ ಸ್ಥಿತಿಲಯಾದ್ಯಷ್ಟಕರ್ತನೆಂದು
ಘಟ್ಟ್ಯಾಗಿದನು ತಿಳಿದು ಹರಿ ಎನ್ನದವರೆಲ್ಲ
ಭ್ರಷ್ಟರಾದರು ಇಹಪರಕೆ ಬಾಹ್ಯರೆಂದು ೧

ಹರನೆನ್ನದೆ ಹರಿಹರಿಯೆಂದ ಬಾಲನ
ಕರುಣವಿಲ್ಲದೆ ಪಿತ ಕಾಡುತಿರೆ
ತರಳನ ಮೊರೆ ಕೇಳಿ ನರಮೃಗರೂಪದಿ
ಹರಿಯ ನಿಂದಕನ ಸಂಹರಿಸಿದ ಮಹಿಮೆಯ ೨

ಕರಿ ಆದಿಮೂಲನೆ ಕಾಯೆಂದು ಮೊರೆಯಿಡೆ
ಸುರನಿಕರವು ನೋಡೆ ಬೆರಗಾಗಿ
ಭರದಿಂದಲಾಕ್ಷಣ ಗರುಡನೇರಿ ಬಂದು
ಕರಿರಾಜನ ಕಾಯ್ದ ಪರದೈವ ಹರಿಯೆಂದು ೩

ಸುರಪಗೊಲಿದು ಬಲಿಯ ಶಿರ ತುಳಿಯುವಾಗ
ಸುರನದಿ ಸೃಜಿಸಿದ ಹರಿಪಾದವ
ಪರಮೇಷ್ಠಿ ತೊಳೆಯಲಾ ಪವಿತ್ರೋದಕವನು
ಹರ ತನ್ನ ಶಿರದಲ್ಲಿ ಧರಿಸಿದ ಮಹಿಮೆಯ ೪

ಗರಳ ಜ್ವಾಲೆಗೆ ಅಂಜಿ ಸಿರಿರಾಮರಾಮನೆಂದು
ಸ್ಮರಿಸುತಿರಲು ಉಮೆಯ ಅರಸನಾಗಿ
ಕೊರಳು ಶೀತಳವಾಗೆ ಗಿರಿಜೆಗೊಲಿದು ಆ
ವರ ರಾಮಮಂತ್ರವನೊರೆದಂಥ ಮಹಿಮೆಯ ೫

ಮಾನಸ ಪೂಜೆಗೆ ಮೆಚ್ಚಿ ಶಿವ ಬಂದು
ಬಾಣನ ಬಾಗಿಲ ಕಾಯ್ದಿರಲು
ದಾನವಾಂತಕ ಸಾಸಿರ ತೋಳ ಕಡಿವಾಗ
ಮೌನದಿಂದೊಪ್ಪಿಕೊಟ್ಟ ಶಿವನು ಎಂದು ೬

ಭಕ್ತಿಗೊಲಿದು ಶಿವ ಭಸ್ಮಾಸುರಗೆ ವರವಿತ್ತ
ಭಕ್ತನ ಭಯದಿಂದ ಓಡುತಿರೆ
ಯುಕ್ತಿಯಿಂದಸುರನ ಸುಟ್ಟು ಶಿವನ ಕಾಯ್ದ
ಶಕ್ತನು ಶ್ರೀಹರಿ ಅಲ್ಲದಿಲ್ಲವೆಂದು ೭

ಹರ ಬ್ರಹ್ಮರ ವರದಿಂದ ಸುರರನು ದಶಶಿರ
ಸೆರೆಯ ಹಿಡಿದು ಸೇವೆಯ ಕೊಳುತಿರಲು
ಶರಧಿಯ ದಾಟಿ ರಾವಣನ ಸಂಹರಿಸಿ
ಸುರರಿಗಭಯವಿತ್ತ ಪರದೈವ ಹರಿಯೆಂದು ೮

ಜಗದುದ್ಧಾರನು ಜಗವ ಪೊರೆವನೀತ
ಜಗ ಬ್ರಹ್ಮಪ್ರಲಯದಿ ಮುಳುಗಲಾಗ
ಮಗುವಾಗಿ ಜಗವನುದ್ಧರಿಸಿ ಪವಡಿಸಿ ಮತ್ತೆ
ಜಗದ ಜನಕ ಪುರಂದರವಿಠಲನೆಂದು ೯

ಜಗದಯ್ಯನಯ್ಯ—ಜಗತ್ತಿಗೆ ಸೃಷ್ಟಿಕರ್ತನಾದ ಬ್ರಹ್ಮನ ತಂದೆ

ಅಷ್ಟೈಶ್ವರ್ಯ—ಅನ್ನ, ಅರ್ಥ, ವಿಭವ, ತಾರುಣ್ಯ, ಲಾವಣ್ಯ, ಅಹಂಕಾರ, ಸಾಹಸ, ಪ್ರಭುತ್ವ ಎಂಬ ಎಂಟು ಒಡೆತನಗಳು

ಅಷ್ಟಕರ್ತ—ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮುಕ್ತಿ ಇವು ಎಂಟು ಮಹಾಕಾರ್ಯಗಳು ; ಇವನ್ನೆಲ್ಲ ನಡೆಸುವವನು ವಿಷ್ಣುವೇ.

ಇಹ ಪರಕೆ ಬಾಹ್ಯರು—ಬದುಕಿರುವಾಗ ಅಭ್ಯುದಯ, ಅನಂತರ ನಿಃಶ್ರೇಯಸ ಎಂಬ ಎರಡೂ ಪ್ರಯೋಜನಗಳನ್ನು ಕಳೆದುಕೊಂಡವರು.

ಹರನೆನ್ನದೆ...—ಪ್ರಹ್ಲಾದನ ಕತೆ.

ಕರಿ ಆದಿಮೂಲನೆ . —ಗಜೇಂದ್ರ ಮೋಕ್ಷದ ಪ್ರಸಂಗ

ಸುರಪಗೊಲಿದು.. —ವಾಮನಾವತಾರದ ಸಂದರ್ಭ , ತ್ರಿವಿಕ್ರಮನಾಗಿ ಸ್ವರ್ಲೋಕವನ್ನು ತನ್ನ ಒಂದು ಕಾಲಿಂದ ಅಳೆಯುವಾಗ, ಅವನ ಬಲಗಾಲ ಉಗುರು ಬ್ರಹ್ಮಾಂಡಕವಾಟವನ್ನು ಭೇದಿಸಿತೆಂದೂ, ಅದರಿಂದ ಗಂಗೆ ಹುಟ್ಟಿ ನದಿಯಾಗಿ ಹರಿದಳೆಂದೂ, ಬ್ರಹ್ಮನು ತ್ರಿವಿಕ್ರಮನ ಪಾದಗಳನ್ನು ತೊಳೆದನಾಗಿ ಗಂಗೆ ಪವಿತ್ರ ತೀರ್ಥವಾಯಿತೆಂದೂ ಕತೆ. ತನ್ನ ಪೂರ್ವಜರ ಸದ್ಗತಿಗೆಂದು ಭಗೀರಥನು ಗಂಗೆಗಾಗಿ ತಪಸ್ಸು ಮಾಡಿದಾಗ ಆಕೆ ರಭಸದಿಂದ ಭೂಮಿಯ

ಮೇಲೆ ಧುಮ್ಮಿಕ್ಕಲು, ಹಿಮಾಲಯ ಪ್ರಾಂತ್ಯದಲ್ಲಿ ಶಿವನು ನದಿಯನ್ನು ತನ್ನ ಜಡೆಯಲ್ಲಿ ಅಡಗಿಸಿದನೆಂದೂ ವಿವರ.

ಗರಳ ಜ್ವಾಲೆಗೆ ಅಂಜಿ...—ಸಮುದ್ರಮಥನವಾಗುವಾಗ ಕಾಲಕೂಟ ವಿಷ ಹೊರ ಬಂದು ದೇವತೆಗಳನ್ನು ಹಿಂಸಿಸಲು ಶಿವನು ಹರಿಯ ಆಣತಿಯಂತೆ ಶ್ರೀರಾಮ ನಾಮವನ್ನು ಸ್ಮರಿಸಿ ವಿಷವನ್ನುಂಡನೆಂದು ಕತೆ. ಅನಂತರ 'ಶ್ರೀರಾಮ ರಾಮೇತಿ ರಾಮೇ ರಮೇ ಮನೋರಮೆ' ಎಂಬ ಶ್ಲೋಕದಿಂದ ಪಾರ್ವತಿಗೆ ರಾಮ ನಾಮದ ಮಹಿಮೆಯನ್ನು ಹೇಳಿದನಂತೆ.

ಮಾನಸಪೂಜೆಗೆ . —ಬಾಣನೆಂಬ ರಾಕ್ಷಸ, ಶಿವಭಕ್ತ ; ಬಲಿ ಚಕ್ರವರ್ತಿಯ ಮಗ ; ಸಾವಿರತೋಳುಗಳುಳ್ಳವನು. ಅವನ ಭಕ್ತಿಗೆ ಮೆಚ್ಚಿ ಶಿವನು ಅವನ ದ್ವಾರಪಾಲಕನಾಗಿರಲು ಸಮ್ಮತಿಸಿದ್ದ. ಈ ರಾಕ್ಷಸನ ಮಗಳಾದ ಉಷೆಯನ್ನು ಕೃಷ್ಣನ ಮಗ ಅನಿರುದ್ಧನು ಮದುವೆಯಾದ ಸಂದರ್ಭದಲ್ಲಿ ಕೃಷ್ಣನಿಗೂ ಬಾಣಾಸುರನಿಗೂ ಕಾಳಗ ನಡೆದು ಕೃಷ್ಣನು ಬಾಣಾಸುರನನ್ನು ಕೊಂದನು. ಇದು ಶಿವನಿಗೆ ಸಮ್ಮತವೇ ಆಗಿದ್ದಿತು. ಏಕೆಂದರೆ ಬಾಣಾಸುರನು ಗರ್ವ ದಿಂದ ಪ್ರಪಂಚವನ್ನು ತಲ್ಲಣಗೊಳಿಸತೊಡಗಿದ್ದ.

ಭಕ್ತಿಗೊಲಿದು—ಭಸ್ಮಾಸುರನ ಕತೆ ; ಶಿವನಿಂದ ವರವನ್ನು ಪಡೆದು, ಆ ವರದ ಬಲ ದಿಂದ ಶಿವನನ್ನೇ ಕಾಡತೊಡಗಿದಾಗ ವಿಷ್ಣುವು ಮೋಹಿನಿಯ ರೂಪವನ್ನು ತಳೆದು ಉಪಾಯದಿಂದ ಭಸ್ಮಾಸುರನು ತನ್ನಿಂದ ತಾನೇ ಸಾಯುವಂತೆ ಮಾಡಿದನು.

ಹರಬ್ರಹ್ಮರ ವರದಿಂದ—ರಾಮಾವತಾರದ ಕತೆ.

ಜಗ ಬ್ರಹ್ಮಪ್ರಳಯದಿ—ಪ್ರಳಯವು ದೈನಂದಿನ, ಬ್ರಹ್ಮ, ಆತ್ಯಂತಿಕ, ನಿತ್ಯ ಮತ್ತು ನೈಮಿತ್ತಿಕ ಎಂದು ಐದು ಬಗೆ. ಬ್ರಹ್ಮಪ್ರಳಯವೆಂದರೆ ಕಲ್ಪಾಂತದಲ್ಲಿ ಆಗುವುದು. ಆಗ ಬ್ರಹ್ಮಾಂಡದ ವ್ಯಾಪಾರಕ್ಕೆ ನಿಯುಕ್ತರಾದ ತತ್ತ್ವೇಶರೆಲ್ಲ ತಾರತಮ್ಯಕ್ರಮದಿಂದ ಲೀನರಾಗಿ ಕಡೆಗೆ ಬ್ರಹ್ಮನಲ್ಲಿ ಅಡಗುತ್ತಾರೆ. ಬ್ರಹ್ಮನು ಆಗ ವಿರಜಾನದಿಗೆ ಸ್ನಾನಕ್ಕೆ ಹೋಗಿ ತನ್ನ ಲಿಂಗಭಂಗವನ್ನು ಪಡೆದುಕೊಂಡು ಮುಕ್ತನಾಗುತ್ತಾನೆ. ಆಗ ಬ್ರಹ್ಮಾಂಡವೆಲ್ಲ ಅವ್ಯಾಕೃತವಾಗಿ ನೀರಿನಿಂದ ತುಂಬಿಕೊಳ್ಳುತ್ತದೆ. ಲಕ್ಷ್ಮಿಯ ಒಂದು ರೂಪವಾದ ದುರ್ಗೆ ಕತ್ತಲೆಯಂತೆ ತೋರಿಕೊಳ್ಳುತ್ತದೆ ; ಇನ್ನೊಂದು ರೂಪವಾದ ಶ್ರೀ ನೀರಿನಂತೆ ತೋರಿ ಕೊಳ್ಳುತ್ತದೆ ; ಮೂರನೆಯ ರೂಪವಾದ ಭೂ ಆಲದೆಲೆಯಂತೆ ಕಾಣಿಸಿ ಕೊಳ್ಳುತ್ತದೆ. ಬ್ರಹ್ಮಸಹಿತವಾದ ಬ್ರಹ್ಮಾಂಡವನ್ನೆಲ್ಲ ತನ್ನ ಹೊಟ್ಟೆಯಲ್ಲಿ ಅಡ ಗಿಸಿಕೊಂಡು ನಾರಾಯಣನು ಮಗುವಾಗಿ ಆಲದೆಲೆಯ ಮೇಲೆ ಮಲಗಿರುತ್ತಾನೆ. ಮುಂದಿನ ಸೃಷ್ಟಿಗಾಗಿ ಅವನ ಹೊಕ್ಕುಳಿನಿಂದ ಬ್ರಹ್ಮ ಮೈದಳೆಯುತ್ತಾನೆ.

ಮಧ್ಯಮಾವತಿ ಆದಿ

ಗೋವಿಂದಾ, ನಿನ್ನಾನಂದ ಸಕಲ ಸಾಧನವೋ ಪ

ಅಣುರೇಣು ತೃಣಕಾಷ್ಠ ಪರಿಪೂರ್ಣ ಗೋವಿಂದ
ನಿರ್ಮಲಾತ್ಮಕನಾಗಿ ಇರುವುದೆ ಆನಂದ ೧

ಸೃಷ್ಟಿ ಸ್ಥಿತಿ ಲಯ ಕಾರಣ ಗೋವಿಂದ
ಈ ಪರಿ ಮಹಿಮೆಯ ತಿಳಿಯೋದೆ ಆನಂದ ೨

ಮಂಗಳಮಹಿಮ ಪುರಂದರವಿಠ್ಠಲ
ಹಿಂಗದೆ ದಾಸರ ಸಲಹೋದೆ ಆನಂದ ೩

ನಿನ್ನಾನಂದ ಸಕಲ ಸಾಧನವೊ—'ಲೋಕವತ್ತು ಲೀಲಾಕೈವಲ್ಯಂ' ಎನ್ನುವ ಸೂತ್ರ ವಾಕ್ಯದ ವಿವರಣೆ. ಪರಮಾತ್ಮನು ಆಪ್ತಕಾಮನಾದುದರಿಂದ ಸೃಷ್ಟಿಗೆ ಕಾರಣ ವನ್ನು ಲೀಲೆಯೆಂದೇ ಹೇಳುತ್ತಾರೆ. ಲೀಲೆಯಲ್ಲಿ ಆನಂದಾನುಭವವು ಮುಖ್ಯವಾದುದು. ಈ ಆನಂದದಿಂದಲೇ ಸೃಷ್ಟಿ, ಸ್ಥಿತಿ, ಸಂಹಾರ, ಅಜ್ಞಾನ, ಜ್ಞಾನ, ಬಂಧ, ಮುಕ್ತಿಗಳೆಂಬ ಅಷ್ಟಮಹಾಕಾರ್ಯಗಳು ಜರುಗುವುವು. ಇವೇ 'ಸಕಲಸಾಧನ'. ಆನಂದ ಅವನ ಸ್ವರೂಪಭೂತವಾದ ಗುಣ.

ಅಣುರೇಣು...—ಅವನು ಸರ್ವವ್ಯಾಪಿ ; ಅತ್ಯಂತಸೂಕ್ಷ್ಮವಾದ ಜಡಪ್ರಕೃತಿಯ ವಿವರಗಳಲ್ಲೂ ತುಂಬಿದ್ದಾನೆ. ಆದರೆ ಯಾವ ವಿವರದಿಂದಲೂ ಅವನ ಸ್ವರೂಪ ಕೆಡುವುದಿಲ್ಲ. ಬ್ರಹ್ಮಾಂಡದ ವ್ಯಾಪಾರದಿಂದ ಅವನಲ್ಲಿ ವಿಕಾರವಿರದು (ನಿರ್ಮಲಾತ್ಮಕ).

ಈ ಪರಿ ಮಹಿಮೆಯ...—ಮಾಹಾತ್ಮ್ಯಜ್ಞಾನದಿಂದ ಜೀವರಿಗೆ ಯೋಗ್ಯತಾನುಸಾರ ವಾಗಿ ಆನಂದದ ಅನುಭವ.

ಹಿಂಗದೆ—ಬೇಸರಿಸದೆ, ಕುಂದದೆ.

ಮುಖಾರಿ ಝಂಪೆ

ಬಲವು ಬಲವೇ ನಿನ್ನ ಬಲವಲ್ಲದೆ ಮಿಕ್ಕ
ಬಲಗಳೆಂಟೆ ಬಣಗು ಗ್ರಹಗಳಿಂದ ಪ

ಹರಿ ನಿನ್ನ ಕೃಪೆಯೆನಗೆ ಚಂದ್ರ ತಾರಾಬಲವು
ಹರಿ ನಿನ್ನ ಕರುಣವೇ ರವಿಯು ಬಲವು
ಹರಿ ನಿನ್ನ ಮೋಹವೇ ಎನಗೆ ಗುರು ಭೃಗು ಬಲವು
ಹರಿ ನಿನ್ನ ಒಲುಮೆಯೇ ಶನಿಯು ಬಲವು ೧

ಮಂಗಳ ಮಹಿಮ ನಿನ್ನ ಅಂಗ ದರುಶನದ ಸುಖದ
ಮಂಗಳನ ಬಲವು ಎನ್ನ ಅಂಗಕೆ ಸದಾ
ರಂಗ ನಿನ್ನಯ ಚರಣ ಕಂಗಳಲಿ ನೋಡುವುದು
ಹಿಂಗದ ಸುಖವನೀವ ಸೌಮ್ಯ ಬಲವಯ್ಯ ೨

ಆದಿ ಮೂರುತಿ ನಿನ್ನ ಅರಿವುದೇ ರಾಹು ಬಲ
ಆದಿಮೂಲನೆ ನಿನ್ನ ಗುಣಕಥನವ
ಆದರಿಸಿ ಕೊಂಡಾಡುತಿಹುದೆನಗೆ ಕೇತು ಬಲ
ಆದಿ ಮಹಿಮನೆ ಸಿರಿ ಪುರಂದರವಿಠಲ ೩

[ಪ್ರಕೃತಿ ನಿಯಾಮಕರೆಂದು ಪ್ರಸಿದ್ಧರಾದ ನವಗ್ರಹಗಳು ಸ್ವತಂತ್ರ ತತ್ತ್ವಗಳಲ್ಲ. ಅವರೊಳಗೆ ಹರಿಯೇ ಪ್ರೇರಕನಾಗಿ ನಿಯಾಮಕನಾಗಿ ನಿಂತು ಅವರಿಂದ ತನ್ನ ಸಂಕಲ್ಪಾನುಸಾರ ಕೆಲಸ ಮಾಡಿಸುವನು. ಇದನ್ನು ತಿಳಿಯುವುದೇ ಮಾಹಾತ್ಮ್ಯಜ್ಞಾನ; ಇದರಿಂದ ಹರಿಯು ಪ್ರಸನ್ನನಾಗುವನು. 'ಸಕಲಗ್ರಹಬಲ ನೀನೆ' ಎಂಬ ಇನ್ನೊಂದು ಕೃತಿಯೂ ಇದೇ ತಾತ್ಪರ್ಯವುಳ್ಳದ್ದು.]

ಬಣಗು—ಅಲ್ಪ, ಕ್ಷುದ್ರ.

ಭೃಗು—ಶುಕ್ರಗ್ರಹ.

ಸೌಮ್ಯ—ಬುಧಗ್ರಹ.

# ದಶಾವತಾರ

ಅವತಾರವೆಂದರೆ ಕೆಳಗಿಳಿದು ಬರುವುದು (ಅವ–ತರಣ) ಭಗವಂತನು ಭಕ್ತರ ಉದ್ಧಾರಕ್ಕಾಗಿ ದುಷ್ಟರ ಶಿಕ್ಷೆಗಾಗಿ ಭೂಮಿಯ ಮೇಲೆ ಹಲವಾರು ರೂಪಗಳಲ್ಲಿ ತೋರಿಕೊಳ್ಳುವುದು ಅವತಾರ ಕಲ್ಪನೆಯ ಸ್ವಾರಸ್ಯ. ವೇದ ಕಾಲದಿಂದ ಮೂಡಿಕೊಂಡು ಬಂದ ಈ ಕಲ್ಪನೆ ಪುರಾಣಗಳಲ್ಲಿ ಗರಿಕೆದರಿ ಕಾಣಿಸಿಕೊಂಡಿತು ಅದರಲ್ಲೂ ವೈಷ್ಣವ ಪುರಾಣಗಳಲ್ಲಿ ವಿಷ್ಣುವು ಲೋಕ ಸ್ಥಿತಿಗೆ, ಧರ್ಮಸ್ಥಾಪನೆಗೆ, ಭೂಭಾರಹರಣಕ್ಕೆ ಬಗೆಬಗೆಯಾಗಿ ನೆರವಾದು ದನ್ನು ಉಲ್ಲೇಖಿಸುವ, ಬಣ್ಣಿಸುವ ವಿವರಗಳಿವೆ. ಹೀಗೆ ತನ್ನ ಪೂರ್ಣಾಂಶ ದಿಂದಲೇ ಆವಿಷ್ಟರೂಪಗಳಲ್ಲಿಯೇ ತೋರಿಕೊಂಡ ಅ ವ ತಾ ರ ಗ ಳು ಅಸಂಖ್ಯೇಯವಾದರೂ ಪ್ರಸಿದ್ಧವಾದುವು ಕೆಲವು. ಭಾಗವತ ಪುರಾಣದಲ್ಲಿ ಇಪ್ಪತ್ತೆರಡು ಅವತಾರಗಳ ಉಲ್ಲೇಖವಿದೆ ; ಬ್ರಹ್ಮ, ವರಾಹ, ನಾರದ, ನರನಾರಾಯಣರು, ಕಪಿಲ, ದತ್ತಾತ್ರೇಯ, ಯಜ್ಞ, ವೃಷಭದೇವ, ಪೃಥು, ಮತ್ಸ್ಯ, ಕೂರ್ಮ, ಧನ್ವಂತರಿ, ಮೋಹಿನಿ, ನರಸಿಂಹ, ವಾಮನ, ಪರಶುರಾಮ, ವೇದವ್ಯಾಸ, ದಾಶರಥಿರಾಮ, ಬಲರಾಮ, ಕೃಷ್ಣ, ಬುದ್ಧ, ಕಲ್ಕಿಯೆಂಬುವು. ಇವುಗಳಲ್ಲಿ ಹತ್ತು (ಭಾಗವತದ ಮೊದಲ ಸ್ಕಂಧದ ಮೂರನೆಯ ಅಧ್ಯಾಯದಲ್ಲಿ ಬರುವ ಪ್ರಸ್ತಾಪ) ಮುಖ್ಯವಾದುವು ; ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ (ಜಾಮದಗ್ನಿ), ರಾಮ, ಕೃಷ್ಣ, ಬುದ್ಧ, ಕಲ್ಕಿ ಇವು. ಈ ಒಕ್ಕಣೆಯೇ ಭಾಗವತ ಧರ್ಮದಲ್ಲೆಲ್ಲ ಪುರಸ್ಕೃತವಾಗಿರುವುದು ; ಜನರ ನಡುವೆಯೂ ಕಥೆಗಳಲ್ಲಿ, ಕಾವ್ಯದಲ್ಲಿ, ಚಿತ್ರದಲ್ಲಿ, ಶಿಲ್ಪದಲ್ಲಿ ಬಳಕೆಯಲ್ಲಿರುವುದು ಈ ಹತ್ತೇ

ಆದರೆ ಬುದ್ಧನನ್ನು ಬಿಟ್ಟು ಬಲರಾಮನನ್ನು ಸೇರಿಸಿ 'ರಾಮೋ ರಾಮಃ ರಾಮಶ್ಚ' ಎಂದು ಮೂವರು ರಾಮರನ್ನು ಹೇಳುವ ಒಂದು ಒಕ್ಕಣೆಯೂ ಇದೆ. ಮೂ ವ ರು ದಾಶರಥಿರಾಮ, ಭಾರ್ಗವರಾಮ (ಪರಶುರಾಮ), ಬಲರಾಮ (ಕೃಷ್ಣನ ಅಣ್ಣ). ಆದರೆ ಪರಶುರಾಮನು ರಾಮಾವತಾರದಲ್ಲಿಯೂ ಬಲರಾಮನು ಕೃಷ್ಣಾವತಾರದಲ್ಲಿಯೂ ಸೇರು ತ್ತಾರೆ , ರಾಮಾವತಾರ ಕೃಷ್ಣಾವತಾರಗಳು ಪೂರ್ಣಾವತಾರಗಳಾದುದ ರಿಂದ ಈ ಎಣಿಕೆ ಅಷ್ಟಾಗಿ ಸರಿಯಾಗದು. ಬೌದ್ಧಾವತಾರವನ್ನು ಒಪ್ಪಿಕೊಂಡ ವರೂ ಈ ಬುದ್ಧನು ಶಾಕ್ಯಮುನಿ ಬುದ್ಧನಿಗಿಂತ ಬೇರೆಯೆಂದು ಕಾಣಿಸುತ್ತಾರೆ.

ಹರಿದಾಸ ಸಾಹಿತ್ಯದಲ್ಲಿ ದಶಾವತಾರ ವರ್ಣನೆಗೆ ಹೆಚ್ಚಿನ ಆದರ. ವರ್ಣನೆಯೂ ಸ್ವಾರಸ್ಯವಾಗಿ ಬರುತ್ತದೆ ಮಧ್ವಾಚಾರ್ಯರ ದ್ವಾದಶ ಸ್ತೋತ್ರದಲ್ಲಿಯೇ ದಶಾವತಾರವರ್ಣನೆಯಿದೆ. ಇದರ ಪ್ರಭಾವದಿಂದಲೋ ಎನ್ನುವಂತೆ ದಾಸರು ದಶಾವತಾರವನ್ನು ಬಣ್ಣಿಸುವಾಗ ಕವಿಸಮಯವನ್ನು ಬಳಸಿಕೊಳ್ಳುವುದೇ ವಾಡಿಕೆ. ವ್ಯಾಸರಾಯ ಸ್ವಾಮಿಗಳ 'ರಂಗ ಬಾರ ಬಾಲೆ ಕುರಂಗನಯನೆ ಕೇಳೆ' ಎಂದು ಮೊದಲಾಗುವ ಕೃತಿಯಲ್ಲಿ ಮೂರು ನುಡಿಗಳಿದ್ದು ಒಂದೊಂದು ನುಡಿಯಲ್ಲೂ ದಶಾವತಾರ ವರ್ಣನೆ ವಿಭಿನ್ನ

ವಾಗಿ ಬಂದಿದೆ. ಅವತಾರಗಳ ತಾತ್ಪರ್ಯವನ್ನೂ ಸೊಗಸಾಗಿ ಕಾಣಿಸಿ ದ್ದಾರೆ ನಿದರ್ಶನಕ್ಕೆ 'ನಿಗಮಚೋರನ ಕೊಂದ' (ಮತ್ಸ್ಯ), 'ನಗವ ಬೆನ್ನಲಿ ತಂದ' (ಕೂರ್ಮ), ಜಗವ ನೆಗಹುವೆನೆಂದ (ವರಾಹ), 'ಜಿಗಿದು ಕಂಬದಿ ಬಂದ' (ನರಸಿಂಹ), 'ಮಗುವಿನಂದದಿ ನಿಂದ' (ವಾಮನ), 'ಯಾತ್ರೆಗಳ ಮಾಡುವೆನೆಂದ' (ಪರಶುರಾಮ), 'ಅನ್ನಗಳನೊಲೆನೆಂದ' (ರಾಮ), 'ಬೆಣ್ಣೆಗಳ ಕದ್ದು ತಿಂದ' (ಕೃಷ್ಣ), 'ನಗುತ ಬೆತ್ತಲೆ ನಿಂದ' (ಬುದ್ಧ), 'ತಾ ಸಿಗದೆ ಓಡುವೆನೆಂದ' (ಕಲ್ಕಿ). ಈ ಬಗೆಯ ನಿರೂಪಣೆ ಯನ್ನು ಪುರಂದರದಾಸರು ಅಳವಡಿಸಿಕೊಂಡರು.

ವಾದಿರಾಜರು ಸುಳಾದಿಯೊಂದರಲ್ಲಿ
'ಹತ್ತವತಾರವಲಿ ಭಕುತರ ಭಯವೆಲ್ಲ
ಕಿತ್ತಿ ಭಕುತರ ಕಾಯ್ದ ಕಥೆ'

ಯನ್ನು ಹೇಳಿ, ಮತ್ಸ್ಯನಾಗಿ 'ಶಕುತಿ', ಕೂರ್ಮನಾಗಿ 'ಕರುಣ', ವರಾಹ ನಾಗಿ 'ಶೂರತ್ವ', ನರಸಿಂಹನಾಗಿ 'ಯುಕುತಿ', ವಾಮನನಾಗಿ 'ಉದಾರತ್ವ', ಪರಶುರಾಮನಾಗಿ 'ವೈರಾಗ್ಯ', ರಾಮನಾಗಿ 'ಸತ್ಯ', ಕೃಷ್ಣನಾಗಿ 'ಲೀಲೆ', ಬುದ್ಧನಾಗಿ 'ಮಾಯೆ', ಕಲ್ಕಿಯಾಗಿ 'ಕಲಿತನ'ಗಳನ್ನು ಮೆರೆದನೆಂದು ಹರಿ ಯನ್ನು ಸ್ತುತಿಸಿದ್ದಾರೆ. ಹರಿದಾಸರು ಮತ್ಸ್ಯಾವತಾರದೊಂದಿಗೆ ಹಯಗ್ರೀವ ನನ್ನು ಕೂಡಿಸುವುದು ವಾಡಿಕೆ; ವಾಮನನೆಂದರೆ ಅವರ ಪಾಲಿಗೆ ದಧಿ ವಾಮನ; ವರಾಹನೆಂದರೆ ಶ್ವೇತವರಾಹ. ಬುದ್ಧನನ್ನು ದಾಸರು ವರ್ಣಿಸುವ ಬಗೆ ವಿಚಿತ್ರವಾದುದು. ಸ್ವರೂಪದೈತ್ಯರಾದವರಿಗೆ ಮಾಯೆಯಿಂದ ಕುಶಾಸ್ತ್ರಗಳನ್ನು ಬೋಧಿಸಿ ಅವರನ್ನು ಹಾಳುಮಾಡಿದನೆಂದೂ, ತ್ರಿಪುರರೆಂಬ ಅಸುರರ ಹೆಂಡತಿಯರನ್ನು ಕೆಡಿಸಿದನೆಂದೂ, ಬಣ್ಣಗೆಟ್ಟವನೆಂದೂ, ಬೆತ್ತಲೆ ಯಾಗಿ ನಿಂದವನೆಂದೂ ಹೇಳುವರು. ಕಲ್ಕಿಯು ಶಂಬಲಪುರದಲ್ಲಿ ವಿಷ್ಣು ಯಶನೆಂಬ ಬ್ರಾಹ್ಮಣನ ಮಗನಾಗಿ ಹುಟ್ಟಿ, ಶೂರನಾಗಿ ರಾವುತನಾಗಿ ಕಲಿಖಂಡವನ್ನೆಲ್ಲ ಗೆಲ್ಲುವನೆಂದು ಅವರ ನಂಬಿಕೆ.

ದಾಸರ ಕಲ್ಪನೆಯಲ್ಲಿ ದಶಾವತಾರಗಳಿಗೆ ಸಾಂಕೇತಿಕವಾದ ತಾತ್ಪರ್ಯವೂ ಇದೆ. ವೇದಗಳನ್ನು ಕದ್ದ ಮಧು–ಕೈಟಭರನ್ನು ಕೊಂದು ಬ್ರಹ್ಮನಿಗೆ ಮತ್ತೆ ವೇದಗಳನ್ನು ಕೊಟ್ಟ ಮತ್ಸ್ಯವೆಂದರೆ ಜೀವರ ಸ್ವರೂಪೇಂದ್ರಿಯವಾದ ಶ್ರೋತ್ರಗಳಲ್ಲಿರುವ ಶ್ರವಣಾಭಿಲಾಷೆ. ಅಮೃತ ಮಂಥನ ಕಾಲದಲ್ಲಿ ಕಡೆಗೋಲಾಗಿ ಮಂದಗಿರಿಯನ್ನು ಬೆನ್ನ ಮೇಲೆ ಹೊತ್ತಿದ್ದ ಕೂರ್ಮ ಜೀವರ ಚಿಚ್ಛರೀರ ಚಕ್ಷುರಿಂದ್ರಿಯದ ಕಾರ್ಯಪ್ರೇರಕ. ಭೂಮಿಯನ್ನು ಕದ್ದೊಯ್ದಿದ್ದ ಹಿರಣ್ಯಾಕ್ಷನನ್ನು ಕೊಂದು ಭೂಮಿಯನು ಮತ್ತೆ ಪಡೆದುಕೊಂಡ ವರಾಹ ಜೀವರ ಚಿದಾನಂದಸ್ವರೂಪ, ತ್ವಗಿಂದ್ರಿಯ ದಲ್ಲಿ. ಪ್ರಹ್ಲಾದವರದನಾಗಿ ಹಿರಣ್ಯಕಶಿಪುವನ್ನು ಕೊಂದ ನರಸಿಂಹ ಜೀವಾಂತರ್ಯಾಮಿ, ಜೀವನಿಯಾಮಕ; ಚಿತ್ ನಾಸಿಕೇಂದ್ರಿಯದಲ್ಲಿ ನೆಲೆ. ಬಲಿಯನ್ನು ದಮನ ಮಾಡಿದ ವಾಮನ ಸ್ವರೂಪೇಂದ್ರಿಯವಾದ ನಾಸಿಕಕ್ಕೆ ಅಥವಾ ರಸನೇಂದ್ರಿಯಕ್ಕೆ ಪ್ರವರ್ತಕ. ಭೃಗು ಕುಲದಲ್ಲಿ ಹುಟ್ಟಿ ಇಪ್ಪ ತ್ತೊಂದು ಬಾರಿ ಭೂಮಂಡಲವನ್ನು ಸುತ್ತಿ ಕ್ಷತ್ರಿಯರ ಉಪಟಳವನ್ನು ಮುರಿದ ಪರಶುರಾಮ ಚಿತ್‌ಸ್ವರೂಪ ವಾಗಿಂದ್ರಿಯದ ಪ್ರೇರಕ. ದಾಶರಥಿರಾಮ ಚಿತ್‌ಸ್ವರೂಪ ಹಸ್ತೇಂದ್ರಿಯದ ಪ್ರವರ್ತಕ. ಕೃಷ್ಣ ಚಿತ್

ಸ್ವರೂಪ ಪಾದೇಂದ್ರಿಯದ ಪ್ರವರ್ತಕ. ದುಷ್ಟರಾದ ದೈತ್ಯರನ್ನು ಮೋಹಿಸಿ ಅಧೋಲೋಕಕ್ಕೆ ತಳ್ಳಿದ ಬುದ್ಧ ಚಿತ್‌ಸ್ವರೂಪ ಪಾಯ್ವೇಂದ್ರಿಯದ ಪ್ರವರ್ತಕ. ಕುದುರೆಯೇರಿ ಕಲಿಖಂಡವನ್ನು ಸುತ್ತಾಡುವ ಕಲ್ಕಿ ಚಿತ್ ಸ್ವರೂಪ ಉಪಸ್ಥೇಂದ್ರಿಯದ (ಮೇಢ್ರ) ಪ್ರವರ್ತಕ. ಹೀಗೆ ದಶಾವತಾರಗಳು ಚಿತ್‌ಸ್ವರೂಪ ದಶೇಂದ್ರಿಯಗಳಿಗೆ ಪ್ರವರ್ತಕರು. ಈ ಎಲ್ಲ ಇಂದ್ರಿಯಗಳಿಗೂ ಮೂಲವಾದ ಮನಸ್ಸು (ಏಕಾದಶೇಂದ್ರಿಯ. ಉಭಯೇಂದ್ರಿಯ) ಅವತಾರಗಳಿಗೆ ಸತ್ತ್ವರೂಪಿಯಾದ ಸೂತ್ರರೂಪಿಯಾದ ಹರಿ.

ದಶಾವತಾರಗಳಲ್ಲದೆ ಕೇಶವನೇ ಮೊದಲಾದ ಇಪ್ಪತ್ತುನಾಲ್ಕು ರೂಪಗಳೂ (ಚತುರ್ವಿಂಶತಿ ಮೂರ್ತಿ) ದಾಸರ ಕೃತಿಗಳಲ್ಲಿ ಉಲ್ಲೇಖಕ್ಕೆ ಬರುತ್ತವೆ. ಆದರೆ ಹೆಚ್ಚಾಗಿ ವರ್ಣನೆಗೆ ಬರುವುವು ದಶಾವತಾರಗಳೇ. ಅದರಲ್ಲೂ ಕೆಲವು ಅವತಾರಗಳಿಗೆ ಉಪಾಸನೆಯೂ ಬಳಕೆಯಲ್ಲಿರುವುದರಿಂದ ಅವುಗಳ ವರ್ಣನೆ ವಿಶಿಷ್ಟವಾಗಿಯೇ ಬರುತ್ತವೆ. ದುರಿತ ನಿವೃತ್ತಿಗೆ ನರಸಿಂಹ, ಸತ್ಸಂತಾನಕ್ಕೆ ಗೋಪಾಲಕೃಷ್ಣ, ಜ್ಞಾನಪ್ರಸಾದಕ್ಕೆ ಹಯಗ್ರೀವ (ಮತ್ಸ್ಯ), ಸಂಪತ್ತಿಗೆ ದಧಿವಾಮನ, ಅಭ್ಯುದಯಕ್ಕೆ ರಾಮ, ಭೀತಿ ಪರಿಹಾರಕ್ಕೆ ಕೂರ್ಮ ಹೀಗೆ ಪ್ರಯೋಜನಗಳನ್ನು ಅನುಸರಿಸಿ ಆಯಾ ದೇವತೆಗಳ ಉಪಾಸನೆಯನ್ನು ಹೇಳುತ್ತಾರೆ ದಾಸರಿಗೆ ರಾಮ, ಕೃಷ್ಣ, ನರಸಿಂಹ ಈ ಮೂರು ಅವತಾರಗಳ ಮೇಲೆ ಒಲುವು ಹೆಚ್ಚು.

ಕೆಲವು ಹರಿದಾಸರ ಉಪಾಸ್ಯ ಮೂರ್ತಿಗಳೂ ವರ್ಣನೆಗೆ ಕಾರಣವಾಗುತ್ತವೆ. ವ್ಯಾಸರಾಯಸ್ವಾಮಿಗಳ ಕೃಷ್ಣ, ಪುರಂದರದಾಸರ ಪಾಂಡುರಂಗ (ಕೃಷ್ಣನ ಮೂರ್ತಿಭೇದ), ವಾದಿರಾಜರ ಹಯಗ್ರೀವ, ವಿಜಯೀಂದ್ರತೀರ್ಥರ ರಾಮ, ಕನಕದಾಸರ ಕೇಶವ, ವಿಜಯದಾಸರ ವೇದವ್ಯಾಸ ಹೀಗೆ. ಮತ್ತೆ, ಕ್ಷೇತ್ರಾಟನೆ ಮಾಡುವಾಗ ಅಲ್ಲಲ್ಲಿ ತೋರಿಕೊಂಡ ಅವತಾರ ವಿಶೇಷಗಳನ್ನೂ ದಾಸರು ಬಣ್ಣಿಸುವುದುಂಟು ; ಉಡುಪಿಯಲ್ಲಿ ಕೃಷ್ಣ, ಅಹೋಬಲದಲ್ಲಿ ನರಸಿಂಹ, ಶ್ರೀಮುಷ್ಣದಲ್ಲಿ ವರಾಹ, ಬೇಲೂರಿನಲ್ಲಿ ಮೋಹಿನಿ, ಭದ್ರಾಚಲದಲ್ಲಿ ರಾಮ, ಶ್ರೀಕೂರ್ಮದಲ್ಲಿ ಕೂರ್ಮನಾಥ ಮೊದಲಾದುವು ನಿದರ್ಶನಗಳು.

ಭೂಪಾಳಿ ಝಂಪೆ

ಏಳಯ್ಯ ಬೆಳಗಾಯಿತು ಪ

ಬೆಳಗಾಯಿತೇಳಯ್ಯ ಬಿಸಿಲು ಮೈದೋರುತಿದೆ
ಸುಳಿವುದೋರಯ್ಯ ನಿನ್ನ ಹಾರೈಸಿ ನಿಂದಿಹರು
ತಳುವ ಮಾಡದಿರಯ್ಯ ಸ್ವಾಮಿ ತಿರುಮಲೆರಾಯ
ಸೆಳೆಮಂಚದಿಂದಲೆ ಏಳು ೧

ವೇದವನು ತರಲೇಳು ಮಂದರವ ಪೊರಲೇಳು
ಭೇದಿಸುತ ಅಸುರರನು ಭೂಮಿಯ ತರಲೇಳು
ಕಾದಿ ಹಿರಣ್ಯನ ಕರುಳ ಕೊರಳೊಳಗೆ ಧರಿಸೇಳು
ಕಾದು ಬಲಿ ಬಾಗಿಲೊಳಗೇಳು ೨

ಭೇದದಲಿ ಭೂಮಿಯ ತ್ರಿಪಾದದಿಂದಳೆಯೇಳು
ಭೇದಿಸುತ ಕ್ಷತ್ರಿಯರ ಕೊಡಲಿಯಿಂ ಕಡಿಯೇಳು
ಸಾಧಿಸುತ ಶರಧಿಯಲಿ ಸೇತುವೆಯ ಕಟ್ಟೇಳು
ನಂದಗೋಪನ ಉದರದೊಳೇಳು ೩

ಪುರಮೂರ ಗೆಲಬೇಕು ಅರಿವೆಯನು ಕಳೆದೇಳು
ದುರುಳರನು ಕೊಲಬೇಕು ತುರಗವಾಹನನಾಗು
ಪರಿಪರಿಯ ಕೆಲಸಗಳ ಮಾಡಲುದ್ಯೋಗಿಸದೆ
ಮರೆದು ನಿದ್ರೆಯ ಗೆಯ್ವರೆ ೪

ಆಲದೆಲೆಯಿಂದೇಳು ಮಾಲಕುಮಿ ಬಂದಿಹಳು
ಹಾಲಗಡಲಿಂದೇಳು ಶ್ರೀದೇವಿ ನಿಂದಿಹಳು
ಕಾಲದೆಡೆಯಿಂದೇಳು ಭೂದೇವಿ ಬಂದಿಹಳು
ಸಾಲಮಂಚಗಳಿಂದಲಿ ೫

ನಾಭಿಕಮಲದಿ ಜನಿಸಿದ ಬ್ರಹ್ಮ ಬಂದಿಹನು
ಗಂಭೀರ ಗಾಯನದ ನಾರದನು ನಿಂದಿಹನು
ರಂಭೆ ಮೇನಕೆ ಮೊದಲು ನರ್ತನಕೆ ಐದಿಹರು
ಶಂಬರಾರಿಪಿತನೆ ಏಳು ೬

ರಾಜಸೂಯವ ಕೊಳಲು ವಾಯುಸುತ ಬಂದಿಹನು
ತೇಜಿಯಾಟಿಕೆ ಅರ್ಜುನನು ಕರೆಯ ಬಂದಿಹನು
ಸಾಜ ಧರ್ಮಜ ಅಗ್ರಪೂಜೆ ಮಾಡುವೆನೆಂದು
ಹೂಜಿಯನೆ ಪಿಡಿದುಕೊಂಡು ೭

ಉರಿಗೈಯನಟ್ಟಿದರೆ ಹರನೋಡಿ ಬಂದಿಹನು
ಗಿರಿಜೆ ವರವನು ಬೇಡೆ ಬಂದು ನಿಂದಿಹಳು
ಸುರಪಾರಿಜಾತವನುಕೊಂಡು ಸುರರಾಜ
ಒಂದಿರುವನೇಳಯ್ಯ ಹರಿಯೆ ೮

ಕ್ಷಿತಿನಾಥ ನೀನೇಳು ಸತ್ಯಭಾಮೆ ಬಂದಿಹಳು
ಮತಿವಂತ ನೀನೇಳು ಜಾಂಬವತಿ ಬಂದಿಹಳು
ಗತಿವಂತ ನೀನೇಳು ಶ್ರೀತುಳಸಿ ಬಂದಿಹಳು
ಏಕಾಂತಸೇವೆಯ ಮಾಡಲು ೯

ದೇವ ನಿನ್ನಂಘ್ರಿಯನು ಪೂಜೆ ಮಾಡುವೆವೆಂದು
ಕಾವೇರಿ ಕೃಷ್ಣೆ ಗೌತಮಿ ಗಂಗೆ ಮಲಾಪಹಾರಿ
ಸಾವಧಾನದಿ ಯಮುನೆ ತುಂಗೆ ಸರಸ್ವತೀ
ಭೀಮರಥಿ ನೇತ್ರಾವತಿಯು ೧೦

ದುರಿತ ಬಂಧನವನ್ನು ಪರಿಹರಿಸಿದೆಯೊ ಸ್ವಾಮಿ
ದುರಿತಾರಿ ಮೇಲುಗಿರಿ ಶಿಖರದಲಿ ನಿಂತಿಹೆಯೊ
ದುರಿತತಾಪಕೆ ಚಂದ್ರ ನೀನೆನಿಸಿಕೊಂಡೆಯೊ
ಶ್ರೀ ಪುರಂದರವಿಠಲನೆ ೧೧

[ಉದಯರಾಗ ಪದ್ಧತಿಯಲ್ಲಿರುವ ಈ ಪದ ಸಡಿಲವಾದ ವಾರ್ಧಿಕ ಷಟ್ಪದಿಯ ರಚನೆ. ಸೃಷ್ಟಿಗೆ ಮೊದಲು ಅವ್ಯಾಕೃತಾವಸ್ಥೆಯಲ್ಲಿದ್ದ ಮೂಲ ಪ್ರಕೃತಿಯ ಮಡಿಲಿಂದ ಪರಮಾತ್ಮನು ಜಾಗ್ರತನಾಗಿ ಅಷ್ಟಮಹಾಕಾರ್ಯಗಳನ್ನು ಕೈಗೊಳ್ಳಬೇಕೆಂದು ಅವನನ್ನು ದಾಸರು ಎಬ್ಬಿಸುತ್ತಿದ್ದಾರೆ. ವಿಷ್ಣುವಿನ ಮಹಿಮೆಯನ್ನು ಹೇಳುವುದೇ ಉದ್ದೇಶ. ಮೂರು ನುಡಿಗಳಲ್ಲಿ ದಶಾವತಾರದ ವರ್ಣನೆಯಿದೆ (೨,೩,೪,). ಅನಂತರ ಲಕ್ಷ್ಮಿಯ ಸಂಕೇತವಾದ ವಟಪತ್ರ, ಶ್ರೀದೇವಿಯ ಪ್ರತೀಕವಾದ ಕ್ಷೀರಸಮುದ್ರ, ಭೂದೇವಿಯ ಸಂಕೇತವಾದ ಶೇಷಶಯ್ಯೆ ಇವುಗಳ ಉಲ್ಲೇಖವಿದೆ. ಮುಂದೆ ವಿಷ್ಣುವಿನ ಪರಿವಾರ, ವೈಭವ, ಸಾಹಸಗಳ ವರ್ಣನೆ ಬರುತ್ತದೆ.]

ನಟ್ಟೆ ಝಂಪೆ

ಜಯತು ಕೋದಂಡ ರಾಮ
ಜಯತು ದಶರಥರಾಮ
ಜಯತು ಸೀತಾರಾಮ
ಜಯತು ರಘುರಾಮ ಜಯತು ಜಯತು ಪ

ತಮ ದೈತ್ಯನನು ಮಡುಹಿ ಮಂದರಾಚಲ ನೆಗಹಿ
ಪ್ರೀತಿಯಿಂದಲೆ ತಂದು ಸಕಲ ಭೂತಳವ
ಕ್ಷೇತ್ರದಿಂದುದ್ಭವಿಸಿ ಪೊರೆಯಿಡುವ ಬಾಲಕನ
ಭೀತಿಯನು ಬಿಡಿಸಿ ನೆರೆಕಾಯ್ದ ರಘುರಾಮ ೧

ಬಲಿಯ ದಾನವ ಬೇಡಿ ನೆಲನ ಈರಡಿಮಾಡಿ
ಛಲದಿಂದ ಕ್ಷತ್ರಿಯರ ಕುಲವ ಹೋಗಾಡಿ
ಲಲನೆಗೋಸುಗ ಬಂದ ನೆವದಿಂದ ರಾವಣನ
ತಲೆಗಳನು ಚೆಂಡಾಡಿ ಮೆರೆದ ರಘುರಾಮ ೨

ವಸುದೇವ ಸುತನೆನಿಸಿ ವನಿತೆಯರ ವ್ರತ ಕೆಡಿಸಿ
ಎಸೆವ ತುರಗವನೇರಿ ಮಲ್ಲರನು ಸವರಿ
ವಸುಧೆಯೊಳು ಪುರಂದರವಿಠಲ ನೀ ಪಾಲಿಸೈ
ಬಿಸಜಾಕ್ಷ ಅಯೋಧ್ಯ ಪುರವಾಸ ರಘುರಾಮ
ಜಯತು ಜಯತು ೩

[ಇಲ್ಲಿ ರಾಮಾವತಾರವನ್ನೇ ಮುಖ್ಯವಾಗಿ ಹಿಡಿದು ಉಳಿದ ಅವತಾರಗಳನ್ನು ಪ್ರಾಸಂಗಿಕವಾಗಿ ಪ್ರಸ್ತಾಪಿಸಿದ್ದಾರೆ.]

ತಮದೈತ್ಯ—ಕತ್ತಲೆಯೆಂಬ ಶತ್ರು, ಅಜ್ಞಾನ; ವೇದವಿದ್ಯಾವಿರೋಧಿಯಾದುದು; ಮಧು–ಕೈಟಭರ ಸ್ವರೂಪ.
ಮಡುಹಿ—ಕೊಂದು.

ನೆಗಹಿ—ಎತ್ತಿಹಿಡಿದು.

ಈರಡಿಮಾಡಿ—ಇಡೀ ಭೂಮಿಯನ್ನು ತನ್ನ ಎರಡು ಹೆಜ್ಜೆಗಳಿಂದ ಅಳೆದು.

ಛಲದಿಂದ—ತನ್ನ ತಂದೆ ಜಮದಗ್ನಿಯನ್ನು ಕ್ಷತ್ರಿಯರಾಜನೊಬ್ಬನು (ಕಾರ್ತವೀರ್ಯ) ಕೊಂದನೆಂದು ದ್ವೇಷದಿಂದ.

ಲಲನೆಗೋಸುಗ—ಸೀತಾನ್ವೇಷಣೆಯ ನೆವದಿಂದ.

ವನಿತೆಯರ ವ್ರತ ಕೆಡಿಸಿ—ಬೌದ್ಧಾವತಾರ. ತ್ರಿಪುರಗಳಲ್ಲಿದ್ದ ಮಡುವಿನ ನೀರನ್ನು ಬತ್ತಿಸಿ, ಜಲಕ್ರೀಡೆಯಾಡುತ್ತಿದ್ದ ತ್ರಿಪುರ ವನಿತೆಯರನ್ನು ಒಲಿಸಿಕೊಂಡು ದೈತ್ಯರನ್ನು ಕೊಂದ ಘಟನೆ.



ಕಾಂಬೋದಿ | ಝಂಪೆ

ಏನು ಮೆಚ್ಚಿದೆಲೆ ಹೆಣ್ಣೆ ಏನು ಮರುಳಾದೆ ಪ

ನೋಟದಿ ಚೆಲುವನಿವನೆಂಬೆನೆ ಚಂಚಲ
ಮಾಟದಿ ಚೆಲುವನೆಂಬೆನೆ ಬೆನ್ನುಗುಂಪುಟು
ಗೂಟದಂಥ ಹಲ್ಲು ಮೊಳದುದ್ದ ಮೋರೆ
ಬೂಟಕತನದಿ ಬಾಯ್ದೆರೆದು ಅಂಜಿಪಗೆ ೧

ಅಣುರೂಪದವನಿವ ನಿಲುವುಳ್ಳ ನರನಲ್ಲ
ಬನವ ತರಿವನಂತೆ ಕೈಯಲ್ಲಿ ಕೊಡಲಿ
ಮನುಜರನು ತಾ ಬಿಟ್ಟು ಕಪಿಗಳನು ಕೂಡುವ
ಮನೆಮನೆಯನು ಪೊಕ್ಕು ಕದ್ದು ತಿಂಬುವಗೆ ೨

ಗಂಭೀರ ಪುರುಷ ನಿವನೆಂಬೆನೆ ದಿಗಂಬರ
ಅಂಬರದೊಳಗೆ ಕುದುರೆಯ ಕುಣಿಸುವ
ಅಂಬುಜಾಕ್ಷ ಸಿರಿ ಪುರಂದರವಿಟ್ಠಲನ
ನಂಭ್ರಮದಿ ನೀ ಮೆಚ್ಚಿ ಮದುವ್ಯಾದೆಯಲ್ಲೇ ೩

[ಇದು ಲಕ್ಷ್ಮೀದೇವಿಯನ್ನು ಕುರಿತು ಹೇಳಿದಂತೆ, ನಿಂದಾಸ್ತುತಿಯ ರೂಪದಲ್ಲಿರುವ ಪದ. ಮೊದಲ ನುಡಿಯಲ್ಲಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಈ ರೂಪಗಳ ವರ್ಣನೆ, ಎರಡನೆಯದರಲ್ಲಿ ವಾಮನ, ಪರಶುರಾಮ, ರಾಮ, ಕೃಷ್ಣರ ವರ್ಣನೆ; ಮೂರನೆಯದರಲ್ಲಿ ಬುದ್ಧ, ಕಲ್ಕಿ ಇವರ ವರ್ಣನೆ.]

ಶಂಕರಾಭರಣ ಅಟ್ಟ

ಕೇಳಿದೆ ನಿನ್ನಯ ಸುದ್ದಿ ಕೇಳಿದೆ ಪ

ನೀರೊಳು ಮುಳುಗಿದೆಯಂತೆ, ದೊಡ್ಡ
ಭಾರಗಿರಿಯ ಪೊತ್ತೆಯಂತೆ
ಗೆಡ್ಡೆ ಬೇರು ಗೆಣಸು ಮೆದ್ದೆಯಂತೆ, ಆಹ
ಮೂರೆರಡರಿಯದ ಪೋರನ ಮಾತಿಗೆ
ಘೋರ ದಾನವನ ಸಂಹಾರ ಮಾಡಿದೆಯಂತೆ ೧

ನಾರಿಯೊಬ್ಬಳ ಪೆತ್ತೆಯಂತೆ, ಹೆತ್ತ
ನಾರಿಯಳನು ಕೊಯ್ದೆಯಂತೆ
ನಿನ್ನ ನಾರಿ ಚೋರನ ಕೊಂದೆಯಂತೆ, ಆಹ
ಊರ ನಾರಿಯರಿಂದ ಬೈಸಿಕೊಳ್ಳುತ ಪರ
ನಾರಿಯರಭಿಮಾನ ಗಾರುಮಾಡಿದೆಯೆಂದು ೨

ತುರಗ ರಾವುತನಾದೆಯಂತೆ, ನಿನ್ನ
ಕರದಿ ಕಡೆಗೋಲು ನೇಣಂತೆ
ನಿನಗೆ ಸರಿ ಧರೆಯೊಳಗಿಲ್ಲವಂತೆ, ಆಹ
ವರದ ಪುರಂದರವಿಠ್ಠಲ ನಿನ್ನಯ
ಪರಿಪರಿ ಮಹಿಮೆಯ ಹರುಷದಿಂದಲಿ ನಾ ೩

ಗೆಡ್ಡೆ ಬೇರು ಗೆಣಸು ಮೆದ್ದೆಯಂತೆ—ವರಾಹ ; ಹಂದಿಯ ಸ್ವಭಾವವನ್ನು ಹಿಡಿದು.

ಮೂರೆರಡರಿಯದ ಪೋರ—ಪ್ರಹ್ಲಾದ, ಏನೂ ಅರಿಯದ ಹಸುಳೆ.

ನಾರಿಯೊಬ್ಬಳ ಪೆತ್ತೆಯಂತೆ—ತ್ರಿವಿಕ್ರಮನಾಗಿ ಭೂದೇವಿಯನ್ನು ತನ್ನ ಒಡಲಲ್ಲಿ ಅಡಗಿಸಿಕೊಂಡು ಅನಂತರ ಹೊರಹೊಮ್ಮಿಸಿದನೆಂದು ವಾಮನಪುರಾಣದ ಕತೆ (ಅಧ್ಯಾಯ ೭೫, 'ಗರ್ಭಭೂಮಿಮಾಪೂರಯತ್').

ಹೆತ್ತ ತಾಯಿಯನ್ನು—ಜಮದಗ್ನಿಯ ಪತ್ನಿಯಾದ ರೇಣುಕೆಯನ್ನು.

ನಾರಿಯರಭಿಮಾನ...—ಬೌದ್ಧಾವತಾರದಲ್ಲಿ.

ಮೋಹನ ಅಟ್ಟ

ಬಿಡೆ ನಿನ್ನ ಪಾದವ ಬಿಂಕವಿನ್ನೇಕೋ
ಕೊಡು ಮನದಿಷ್ಟವ ಕೋಪವಿದೇಕೋ ಪ

ನೀರ ಪೊಕ್ಕರು ಬಿಡೆ ಬೆನ್ನಿನೊಳಗೆ ಬಹು
ಭಾರ ಪೊತ್ತೆನೆಂದರು ಬಿಡೆನು
ಕೋರೆಯು ಮನೆಯುತ ಕೊಸರಿಕೊಂಡರು ಬಿಡೆ
ಘೋರ ರೂಪವ ತಾಳಿ ಘುರಘುರಿಸಲು ನಾನು ೧

ತಿರುಕನೆಂದರು ಬಿಡೆ ತಿಳಿದು ತಾಯ ಕೊರಳ
ತರಿದೆನೆಂದರು ನಿನ್ನ ನಾ ಬಿಡೆನೊ
ಪೊರೆಯೆ ಪಿತನ ವಾಕ್ಯ ಕಾಡ ಸೇರಲು ಬಿಡೆ
ಗರಳ ಮಡುವಿನಲ್ಲಿ ಧುಮುಕಿದರು ನಾನು ೨

ಕಡು ಬತ್ತಲಾಗಿ ಕೈಲಿ ಕಾಸಿಲ್ಲೆಂದರು ಬಿಡೆ
ಒಡನೆ ಹಯವೇರಿ ಓಡಿದರು ಬಿಡೆನು
ಪೊಡವಿಯೊಳಗೆ ನಮ್ಮ ಪುರಂದರವಿಠಲನೆ
ಕಡೆಹಾಯಿಸುವ ಭಾರ ನಿನ್ನದದಕೆ ನಾನು ೩

ಬಿಂಕ—ಬಿಗುಮಾನ, ಹೆಮ್ಮೆ.

ಕೊಸರಿಕೊಂಡರು—ಕೈ ಝಾಡಿಸಿ ತಪ್ಪಿಸಿಕೊಂಡು ಹೋದರೂ.

ತಿರುಕನೆಂದರು—ವಾಮನನಾಗಿ.

ಕಡೆಹಾಯಿಸುವ ಭಾರ ನಿನ್ನದು—ಪಾರುಗಾಣಿಸುವ, ಸಂಸಾರದ ಕಡಲನ್ನು ದಾಟಿಸುವ ಹೊಣೆ ನಿನ್ನದು.

ಧನ್ಯಾಸಿ | ಅಟ್ಟ

ಅಂಬೆಗಾಲಿಕ್ಕುತ ಬಂದ ಗೋವಿಂದ ಪ

ಅಂಬುಜನಾಭ ದಯದಿಂದ ಎನ್ನಮನೆಗೆ ಅ

ಜಲಚರ ಜಲವಾಸ ಧರಣಿಧರ ಮೃಗರೂಪ
ನೆಲನಳೆದು ಮೂರಡಿ ಮಾಡಿ ಬಂದ
ಕುಲನಾಶ ವನವಾಸ ನವನೀತ ಚೋರನಿವ
ಲಲನೆಯರ ವ್ರತಭಂಗ ವಾಹನತುರಂಗ ೧

ಕಣ್ಣಬಿಡುವನು ತನ್ನ ಬೆನ್ನ ತಗ್ಗಿಸುವನು
ಮಣ್ಣು ಕೆದರಿ ಕೋರೆ ಬಾಯ ತೆರೆದು
ಚಿಣ್ಣ ಭಾರ್ಗವ ಲಕ್ಷ್ಮಣನಣ್ಣ ಬೆಣ್ಣೆಯ ಕಳ್ಳ
ಮಾನವ ಬಿಟ್ಟು ಕುದುರೆಯನೇರಿದ ೨

ನೀರ ಪೊಕ್ಕನು ಗಿರಿಯ ನೆಗಹಿ ಧರಣಿಯ ತಂದು
ನರಮೃಗ ಬಲಿಬಂಧ ಕೊರಳಗೊಯಿಕ
ಶರಮುರಿದೊರಳೆಳೆದು ನಿರವಾಣಿ ಹಯ ಹತ್ತಿ
ಪುರಂದರವಿಠಲ ಮನೆಗೆ ತಾ ಬಂದ ೩

[ಈ ಪದದಲ್ಲಿ ಮೂರು ನುಡಿಗಳಲ್ಲಿ ಪ್ರತ್ಯೇಕವಾಗಿ ಹತ್ತು ಅವತಾರಗಳ ಚಿತ್ರಣವಿದೆ.]

ಒರಳೆಳೆದು—ಯಮಳಾರ್ಜುನಭಂಗದ ಪ್ರಸಂಗ (ಕೃಷ್ಣಾವತಾರ).

ನಿರವಾಣಿ—ನಿರ್ವಾಣಿ, ಬೆತ್ತಲೆ (ಬೌದ್ಧಾವತಾರ).

ಶಂಕರಾಭರಣ ತ್ರಿವಿಡೆ

ಧರಣಿಗೆ ಧೊರೆಯೆಂದು ನಂಬಿದೆ, ಇಂಥ
ಪರಮಲೋಭಿ ಎಂಬುದರಿಯೆ ಶ್ರೀಹರಿಯೆ ಪ

ಕಾಡಿ ಬೇಡುವರಿಗೆ ಕೊಡಲಾರದೆ ಅಂಜಿ
ಓಡಿ ನೀರೊಳು ಸೇರಿಕೊಂಡೆ ಬೇಗ
ಹೇಡಿಯು ತೆರದಲಿ ಮೋರೆಯ ತೋರದೆ
ಓಡಿ ಅರಣ್ಯದಿ ಮೃಗಗಳ ಸೇರ್ದೆ ೧

ಬಡವರ ಬಿನ್ನಹ ಲಾಲಿಸದೆ ಹಲ್ಲ
ಕಡು ಕೋಪದಲಿ ತೆರೆದಂಜಿಸಿದೆ
ತಡೆಯದೆ ಭಿಕ್ಷುಕನಾದರೆ ಬಿಡರೆಂದು
ಕೊಡಲಿಯ ಪಿಡಿದು ಕೋಡಗಹಿಂಡ ಕಾಯ್ದೆ ೨

ಉತ್ತಮನೆಂದರೆ ಮತ್ತೆ ಚೋರನಾದೆ
ಬತ್ತಲೆ ನಿಂತೆ ತೇಜಿಯನೇರಿದೆ
ಎತ್ತಹೋದರು ಬಿಡೆ ಮತ್ತೆ ನಿನ್ನನು ದೇವ
ಚಿತ್ತಜಜನಕ ಶ್ರೀ ಪುರಂದರವಿಠಲ ೩

[ಇದು ನಿಂದಾಸ್ತುತಿಯ ಪ್ರಕಾರಕ್ಕೆ ಸೇರಿದ ಪದ. ದಶಾವತಾರಗಳನ್ನು ಸೂಕ್ಷ್ಮವಾಗಿ, ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ. ಒಂದೇ ಸಾಲಿನಲ್ಲಿ ಎರಡು ಅವತಾರಗಳನ್ನು ಸಂಗ್ರಹಿಸಿರುವ ಜಾಣ್ಮೆಯನ್ನು ಗಮನಿಸಬೇಕು. 'ಕೊಡಲಿಯ ಪಿಡಿದು' (ಪರಶುರಾಮ), 'ಕೋಡಗ ಹಿಂಡ ಕಾಯ್ದೆ' (ರಾಮ) ; ಬತ್ತಲೆ ನಿಂತು (ಬುದ್ಧ) ತೇಜಿಯನೇರಿದೆ (ಕಲ್ಕಿ).]

ಮುಖಾರಿ ಆದಿ

ಕೇಳಲೊಲ್ಲನೆ ಎನ್ನ ಮಾತನು ರಂಗ ಪ

ಕಾಳಿಂಗ ಮರ್ದನಗೆ ಹೇಳೆ ಗೋಪಮ್ಮ ಬುದ್ಧಿ ಅ

ಬಿಟ್ಟ ಕಂಗಳ ಮುಚ್ಚಲೊಲ್ಲನೆ, ರಂಗ
ಬೆಟ್ಟಕ್ಕೆ ಬೆನ್ನೊಡ್ಡಿ ನಿಂದನೆ, ಕೃಷ್ಣ
ಸಿಟ್ಟಿಲಿ ಕೋರೆಹಲ್ಲ ತೋರ್ದನೆ, ಬೇಗ
ಗಟ್ಟಿ ಉಕ್ಕಿನ ಕಂಭ ಒಡೆದು ಬಂದನೆ ಕೃಷ್ಣ ೧

ಮೂರಡಿ ಭೂಮಿಯ ಬೇಡಿದನೆ, ನೃಪರ
ಬೇರ ಕಡಿಯೆ ಕೊಡಲಿ ತಂದನೆ, ರಂಗ
ನಾರ ಸೀರೆಯನುಟ್ಟುಕೊಂಡನೆ, ಬೇಗ
ಚೋರತನದಿ ಹರವಿ ಹಾಲ ಕುಡಿದನಮ್ಮ ೨

ಬತ್ತಲೆನಾರಿಯರನಪ್ಪಿದ, ಬೇಗ
ಉತ್ತಮ ತೇಜಿಯ ಹತ್ತಿದ
ಹತ್ತವತಾರವನೆತ್ತಿದ, ಜಗದ
ಕರ್ತ ಶ್ರೀ ಪುರಂದರವಿಠ್ಠಲರಾಯನು ೩

[ಹಸುಳೆ ಕೃಷ್ಣನನ್ನು ದೂರುವ ನೆವದಿಂದ ಹತ್ತು ಅವತಾರಗಳನ್ನು ಹೇಳಿದ್ದಾರೆ.]

ಬಿಟ್ಟ ಕಂಗಳ ಮುಚ್ಚಲೊಲ್ಲ—ಮೀನಿನ ಕಣ್ಣಿಗೆ ರೆಪ್ಪೆಯಿರುವುದಿಲ್ಲವಾಗಿ ಕಣ್ಣನ್ನು ಮುಚ್ಚಲಾರದೆಂದು ಪ್ರತೀತಿ (ಮತ್ಸ್ಯ).

ನೃಪರ ಬೇರ ಕಡಿಯೆ—ಕ್ಷತ್ರಿಯರ ವಂಶವನ್ನೇ ನಿರ್ಮೂಲಮಾಡುವೆನೆಂದು ಹಟ ತೊಟ್ಟು (ಪರಶುರಾಮ).

ನಾರ ಸೀರೆ—ಚೀರಾಜಿನ, ನಾರುಮಡಿ.

ಶಂಕರಾಭರಣ ಅಟ್ಟ

ಎಂಥವನೆಂಥವನೆ, ರಂಗಯ್ಯ ಎಂಥವನೆಂಥವನೆ ಪ

ಆಗಮವನು ತಂದವನೆ, ರಂಗ
ಬೇಗದಿ ಗಿರಿಯ ಪೊತ್ತವನೆ ಅ

ಮೂಗಿಂದ ಭೂಮಿಯನೆತ್ತಿದನೆ, ಶಿಶು
ಕೂಗಲು ಕಂಭದಿಂದೊದಗಿದನೆ ಕೃಷ್ಣ ೧

ಧರಣಿಯ ಈರಡಿಮಾಡಿದನೆ
ಭೂಸುರನಾಗಿ ಪರಶುವ ಧರಿಸಿದನೆ
ಭರದಿ ಕೋಡಗಹಿಂಡು ಕೂಡಿದನೆ, ಫಣಿ
ಶಿರದಲ್ಲಿ ಕುಣಿದಾಡಿದನೆ ರಂಗ ೨

ಉಟ್ಟಿದ್ದ ಬಟ್ಟೆಯ ಬಿಸುಟಿಹನೆ, ರಂಗ
ಧಿಟ್ಟ ತೇಜಿಯನೇರಿ ಮೆರೆಯುವನೆ
ದುಷ್ಟರನೆಲ್ಲ ಸಂಹರಿಸಿದನೆ, ನಮ್ಮ
ಧಿಟ್ಟ ಪುರಂದರವಿಠಲನ ಕೃಷ್ಣ ೩

ಧಿಟ್ಟ—ದಿಟ್ಟ ; ಸಂಸ್ಕೃತದ 'ಧೃಷ್ಟ' ಎನ್ನುವುದರ ತದ್ಭವ.

ನಾದನಾಮಕ್ರಿಯೆ ಆದಿ

ಇವನ ಹಿಡಿದುಕೊಂಡು ಹೋಗೆಲೊ ಜೋಗಿ ಪ

ಇವ ನಮ್ಮ ಮಾತ ಕೇಳದೆ ಪುಂಡನಾದ ಅ

ಆಡುತಾಡುತ ಹೋಗಿ ನೀರೊಳು ಮುಳುಗಿದ
ಬೇಡವೆಂದರೆ ಬೆಟ್ಟ ಬೆನ್ನಲಿ ಹೊತ್ತ
ದಾಡೆಯ ಮೇಲೆ ತಾ ಧಾರಿಣಿ ನೆಗಹಿದ
ಹಿಡಿಯ ಹೋದರೆ ಬಾಯ ತೆರೆದು ಅಂಜಿಸಿದ ೧

ಹುಲ್ಲಲಿ ವಿಪ್ರನ ಕಣ್ಣ ತಿವಿದ ಬುದ್ಧಿ
ಇಲ್ಲೆಂದರೆ ಕೈಲಿ ಕೊಡಲಿಯ ಪಿಡಿದ
ಬಿಲ್ಲು ಹಿಡಿದು ರಾಕ್ಷಸರನು ಸವರಿದ
ಬಲ್ಲಿದ ಮಾವನ ಶಿರವನು ತರಿದ ೨

ಬತ್ತಲೆ ಕುದುರೆಯ ಹತ್ತಬೇಡೆಂದರೆ
ಹತ್ತಿದನೋ ಇವ ಛಲದಿಂದ
ಭಕ್ತವತ್ಸಲ ಸಿರಿ ಪುರಂದರವಿಠಲನ
ಎತ್ತಲಾದರು ಕೊಂಡು ಹೋಗೆಲೊ ಜೋಗಿ ೩

[ಹುಡುಗ ಕೃಷ್ಣನನ್ನು ಬೆದರಿಸಬೇಕೆಂದು ತಾಯಿ ಹೇಳಿದಂತೆ ಇರುವ ಪದ ಇದು. 'ಯಾರ ಮಾತನ್ನೂ ಕೇಳುವವನಲ್ಲ' ಎಂದರೆ ಸರ್ವಸ್ವತಂತ್ರನಾದವನು ಯೋಗಿಯು ಅವನನ್ನು ತನ್ನ ಸಾಧನೆಯಿಂದ ಹಿಡಿದುಕೊಂಡು ತನ್ನ ಹೃದಯದಲ್ಲಿ ಕೂಡಿಹಾಕಬಹುದು , ಉಳಿದಂತೆ ಅವನು ಯಾರಿಗೂ ಯಾವ ಉಪಾಯಕ್ಕೂ ಸಿಕ್ಕುವವನಲ್ಲ.]

ಹುಲ್ಲಲಿ ವಿಪ್ರನ ಕಣ್ಣ ತಿವಿದ—ವಾಮನಾವತಾರದಲ್ಲಿ ವಿಷ್ಣುವಿನ ಕುಟಿಲವನ್ನರಿತ ಶುಕ್ರಾಚಾರ್ಯರು (ಬಲಿಚಕ್ರವರ್ತಿಯ ಗುರು) ಬಲಿಯು ಧಾರೆಗಾಗಿ ಗಿಂಡಿಯನ್ನು ಎತ್ತಿಕೊಳ್ಳಲು ಅದರಿಂದ ನೀರು ಬೀಳದಂತೆ ಮಾಯದಿಂದ ಗಿಂಡಿಯ ಮೂತಿಯನ್ನು ಸೂಕ್ಷ್ಮರೂಪದಿಂದ ಅಡ್ಡಗಟ್ಟಿದರು ನೀರು ವಾಮನನ ಕೈಯೊಳಗೆ ಬೀಳದಿರಲು ವಾಮನನು ತನ್ನ ಬೆರಳಲ್ಲಿದ್ದ ದರ್ಭೆಯುಂಗುರದ ಕೊನೆಯಿಂದ ಗಿಂಡಿಯ ಮೂತಿಯೊಳಗೆ ಚುಚ್ಚಿದನು. ಆಗ ಅದು ಶುಕ್ರಾಚಾರ್ಯರ ಕಣ್ಣಿಗೆ ತಗುಲಿ ಒಂದು ಕಣ್ಣು ಕುರುಡಾಯಿತು.

ಅಲ್ಲವೆಂದರೆ—ವಿರೋಧಿಸಿದವರನ್ನು.

ಬಲ್ಲಿದ ಮಾವನ—ರಾಜನಾಗಿದ್ದ ಕಂಸನನ್ನು.

ಬಿಲಹರಿ ಚಾಪು

ಏನು ಮಾಡಲಿ ಈ ಮಗುವಿಗೇನಾಯಿತೋ, ಇದ
ರಾಗಮು ಬಲ್ಲವರು ತಿಳಿದು ಹೇಳಿ ಪ

ಕಣ್ಣ ಮುಚ್ಚನು ಯಾರು ದೃಷ್ಟಿಗೊಂಡರೊ ಮೊಲೆಯ
ನುಣ್ಣನು ಇನ್ನಿರುಳು ಎರೆದ ನೀರು
ತಣ್ಣಗಾದುದೊ ಏನೊ ಘುರುಘುರೆನ್ನುತಲಿದೆ
ಚಿಣ್ಣನು ಆಯೆಂದ ಬಾಯ್ಮುಚ್ಚನಮ್ಮ ೧

ಖಂಡ ಸಕ್ಕರೆ ಬೆಣ್ಣೆ ಕೊಟ್ಟರೊಲ್ಲದೆ ಮಣ್ಣ
ಹೆಂಟೆ ಬೇಡುವನಮ್ಮ ಕೈಲೇನು ಕೊಡಲಿ
ಮಂಡೆ ಜಡೆಗಟ್ಟಿದೆ ಮಾಡಲಿದಕಿನ್ನೇನು
ಹಿಂಡು ಸತಿಯರ ದೃಷ್ಟಿ ಘನವಾಯಿತಮ್ಮ ೨

ಮೊಲೆಯುಂಬುವಾಗ ಮೈ ಮರೆವಾಗುತಿದೆಯೆಂದು
ಕಲಿಕಿತನದಲೆನ್ನ ಕಾಡುತಾನೆ
ನೆಲೆಯ ಬಲ್ಲವರನ್ನು ಇಳೆಯೊಳೊಬ್ಬರ ಕಾಣೆ
ಚೆಲುವ ಶ್ರೀಪುರಂದರವಿಠಲನೆ ಬಲ್ಲ ೩

ಇದರಾಗಮು—ಇದರ ಗುಟ್ಟು, ರಹಸ್ಯ, ಮರ್ಮ. ವಿಷ್ಣುವನ್ನು ವಿಚಿತ್ರವಾದ ಮಗುವೆಂದು ಬಗೆದು, ಅದರ ಅಚ್ಚರಿಯ ಚರ್ಯೆಯನ್ನೆಲ್ಲ ವಿವರಿಸಿದ್ದಾರೆ. ಮಗುವಿಗೆ ಕೆಟ್ಟಕಣ್ಣು ತಾಗಿತೋ ಏನೋ (ದೃಷ್ಟಿದೋಷ) ಎಂದು ತಾಯಿ ಪರಿತಪಿಸುವಂತೆ ಕವಿಸಮಯ. ಈ ಮಗುವಿಗೆ ಹೀಗೇಕೆ ಆಯಿತು ಎಂದು ಬಲ್ಲವರು ಯಾರು ?

ಕಣ್ಣ ಮುಚ್ಚನು—ಕಣ್ಣುರೆಪ್ಪೆಯಿಲ್ಲದಿರುವ ಮೀನು (ಮತ್ಸ್ಯ).

ಮೊಲೆಯನುಣ್ಣನು—ಆಮೆ (ಕೂರ್ಮ).

ಘುರುಘುರೆನ್ನುತಿದೆ—ಹಂದಿ (ವರಾಹ).

ಆಯೆಂದ ಬಾಯ್ಮುಚ್ಚನು—ಸಿಂಹ (ನರಸಿಂಹ).

ಮಣ್ಣಹೆಂಟೆ ಬೇಡುವನು—ವಾಮನ.

ಕೈಲೇನು ಕೊಡಲಿ—ಕೈಯಲ್ಲಿ ಕೊಡಲಿಯೇನು (ಪರಶುರಾಮ).

ಮಂಡೆ ಜಡೆಗಟ್ಟಿದೆ—ಅರಣ್ಯವಾಸದಲ್ಲಿ (ರಾಮ).

ಹಿಂಡು ಸತಿಯರ ದೃಷ್ಟಿ...—ಗೋಪಿಕಾಸ್ತ್ರೀಯರ ನೋಟ (ಕೃಷ್ಣ).

ಮೈ ಮರೆವಾಗುತಿದೆ—ಬತ್ತಲೆಯಿರುವ (ಬುದ್ಧ).

ಕಲಿಕಿತನದಲೆನ್ನ...—ಕಲ್ಕಿ.



ಕಾಂಬೋದಿ ಝಂಪೆ

ಪೊಂಗೊಳಲನೂದುತಿಹ ಯದುಕುಲೋತ್ತುಂಗ ಪ

ಪೆಂಗಳಾಪಾಂಗ ನೀರಾಜಿತ ಶುಭಾಂಗ ಅ

ಸಲಿಲಗಾಚಲಧರನೆ ಇಳೆಯಾಣ್ಮ ಜ್ವಲನೇತ್ರ
ಬಲಿಯ ಬೇಡಿದೆ ಭೃಗುಕುಲಜನೆನಿಸಿ
ಬಲಿದ ಬಿಲ್ಲನೆ ಮುರಿದು ಲಲನೆಯರ ಪಶನಾಗಿ
ಖಳರ ಸಂಬೋಧಿಸಿದೆ ಚೆಲುವ ಹಯವೇರಿ ೧

ಬಿಡದೆ ನೋಡಿದೆ ಬೆಟ್ಟದಡಿಗೆ ಬೆನ್ನನು ಕೊಟ್ಟೆ
ಅಡವಿಚರ ಕಡುಕೋಪಿ ಕೊಡೆಯ ಪಿಡಿವ
ಕೊಡಲಿಕೈ ಜಡೆಧರಿಸಿ ಗಿಡಹತ್ತಿ ಕೆಡಿಸಿ ನ
ನ್ಮಡದಿಯರ ಹಯವೇರಿ ಕಡಿದೆ ರಣಶೂರ ೨

ವಾರಿಚರ ಕೂರ್ಮಾವತಾರ ಸೂಕರ ಹರಿಯೆ
ಧಾರುಣಿಯನಳೆದೆ ಶೂರರನು ಗೆಲಿದೆ
ನೀರಜಾಕ್ಷಿಯ ತಂದೆ ಚೋರೆ ವ್ರತವನಳಿದೆ ಹಯ
ವೇರಿದನೆ ಪುರಂದರವಿಠಲ ಜಗವಯ್ಯ ೩

[ಈ ಪದದಲ್ಲಿ ದಶಾವತಾರದ ವರ್ಣನೆ ಮೂರು ಬಾರಿ ಬಂದಿದೆ; ಮೂರು ನುಡಿಗಳಲ್ಲಿ ಮೂರು ಬಗೆಯಾಗಿ. ಮುಖ್ಯವಾಗಿ ಕೃಷ್ಣನ ಲೀಲೆಯನ್ನು ('ಪೆಂಗಳ ಅಪಾಂಗ ನೀರಾಜಿತ', ಹೆಂಗಳೆಯರ ಕುಡಿನೋಟದಿಂದ ಬೆಳಗುವ) ಉಲ್ಲೇಖಿಸಿ ಅವನವೇ ಹತ್ತು ಅವತಾರಗಳು ಎಂದು ಹೇಳುವುದು.]

ಸಲಿಲಗ—ನೀರಲ್ಲಿ ಹೋಗುವುದು, ಮೀನು (ಮತ್ಸ್ಯ).
ಅಚಲಧರ—ಮಂದರಪರ್ವತವನ್ನು ಹೊತ್ತವನು (ಕೂರ್ಮ).
ಇಳೆಯಾಣ್ಮ—ಜಗತ್ತಿಗೆ ಪ್ರಿಯ.

ಜ್ವಲನೇತ್ರ—ಕೋಪದಿಂದ ಕೆಂಗಣ್ಣಿನಾದವನು (ನರಸಿಂಹ).

ಲಲನೆಯರ ವಶನಾಗಿ—ಗೋಪಿಕಾಸ್ತ್ರೀಯರ ವಶನಾಗಿ.

ಖಳರ—ದೈತ್ಯರನ್ನು ಮೋಹನಗೊಳಿಸಲು.

ಬಿಡದೆ ನೋಡಿದೆ—ಮೀನಿಗೆ ಕಣ್ಣುರೆಪ್ಪೆಯಿಲ್ಲವಾಗಿ, ಅದು ಕಣ್ಣುಮುಚ್ಚುವುದಿಲ್ಲ ವೆಂಬ ಪ್ರತೀತಿ.

ಅಡವಿಚರ—ವರಾಹ.

ಕಡುಕೋಪಿ—ನರಸಿಂಹ.

ಕೊಡೆಯ ಪಿಡಿದು—ಗೋವರ್ಧನೋದ್ಧರಣ.

ಜಡೆ ಧರಿಸಿ—ರಾಮನ ಜಟಾಸಂಗ್ರಹಣ, ಅರಣ್ಯವಾಸದಲ್ಲಿ.

ಗಿಡ ಹತ್ತಿ—ಗೋಪಿಕಾಸ್ತ್ರೀಯರು ಕೊಳದಲ್ಲಿ ಬೆತ್ತಲೆಯಾಗಿ ಸ್ನಾನ ಮಾಡುತ್ತಿರುವಾಗ ಅವರ ಬಟ್ಟೆಗಳನ್ನೆಲ್ಲ ಒಯ್ದು, ಮರಹತ್ತಿ ಕೂತ ಪ್ರಸಂಗ, ಕೃಷ್ಣಾವತಾರದಲ್ಲಿ.

ವಾರಿಚರ—ಮೀನು.



ಆನಂದಭೈರವಿ ಆದಿ

ಏನಣ್ಣ ನಿನಗೇನಣ್ಣ
ಕಣ್ಣೇಕಣ್ಣ ಮುಚ್ಚೆವೊಲ್ಲ್ಯಣ್ಣ
ಏನಣ್ಣ ನಿನ್ನ ಗೋಳಣ್ಣ
ಕಣ್ಣಿಂದ ನೋಡವೊಲ್ಲ್ಯಣ್ಣ ೧

ಗೂನಣ್ಣ ಬಲು ಗೂನಣ್ಣ
ಗಿರಿಯು ಹ್ಯಾಂಗೆ ನೀ ಹೊತ್ತ್ಯಣ್ಣ
ಹೀನ ಅಸುರರ ಹ್ಯಾಂಗಣ್ಣ
ಮೋಸವ ನೀ ಮಾಡಿದ್ಯಣ್ಣ ೨

ಹಲ್ಲಣ್ಣ ಕೋರೆ ಹಲ್ಲಣ್ಣ
ಭುವಿಯು ಹ್ಯಾಂಗೆ ನೀ ಹೊತ್ತ್ಯಣ್ಣ
ಒಳ್ಳೆ ಒಳ್ಳೆ ಭಕುತರನ್ನ
ಮೆಚ್ಚಿ ನೀನು ಬಂದ್ಯಣ್ಣ ೩

ಘೋರನ ಮೊರೆ ಕೇಳಿಯಣ್ಣ
ಕಂಭದಿಂದ ಬಂದ್ಯಣ್ಣ
ಘೋರವಾದ ನೋಟವ ನೋಡಿ ಅವ
ನಪ್ಪನ ನೀ ಬಡಿದ್ಯಣ್ಣ ೪

ಪುಟ್ಟು ಪುಟ್ಟು ಹೆಜ್ಜೆಣ್ಣ
ಇಟ್ಟು ನೀ ಅದನ್ನ
ಕೊಟ್ಟ ಮಣ್ಣಿನ ಒಂದೇ ಬಾರಿ
ಅಳೆದ್ಯಣ್ಣ ನೀ ಅಳೆದ್ಯಣ್ಣ ೫

ರಾಮಣ್ಣ ಬಡಿಬ್ಯಾಡಣ್ಣ
ರಾಯನೊಬ್ಬನಿಲ್ಲಣ್ಣ
ನಮ್ಮ ರಾಮಣ್ಣ ಹುಟ್ಟಬೇಕಣ್ಣ
ರಾವಣನ ಬಡಿಬೇಕಣ್ಣ ೬

ಎಲ್ಲ್ಯಣ್ಣ ನೀ ಹುಟ್ಟಿದ್ಯಣ್ಣ
ಎಲ್ಲ್ಯಣ್ಣ ನೀ ಬೆಳೆದ್ಯಣ್ಣ
ಕೊಲ್ಲ ಬಂದ ಹೆಣ್ಣಿನ ನೀ ಮಾಡಿದ್ಯಣ್ಣ
ನೀ ಮಾಡಿದ್ಯಣ್ಣ ೭

ಮಾವನ ನೀ ಕಳೆದ್ಯಣ್ಣ
ಮಾನಿನಿಯರ ನೀ ಪಿಡಿದ್ಯಣ್ಣ
ಮಾನವರ ಪಾಲಿಪುದಕ್ಕೆ
ಕುದುರೆಯ ನೀ ಏರಿದ್ಯಣ್ಣ ೮

ವ್ಯರ್ಥವಾಗಿ ಐದಲಣ್ಣ
ವರ್ಷಗಳು ಪೋಯಿತಣ್ಣ
ಮರೆತುಹೋಗದೆ ಕೇಳಣ್ಣ
ನಿನ್ನ ಧ್ಯಾನವೆನಗೆ ನೀಡಣ್ಣ ೯

ಇಲ್ಲಣ್ಣ ಕೇಳು ಇಲ್ಲಣ್ಣ
ನೀನಿಲ್ಲದೆ ಒಂದಿಲ್ಲಣ್ಣ
ಎಲ್ಲಾವು ನೀ ಬಲ್ಲ್ಯಣ್ಣ
ನಿನ್ನ ಬಲ್ಲವರೆಲ್ಲಣ್ಣ ೧೦

ಮೊದಲಣ್ಣ ನೀ ಮೊದಲಣ್ಣ
ಕೊನೆಯಲಿರುವೆ ನೀನಣ್ಣ
ಮೊದಲು ಕೊನೆಗಳು ಇಲ್ಲಣ್ಣ
ತಂದೆ ಪುರಂದರವಿಠಲಣ್ಣ ೧೧

[ಜಾನಪದ ಶೈಲಿಯಲ್ಲಿರುವ ದಶಾವತಾರದ ಪದ ಮತ್ಸ್ಯ, ಕೂರ್ಮ (ಗೂನಣ್ಣ) ವರಾಹ, ನರಸಿಂಹ ಮೊದಲಾದ ಅವತಾರಗಳ ಕ್ರಮವಾದ ಸುಂದರ ನಿರೂಪಣೆ ಇಲ್ಲಿದೆ.]

ಸೌರಾಷ್ಟ್ರ ಅಟ್ಟ

ಕೇಶವ ಮಾಧವ ಗೋವಿಂದ ವಿಠಲನೆಂಬ ದಾಸಯ್ಯ ಬಂದಕಾಣೆ ಪ

ದೋಷರಹಿತ ನರವೇಷವ ಧರಿಸಿದ ದಾಸಯ್ಯ ಬಂದಕಾಣೆ ಅ

ಖಳನು ವೇದವನೊಯ್ಯೆ ಪೊಳೆವ ಕಾಯನಾದ ದಾಸಯ್ಯ ಬಂದಕಾಣೆ
ಘಳಿಲನೆ ಕೂರ್ಮ ತಾನಾಗಿ ಗಿರಿಯ ಪೊತ್ತ ದಾಸಯ್ಯ ಬಂದಕಾಣೆ
ಇಳೆಯ ಕದ್ದಸುರನ ಕೋರೆದಾಡಿಲಿ ಕೊಂದ ದಾಸಯ್ಯ ಬಂದಕಾಣೆ
ಛಲದಿ ಕಂಭದಿ ಬಂದು ಅಸುರನ ಸೀಳಿದ ದಾಸಯ್ಯ ಬಂದಕಾಣೆ ೧

ಬಲಿಯ ದಾನವ ಬೇಡಿ ನೆಲನ ಅಳೆದು ನಿಂದ ದಾಸಯ್ಯ ಬಂದಕಾಣೆ
ಛಲದಿ ಕ್ಷತ್ರಿಯರ ಕುಲವ ಸಂಹರಿಸಿದ ದಾಸಯ್ಯ ಬಂದಕಾಣೆ
ಲಲನೆಯನೊಯ್ಯೆ ತಾ ತಲೆಹತ್ತನ ಕೊಂದ ದಾಸಯ್ಯ ಬಂದಕಾಣೆ
ನೆಲಕೊತ್ತಿ ಕಂಸನ ಬಲವನಳಿದ ಮುದ್ದು ದಾಸಯ್ಯ ಬಂದಕಾಣೆ ೨

ಪುಂಡತನದಿ ಪೋಗಿ ಪುರವನುರುಪಿ ಬಂದ ದಾಸಯ್ಯ ಬಂದಕಾಣೆ
ಲಂಡರ ಸದೆಯಲು ತುರಗವನೇರಿದ ದಾಸಯ್ಯ ಬಂದಕಾಣೆ
ಹಿಂಡು ವೇದಗಳೆಲ್ಲ ಅರಸಿ ನೋಡಲು ಸಿಗದ ದಾಸಯ್ಯ ಬಂದಕಾಣೆ
ಪಾಂಡುರಂಗ ನಮ್ಮ ಪುರಂದರವಿಠಲ ದಾಸಯ್ಯ ಬಂದಕಾಣೆ ೩

[ಅವತಾರಗಳು ಮನುಷ್ಯರೂಪದಿಂದ ಇದ್ದರೂ, ಪ್ರಾಕೃತವಾದ ದೋಷಗಳ ಸಂಬಂಧವಿಲ್ಲದೆ ಅವನದ್ದು ದಿವ್ಯದೇಹ ; ಶುಕ್ರಶೋಣಿತಗಳಿಂದ ಉಂಟಾದ ಅಥವಾ ವಿಕಾರಗಳಿಗೆ ಪಕ್ಕಾಗುವಂಥ ಶರೀರವಲ್ಲ. ಅವನ ಅವತಾರಗಳು ಲೀಲಾಮಾತ್ರ.]

ದಾಸಯ್ಯ—ದಾಸರ ಅಯ್ಯ, ಒಡೆಯ ; ಆರಾಧ್ಯದೈವ.

ಬಂದ—ಭೂಮಿಯ ಮೇಲೆ ತೋರಿಕೊಂಡ.

ಕಾಣೆ—ಬಂದುದನ್ನು ಕಾಣೆಯಾ ? ಅರಿಯೆಯಾ ?

ಪೂರ್ವಿ ಆದಿ

ಮಂಗಳಂ ಜಯ ಮಂಗಳಂ ಪ

ನಿಗಮವ್ವವ ತಂದಾ ಮತ್ಸ್ಯಾವತಾರಗೆ
ನಗವ ಬೆನ್ನಿಲಿ ಪೊತ್ತ ಕೂರ್ಮನಿಗೆ
ಜಗವನುದ್ಧರಿಸಿದ ವರಾಹಾವತಾರಗೆ
ಮಗುವಿನ ಕಾಯ್ದ ಮುದ್ದು ನರಸಿಂಹಗೆ ೧

ಭೂಮಿಯ ದಾನವ ಬೇಡಿದಗೆ
ಆ ಮಹಾ ಅರಸರ ಗೆಲಿದವಗೆ
ರಾಮಚಂದ್ರನೆಂಬ ಸ್ವಾಮಿಗೆ ಸತ್ಯ
ಭಾಮೆಯ ಅರಸ ಗೋಪಾಲಕೃಷ್ಣಗೆ ೨

ಬತ್ತಲೆ ನಿಂತಿಹ ಬುದ್ಧನಿಗೆ
ಉತ್ತಮ ಹಯವನೇರಿದ ಕಲ್ಕಿಗೆ
ಹತ್ತವತಾರದಿ ಭಕ್ತರ ಸಲಹಿದ
ನಿತ್ಯ ಶ್ರೀ ಪುರಂದರವಿಠಲನಿಗೆ ೩

ನಿಗಮವ—ವೇದವನ್ನು.

ನಗವ—ಬೆಟ್ಟವನ್ನು (ಮಂದರ ಪರ್ವತ).

ನಿತ್ಯ—ಅವತಾರಗಳಿಗೆ ಕಾರಣ, ಮೊದಲು, ಕೊನೆಗಳಿದ್ದರೂ ಹರಿಗೆ ಅವು ಇರವು ; ಆದುದರಿಂದ ಅವನು ನಿತ್ಯ.

ಸೌರಾಷ್ಟ್ರ ಅಟ್ಟ

ಜಯ ಮಂಗಳಂ ನಿತ್ಯ ಶುಭ ಮಂಗಳಂ ಪ

ಮಕುಟಕೆ ಮಂಗಳ ಮತ್ಸ್ಯಾವತಾರಗೆ
ಮುಖಕೆ ಮಂಗಳ ಮುದ್ದು ಕೂರ್ಮನಿಗೆ
ಸುಕಂಠಕ್ಕೆ ಮಂಗಳ ಸೂಕರ ರೂಪಗೆ
ನಖಗೆ ಮಂಗಳ ಮುದ್ದು ನರಸಿಂಹಗೆ ೧

ವಕ್ಷಕೆ ಮಂಗಳ ವಟು ವಾಮನನಿಗೆ
ಪಕ್ಷಕೆ ಮಂಗಳ ಭಾರ್ಗವನಿಗೆ
ಕಕ್ಷಕೆ ಮಂಗಳ ಕಾಕುಸ್ಥ ರಾಮನಿಗೆ
ಕುಕ್ಷಿಗೆ ಮಂಗಳ ಶ್ರೀಕೃಷ್ಣಗೆ ೨

ಊರುಗಳಿಗೆ ಮಂಗಳ ಉತ್ತಮ ಬೌದ್ಧಗೆ
ಚರಣಕೆ ಮಂಗಳ ಸಿರಿ ಕಲ್ಕಿಗೆ
ಪರಿಪರಿ ರೂಪಕೆ ಪರಮ ಮಂಗಳ ನಮ್ಮ
ಪುರಂದರವಿಠಲಗೆ ಶುಭಮಂಗಳ ೩

[ಪಲ್ಲವಿಯು 'ಮಂಗಳ ಮಾರಮಣಗೆ ಮಂಗಳ-ಜಯ' ಎಂಬ ಪಾಠಾಂತರದಲ್ಲಿದ್ದು, ಮಧ್ಯಮಾವತಿ ರಾಗ ಮತ್ತು ಆದಿತಾಳಗಳಲ್ಲಿ ಹಾಡುವುದೂ ಉಂಟು.]

ಮಕುಟ—ತಲೆ.
ಸುಕಂಠ—ಕತ್ತು.
ನಖ—ಉಗುರು.
ವಕ್ಷ—ಎದೆ.
ಪಕ್ಷ—ಪಕ್ಕ, ಎಡ-ಬಲ.
ಕಕ್ಷ—ಕಂಕುಳು.
ಕುಕ್ಷಿ—ಹೊಟ್ಟೆ.
ಊರು—ತೊಡೆ.

ಶಂಕರಾಭರಣ ಆದಿ

ಹರಿಯೇ ಗತಿ ಸಿರಿವಿರಿಂಚಿ ಶಿವರಿಗೆ
ಹರಿಯೇ ಗತಿ ಸುರವ ಸುರಾದಿಗಳಿಗೆ ಪ

ರುಕ್ಮಿಣೀದೇವಿಯು ಶಿಶುಪಾಲಗೀವೆನೆಂದು
ರುಕ್ಮಿ ಸಂಭ್ರಮಿಸಲು ಕೃಷ್ಣ ಬಂದು
ಸಕಲ ರಾಯರುಗಳು ಸನ್ನದ್ಧರಾಗಿರೆ
ರುಕುಮಿಣಿಯನು ತಂದು ವರಿಸಿ ಆಳಿದನಾಗಿ ೧

ಹಯಾಸ್ಯನೆಂಬುವ ವೇದವ ಕದ್ದೊಯ್ಯೆ
ಹಯಗ್ರೀವನಾಗಿ ಹರಿಯವನ
ಕಾಯವ ಖಂಡಿಸಿ ಅಜಗೆ ವೇದವನಿತ್ತು
ಕಾಯ್ದ ಕಮಲಾಕ್ಷನೆ ದೈವವೆಂದು ೨

ಭಸುಮಾಸುರನಿಗೊಂದಸದಳ ವರವಿತ್ತು
ತ್ರಿಶೂಲಧರ ಓಡಿ ಬಳಲುತಿರೆ
ಬಿಸುರುಹ ನಯನನು ಭಸುಮಾಸುರನನು
ಭಸುಮವ ಮಾಡಿ ಶಿವನ ಪೊರೆದನಾಗಿ ೩

ಸುರವನ ರಾಜ್ಯವ ಬಲಿಯಾಕ್ರಮಿಸಲು
ಹರಿ ದಾನವ ಬೇಡಿ ಯಜ್ಞದಲಿ
ಚರಣದಿಂದಿಳೆಯು ಸ್ವರ್ಗವ ಈರಡಿ ಮಾಡಿ
ಸುರಪಗೆ ರಾಜ್ಯವನಿತ್ತು ಪೊರೆದನಾಗಿ ಪುರಂದರವಿಠಲ ೪

[ಈ ಪದದಲ್ಲಿ ಕೃಷ್ಣ, ಮತ್ಸ್ಯ (ಹಯಗ್ರೀವ), ವಾಮನ (ತ್ರಿವಿಕ್ರಮ) ಈ ಮೂರು ಅವತಾರಗಳ ಉಲ್ಲೇಖವಿದೆ (ಒಂದನೆಯ, ಎರಡನೆಯ ಮತ್ತು ನಾಲ್ಕನೆಯ ನುಡಿಗಳಲ್ಲಿ) ಮೋಹಿನಿಯಾಗಿ ಭಸ್ಮಾಸುರನನ್ನು ನಾಶಮಾಡಿದ ಪ್ರಸಂಗವೂ ಮೂರನೆಯ ನುಡಿಯಲ್ಲಿ ಬಂದಿದೆ. ಕಡೆಯ ನುಡಿಯಲ್ಲಿ ಅವತಾರದ ಪ್ರಯೋಜನವನ್ನು ಸಂಗ್ರಹವಾಗಿ ಹೇಳಿದ್ದಾರೆ ]

ರುಕ್ಮಿ—ರುಕ್ಮಿ ವಿದರ್ಭರಾಜನಾದ ಭೀಷ್ಮಕನ ಹಿರಿಯ ಮಗ ; ರುಕ್ಮಿಣಿಯ ಸೋದರ. ಭೀಷ್ಮಕನ ಇತರ ಮಕ್ಕಳಾದ ರುಕ್ಮಕೇಶ, ರುಕ್ಮಬಾಹು, ರುಕ್ಮಮಾಲ, ರುಕ್ಮರಥ ಇವರು ರುಕ್ಮಿಣಿಯು ಕೃಷ್ಣನನ್ನು ಮದುವೆಯಾಗಲು ಒಪ್ಪಿದ್ದರೂ ರುಕ್ಮಿಯೊಬ್ಬ ವಿರೋಧಿಸಿ, ರುಕ್ಮಿಣಿಯನ್ನು ಶಿಶುಪಾಲನಿಗೇ ಕೊಡುವುದೆಂದು ಹಟ ಹಿಡಿದ. ಮದುವೆಗೆ ಮುಂಚೆ ಗೌರೀಪೂಜೆಯ ನೆವದಿಂದ ರುಕ್ಮಿಣಿಯು ಊರ ಹೊರಗೆ ಬಂದಾಗ ಕೃಷ್ಣನು ಅವಳನ್ನು ಕರೆದೊಯ್ದ ; ರುಕ್ಮಿಣಿಯೇ ಗುಟ್ಟಾಗಿ ಕೃಷ್ಣನಿಗೆ ಹೇಳಿಕಳುಹಿಸಿದ್ದಳು.

ಹಯಾಸ್ಯ...—ಹಯಗ್ರೀವನೆಂಬ ರಾಕ್ಷಸನು ವೇದವನ್ನು ಕದ್ದೊಯ್ಯಲು ವಿಷ್ಣುವು ಹಯಗ್ರೀವನಾಗಿಯೇ ಕಾಣಿಸಿಕೊಂಡು ಅವನೊಂದಿಗೆ ಕಾದು, ಅವನನ್ನು ಕೊಂದು, ವೇದವನ್ನು ಮತ್ತೆ ಬ್ರಹ್ಮನಿಗೆ ಕೊಟ್ಟ.

ಭಸುಮಾಸುರ—ಭಸ್ಮಾಸುರನ ಕತೆ.

ಬಿಸುರುಹನಯನ—ತಾವರೆಗಣ್ಣಿನವ, ವಿಷ್ಣು.

ಸುರಪನ...—ಇಂದ್ರನಿಗೆ ರಾಜ್ಯವನ್ನು ಮತ್ತೆ ಗಳಿಸಿಕೊಡಲು ವಾಮನನಾಗಿ ಅವತರಿಸಿದ.



೧೧೨

ಧನ್ಯಾಸಿ ರೂಪಕ

ಗಾಳಿ ಬಂದ ಕೈಯಲ್ಲಿ ತೂರಿಕೊಳ್ಳಿರೊ ಪ

ನಾಳೆ ಎನ್ನಬೇಡಿ ಇದೇ ವೇಳೆ ಬನ್ನಿರೊ ಅ

ವಾಸವಾದಿವಿನುತ ವೈಕುಂಠದೊಡೆಯ ನಮ್ಮ ಹೃದಯ
ವಾಸನೆಂದು ಬಿಡದೆ ಕೇಶವನ್ನ ನೆನೆಯಿರೊ ೧

ಹೇಯ ಸಂಸಾರದ ಮರ್ಮ ಘಾಯವದು ಮಾಯವಂತೆ
ಬಾಯಿ ಮುಚ್ಚಿಕೊಳ್ಳದೆ ನಾರಾಯಣನ್ನ ನೆನೆಯಿರೊ ೨

ಬೋಧೆಗಳಲಿ ಸದ್ಗುರುಬೋಧೆ ಇದು ಎಂದೆನುತ
ಗಾಥೆಗಳೆಲ್ಲನು ಬಿಟ್ಟು ಮಾಧವನ ನೆನೆಯಿರೊ ೩

ಇಂದಿನ ದಿನವೆ ಸುದಿನ ಇಂದಿನ ಸೊಲ್ಲೆ ಲೇಸೆಂದು
ಇಂದಿರಾರಮಣ ಗೋವಿಂದನ್ನ ನೆನೆಯಿರೊ ೪

ಘನ್ನ ದೇವರ್ಕಳಿಗಿನ್ನು ಮಹಿಮನು ಹರಿ
ಅನ್ಯವಿಲ್ಲವೆಂದು ಶ್ರೀ ವಿಷ್ಣುವನ್ನು ನೆನೆಯಿರೊ ೫

ಸಾಧನೆಯ ಭಕ್ತಿಯೊಳು ಶೋಧನೆಗೈಯುತ್ತ ಕಂಡೆ
ವೀ ಧನವೆನುತ ಮಧುಸೂದನನ್ನ ನೆನೆಯಿರೊ ೬

ಶಕ್ರನಿಗೆ ಒಲಿದು ಜಗಚ್ಚಕ್ರವನ್ನು ಅಳೆದು ಮತ್ತೆ
ಶುಕ್ರಶಿಷ್ಯನ ಗೆಲಿದ ತ್ರಿವಿಕ್ರಮನ್ನ ನೆನೆಯಿರೊ ೭

ಒಮ್ಮೆ ನೆನೆಯಲು ಭುಕ್ತಿ ಒಮ್ಮೆ ನೆನೆಯಲು ಮುಕ್ತಿ
ಒಮ್ಮನ ಪೂರ್ವಕದಿಂದ ವಾಮನನ್ನ ನೆನೆಯಿರೊ ೮

ಈ ಧರೆ ರಮಣನೆ ನಮ್ಮ ಆಧಾರ ಧೊರೆಯು ಬೇರೆ
ಆಧಾರವ ಕಾಣೆನೆಂದು ಶ್ರೀಧರನ್ನ ನೆನೆಯಿರೊ ೯

ಕಾಸಿಗೆ ಕೈಚಾಚುವಂಥ ಆಶಾಪಾಶವನ್ನು ತೊರೆದು
ಕಾಶಿವಾಸವಿನುತ ಹೃಷಿಕೇಶನನ್ನು ನೆನೆಯಿರೊ ೧೦

ಈ ಭವಪತಿಮಿರಕ್ಕೆ ಕೋಟಿ ವಿಭಾವಸು ಸಂಕಾಶ
ಶೋಭನಾಕಾರ ಪದ್ಮನಾಭನನ್ನು ನೆನೆಯಿರೊ ೧೧

ಈ ದುರಾಚಾರ ಗಿರಿ ಬಿದುರವೆಂದರಿತು ಸನು
ಮೋದದಿಂದ ಮನದಿ ದಾಮೋದರನ್ನ ನೆನೆಯಿರೊ ೧೨

ಪುರುಷನಾಗಿ ಹುಟ್ಟಿ ನೂರು ವರುಷ ಬದುಕಿದುದಕೆ ಫಲವ
ಹರುಷದಿಂದ ಪಡೆಯೆ ಸಂಕರುಷಣನ ನೆನೆಯಿರೊ ೧೩

ಇವನೆ ಸರ್ವಶರಣ್ಯ ಇವನೆ ಲೋಕೈಕ ಮಾನ್ಯ
ದೇವ ದೇವೋತ್ತಮ ವಾಸುದೇವನನ್ನು ನೆನೆಯಿರೊ ೧೪

ವಿದ್ಯೆ ಬೇಕು ಬುದ್ಧಿ ಬೇಕು ಸಿದ್ಧಿ ಬೇಕು ಎಂಬುವರು
ಪ್ರದ್ಯುಮ್ನ ಪ್ರದ್ಯುಮ್ನನೆಂದು ನೆನೆಯಿರೊ ೧೫

ಕದ್ದು ಹುಸಿಯನಾಡಿ ಅಪರಬುದ್ಧಿಯಿಂದ ಕೆಡಲಿಬೇಡಿ
ಬುದ್ಧಿವಂತರಾಗಿ ಅನಿರುದ್ಧನ್ನ ನೆನೆಯಿರೊ ೧೬

ನಿತ್ಯನೇಮವೆಂಬೋದಿಲ್ಲ ಮತ್ತೆ ದಾನಧರ್ಮವಿಲ್ಲ
ವ್ಯರ್ಥವಾಗಿ ಕೆಡದೆ ಪುರುಷೋತ್ತಮನ್ನ ನೆನೆಯಿರೊ ೧೭

ರಕ್ಷೆಯಂತ್ರ ಮಂತ್ರ ತಂತ್ರಾಪೇಕ್ಷೆ ಬೇಡ ನಿಮ್ಮ ಜನ್ಮ
ಮೋಕ್ಷವನ್ನು ಪಡೆಯಲು ಅಧೋಕ್ಷಜನ್ನ ನೆನೆಯಿರೊ ೧೮

ಬ್ರಹ್ಮನಾಗಿ ನಿರ್ಮಿಸಿ ಪರಬ್ರಹ್ಮನಾಗಿ ರಕ್ಷಿಸಿ
ಸಂಹಾರಕ್ಕೆ ರುದ್ರ ನಾರಸಿಂಹನನ್ನು ನೆನೆಯಿರೊ ೧೯

ಮುಚ್ಚುಮರೆಯ ಮಂತ್ರವಲ್ಲ ವೆಚ್ಚ ಒಂದು ಕಾಸು ಇಲ್ಲ
ನೆಚ್ಚದೆ ಸಂಸಾರ ಶ್ರೀಮದಚ್ಯುತನ್ನ ನೆನೆಯಿರೊ ೨೦

ಕಾದ್ರವೇಯ ಶಯನ ಕರುಣಾದ್ರ್ರಹೃದಯನ ನಿತ್ಯ
ಭದ್ರದಾಯಕ ಶ್ರೀ ಜನಾರ್ದನನ್ನ ನೆನೆಯಿರೊ ೨೧

ಇಂದ್ರಿಯಂಗಳೇಕವಾಗಿ ಚಂದ್ರಿಕೆ ತೆರದಿ ಸುತ್ತಿ
ತೊಂದ್ರೆ ತಾರದ ಮುನ್ನುಪೇಂದ್ರನನ್ನು ನೆನೆಯಿರೊ ೨೨

ಹರಿಹರಿಯೆನಲು ದುರಿತ ಹರಿದು ಓಡುವುದು ತ್ವರಿತ
ಹಿರಿದು ಭಕ್ತಿಯಿಂದ ಸಿರಿ ಹರಿಯನ್ನು ನೆನೆಯಿರೊ ೨೩

ಕೃಷ್ಣನ ನಾಮವೆ ಗತಿ ಕೃಷ್ಣನ ಪಾದವೆ ಗತಿ
ಕಷ್ಟವೆಲ್ಲ ನೀಗಲು ಶ್ರೀಕೃಷ್ಣನನ್ನ ನೆನೆಯಿರೊ ೨೪

ಭುಕ್ತಿ ಕೊಡುವ ಮುಕ್ತಿ ಕೊಡುವ ಮತ್ತೆ ಸಾಯುಜ್ಯ ಕೊಡುವ
ಶಕ್ತ ನಮ್ಮ ಪುರಂದರವಿಠಲನ್ನ ನೆನೆಯಿರೊ ೨೫

[ಇದು ಕೇಶವಾದಿ ಚತುರ್ವಿಂಶತಿ ಮೂರ್ತಿಗಳನ್ನು ಕುರಿತ ಪದ.]

ವಾಸವಾದಿ—ಇಂದ್ರನೇ ಮೊದಲಾದ ದೇವತೆಗಳಿಂದ

ಗಾಥೆಗಳೆಲ್ಲವು—ಗಾಹೆ ; ಲೌಕಿಕ ಕತೆ, ಪ್ರಸಂಗ, ಹರಟೆ.

ಶುಕ್ರಶಿಷ್ಯನ—ದೈತ್ಯಗುರುವಾದ ಶುಕ್ರಾಚಾರ್ಯರ ಶಿಷ್ಯ ಬಲಿಚಕ್ರವರ್ತಿಯನ್ನು.

ಭುಕ್ತಿ—ಪ್ರಾಪಂಚಿಕ ಸಂಪತ್ತು.

ಭವತಿಮಿರಕ್ಕೆ. .—ಸಂಸಾರವೆಂಬ ಕತ್ತಲೆಗೆ ವಿರೋಧಿಯಾಗಿ ಕೋಟಿಸೂರ್ಯರಂತೆ ಹೊಳೆಯುವ.

ಗಿರಿ ಬಿದುರ—ಬಿಡಿಸುವುದು ಶಿಥಿಲಗೊಳಿಸುವುದು ; ಕೆಟ್ಟ ನಡತೆಯೆಂಬ ಬೆಟ್ಟವನ್ನು ಸಡಿಲಿಸುವುದು. ಬಿದುರವು–ಅಲ್ಲಾಡುವುದಿಲ್ಲ.

ಅಪರಬುದ್ಧಿ—ಹೀನಬುದ್ಧಿ.

ಕಾದ್ರವೇಯ ಶಯನ—ಕದ್ರುವಿನ ಮಗ, ಸರ್ಪ ; ಶೇಷ ; ಅದರ ಮೇಲೆ ಪವಡಿಸಿದವನು.

ಭದ್ರದಾಯಕ—ಮಂಗಳವನ್ನು ನೀಡುವವನು

ಇಂದ್ರಿಯಂಗಳೇಕವಾಗಿ.. —ಇಂದ್ರಿಯಗಳೆಲ್ಲ ಮನಸ್ಸಿನ ವಶವಾಗಿದ್ದು, ಮನಸ್ಸಿನಲ್ಲೇ ಮುಗಿಯುತ್ತವೆ. ಇಂದ್ರಿಯಗಳೆಲ್ಲ ಮನಸ್ಸಿನಲ್ಲಿ ಒಂದಾಗಿ ; ಏಕಾಗ್ರಚಿತ್ತದಿಂದ.

ಚಂದ್ರಿಕೆ ತೆರದಿ ಸುತ್ತಿ—ಬೆಳದಿಂಗಳಿನಂತೆ ಪಸರಿಸಿ.

ತೊಂದ್ರೆ—ತೊಂದರೆ.

ಸಾಯುಜ್ಯ—ನಾಲ್ಕುಬಗೆಯ ಮುಕ್ತಿಗಳಲ್ಲಿ ಒಂದು (ಉಳಿದ ಮೂರು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ).

ಭೈರವಿ ಅಟ್ಟ

ಇಂಥಾ ಹೆಣ್ಣಿನ ನಾನೆಲ್ಲಿ ಕಾಣೆನು ಹೊಂತಕಾರಿ ಕಾಣಿರೊ ಪ

ಸಂತತ ಸುರರಿಗೆ ಪೀಯೂಷ ಉಣಿಸಿದ
ಪಂಕ್ತಿಯೊಳಗೆ ಪರವಂಚನೆ ಮಾಡಿದ ಅ

ಮಂದರಗಿರಿ ತಂದು ಸಿಂಧುವಿನೊಳಗಿಟ್ಟು
ಚಂದದಿ ಕಡೆದು ಅಮೃತವ ತೆಗೆದು
ಇಂದುಮುಖಿ ನೀ ಬಡಿಸೆಂದು ಕೊಟ್ಟರೆ
ದಂಧನಗಳ ಮಾಡಿ ದೈತ್ಯರ ವಂಚಿಸಿದ ೧

ವಿಶ್ವಾಸದಿಂದಲಿ ಅಸುರಗೆ ವರವಿತ್ತು
ತ್ರಿಶೂಲಧರ ಓಡಿ ಬಳಲುತಿರೆ
ನಸುನಗುತಲಿ ಬಂದು ಭಸ್ಮಾಸುರನಿಗೆ
ಭೋಗದಾಸೆಯ ತೋರಿ ಭಸ್ಮವ ಮಾಡಿದ ೨

ವಸುಧೆಯೊಳಗೆ ಹೆಣ್ಣು ಒಸಗೆಯಾಗದ ಮುನ್ನ
ಬಸಿರಲಿ ಬ್ರಹ್ಮನ ಪಡೆದವಳಿವಳು
ಕುಸುಮನಾಭ ಶ್ರೀ ಪುರಂದರವಿಠಲ
ಪೆಸರು ಪೊತ್ತಿಹಳು ಈ ಪೊಸ ಕನ್ನಿಕೆ ೩

[ಇದು ಮೋಹಿನಿ ಅವತಾರವನ್ನು ಕುರಿತ ಪದ. ಅಮೃತವನ್ನು ಪಡೆದುಕೊಳ್ಳಲೆಂದು ದೇವತೆಗಳೂ ದಾನವರೂ ಸಮುದ್ರವನ್ನು ಕಡೆಯಲು ತೊಡಗಿದಾಗ ಮಂದರ ಪರ್ವತವನ್ನೇ ಕಡಗೋಲನ್ನಾಗಿಯೂ ವಾಸುಕಿಯನ್ನೇ ಕಡೆಯುವ ಹಗ್ಗವನ್ನಾಗಿಯೂ ಮಾಡಿಕೊಂಡರು. ಸಮುದ್ರಮಥನದಿಂದ ಅಮೃತ ಹೊರಬಂದ ಮೇಲೆ ತಮಗೆ ಮಾತ್ರ ಅದು ದಕ್ಕಬೇಕೆಂದು ದೇವತೆಗಳೂ ದಾನವರೂ ಬಡಿದಾಡುತ್ತಿರುವಾಗ, ವಿಷ್ಣುವು ಮೋಹಿನಿಯಂತೆ ತೋರಿಕೊಂಡು ತಾನೇ ಎರಡೂ ಗುಂಪಿನವರಿಗೆ ಸಮನಾಗಿ ಹಂಚುವೆನೆಂದು ಹೇಳಿದಾಗ ಅವಳ ಚೆಲುವಿಗೆ ಮುಗ್ಧರಾದ ಅವರೆಲ್ಲ ಒಪ್ಪಿಕೊಂಡರು.

ಮೊದಲು ದೇವತೆಗಳಿಗೆ ಉಣಬಡಿಸಿ ಅವರ ಪಾಲು ಮುಗಿದೊಡನೆ ಮೋಹಿನಿ ಮಾಯವಾಗಿಬಿಟ್ಟಳು. ಹೀಗಾಗಿ ದಾನವರಿಗೆ ಅಮೃತದ ಪಾಲು ದೊರೆಯಲಿಲ್ಲ. ಭಸ್ಮಾಸುರನ ಕತೆಯಲ್ಲಿಯೂ ಶಿವನನ್ನು ದಾನವನ ಕಾಟದಿಂದ ತಪ್ಪಿಸಲು ವಿಷ್ಣು ಮೋಹಿನಿಯಾಗಿ ತೋರಿಕೊಂಡನು ಇದು ಎರಡನೆಯ ನುಡಿಯಲ್ಲಿ ಬಂದಿದೆ. ಅಲ್ಲೂ ಉಪಾಯದಿಂದಲೇ ಅಸುರನನ್ನು ಕೊಂದದ್ದು. ಮೂರನೆಯ ನುಡಿಯಲ್ಲಿ ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮ ಹೊರಹೊಮ್ಮಿದನಾಗಿ, ವಿಷ್ಣುವನ್ನು ಹೆಣ್ಣೆಂದು ಬಗೆದಿದ್ದಾರೆ.]

ಹೊಂತಕಾರಿ—ಉಪಾಯಗಳನ್ನು ಬಲ್ಲ.

ಪೀಯೂಷ—ಅಮೃತ.

ಪರವಂಚನೆ—ಹೆಚ್ಚಾದ ಮೋಸ.

ಸಿಂಧು—ಸಮುದ್ರ.

ದಂಧನ—ಕುತಂತ್ರ, ಮೋಹ

ವಿಶ್ವಾಸದಿಂದಲಿ—ಅಸುರನೊಬ್ಬನು ಶಿವನನ್ನು ಕುರಿತು ತಪಸ್ಸುಮಾಡಿ ಅವನನ್ನು ಮೆಚ್ಚಿಸಿ ತಾನು ಯಾರ ತಲೆಯ ಮೇಲೆ ಕೈಯಿರಿಸಿದರೆ ಅವರು ಸುಟ್ಟು ಬೂದಿಯಾಗುವಂತೆ ವರವನ್ನು ಪಡೆದುಕೊಂಡನು. ಶಿವನು ವರವನ್ನು ಕೊಟ್ಟೊಡನೆ ಅಸುರನು ಶಿವನ ತಲೆಯ ಮೇಲೇ ಕೈಯಿಡಲು ನೋಡಿದನು. ಭಯದಿಂದ ಶಿವನು ಓಡೋಡಿ ಬಂದು ವಿಷ್ಣುವಿನ ನೆರವನ್ನು ಕೋರಲು ವಿಷ್ಣು ಮೋಹಿನಿಯಾಗಿ ಮೈದಳೆದು ನಾಟ್ಯವಾಡುತ್ತ ಅಸುರನೆದುರು ಬಂದಳು. ಅಸುರನು ಅವಳಲ್ಲಿ ಮೋಹಗೊಂಡು ತನ್ನನ್ನು ಕೂಡಿಕೊಳ್ಳೆಂದು ಕೇಳಲು, ಆಕೆ ಅವನಿಗೆ ನಾಟ್ಯವನ್ನು ಮೊದಲು ಕಲಿಸುವೆನೆಂದು ಹೇಳುತ್ತ, ತನ್ನ ತಲೆಯ ಮೇಲೆ ಕೈಯಿರಿಸುವ ಭಂಗಿಯನ್ನು ತೋರಿಸಲು ಅಸುರನು ಕಪಟವನ್ನರಿಯದೆ ತನ್ನ ಕೈಯನ್ನು ತನ್ನ ತಲೆಯಮೇಲೇ ಒಯ್ಯಲು ಒಡನೆಯೇ ಸುಟ್ಟು ಬೂದಿಯಾದನೆಂದು ಕತೆ.

೧೧೪

ನಟ್ಟ

ಜಯ ಜಯ ಹರಿಯೆಂಬುವುದೇ ಸುದಿನವು
ಜಯ ಜಯ ಹರಿಯೆಂಬುದೇ ತಾರಾಬಲವು
ಜಯ ಜಯ ಹರಿಯೆಂಬುವುದೇ ಚಂದ್ರಬಲವು
ಜಯ ಜಯ ಹರಿಯೆಂಬುವುದೇ ವಿದ್ಯಾಬಲವು
ಜಯ ಜಯ ಹರಿಯೆಂಬುವುದೇ ದೈವಬಲವು
ಜಯ ಹರಿ ಪುರಂದರವಿಠಲನ ಬಲವಯ್ಯ ಸುಜನರಿಗೆ

[ಇದು 'ತದೇವ ಲಗ್ನಂ ಸುದಿನಂ ತದೇವ, ತಾರಾಬಲಂ ಚಂದ್ರಬಲಂ ತದೇವ। ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಂಘ್ರಿಯುಗಂ ಸ್ಮರಾಮಿ॥' ಎಂಬ ಶ್ಲೋಕದ ಛಾಯೆ. ಉಳಿದೆಲ್ಲ ಬಲಗಳೂ ಸರ್ವೋತ್ತಮನಾದ ಹರಿಯ ಬಲದಿಂದ ಬಲಗೊಂಡವೇ ಎಂದು ತಾತ್ಪರ್ಯ.]



ಪೂರ್ವಕಲ್ಯಾಣಿ ಆದಿ

ನೀನೇ ಬಲ್ಲಿದನೋ ಹರಿ, ನಿನ್ನ ದಾಸರು ಬಲ್ಲಿದರೋ ಪ

ನಾನಾ ತೆರದಿ ನಿಧಾನಿಸಿ ನೋಡಲು
ನೀನೆ ಭಕ್ತರಾಧೀನನಾದಮೇಲೆ ಅ

ಜಲಜ ಭವಾಂಡಕೆ ಒಡೆಯನೆಂದೆನಿಸಿ
ಬಲು ಬಲು ದೊಡ್ಡವನಹುದಹುದೋ
ಅಲಸದೆ ಹಗಲಿರುಳೆನ್ನದೆ ಅನುದಿನ
ಬಲಿಯ ಮನೆಯ ಬಾಗಿಲ ಕಾಯಿದಮೇಲೆ ೧

ಖ್ಯಾತಿಯಿಂದ ಪುರುಹೂತ ಸಹಿತ ಸುರ
ವ್ರಾತವು ನಿನ್ನನು ಓಲೈಸೆ
ಭೂತಳದೊಳು ಸಂಪ್ರೀತಿಗೆ ಸಿಲುಕಿ ನೀ
ಪಾರ್ಥನ ರಥಕೆ ಸೂತನಾದಮೇಲೆ ೨

ಪರಮ ಪುರುಷ ಪರಬೊಮ್ಮನೆಂದೆನುತಲಿ
ನಿರುತ ಶ್ರುತಿಯು ಕೊಂಡಾಡಲು, ಪಾಂಡವ
ರರಮನೆ ಆಟ್ಟೊಳಿಗದವನಂದದಿ
ಕರೆಕರೆದಲ್ಲಿಗೆ ಹೋಗಿ ಕಾಯ್ದುಮೇಲೆ ೩

ಧುರದಲಿ ಫಣೆಯನೊಡೆದ ಭೀಷ್ಮನ ಸಂ
ಹರಿಪೆನೆಂದು ಚಕ್ರವ ಪಿಡಿಯೆ
ಹರಿ ನಿನ್ನ ಕರುಣದ ಕವಚ ತೊಟ್ಟು ತಾ
ನಿರುವ ಕಾರಣ ಸುಮ್ಮನೆ ತಿರುಗಿದಮೇಲೆ ೪

ತರಳನು ಕರೆಯಲು ಭರದಿ ಕಂಭದಿ ಬಂದು
ನರಮೃಗ ರೂಪದಿಂದವನ ಕಾಯ್ದೆ
ವರದಾಯಕ ಪುರಂದರವಿಠಲ ನಿನ್ನ
ಸ್ಮರಿಪರ ಮನದಲಿ ಸೆರೆ ಸಿಕ್ಕಿದಮೇಲೆ ೫

ಬಲ್ಲಿದ—ತಿಳಿದವನು, ಎಲ್ಲವನ್ನೂ ಬಲ್ಲವನು (ಸರ್ವಜ್ಞ); ಭಾಗ್ಯವಂತ; ಬಲವುಳ್ಳವನು.

ಜಲಜ ಭವಾಂಡ—ಬ್ರಹ್ಮನು ಸೃಷ್ಟಿಮಾಡಿದ ಬ್ರಹ್ಮಾಂಡ

ಬಲು ಬಲು ದೊಡ್ಡವನು—ತಾರತಮ್ಯದಲ್ಲಿ ಉತ್ತಮೋತ್ತಮ, ಸರ್ವೋತ್ತಮ.

ಆಲಸದೆ...—ಹಾಗೆ ಎಲ್ಲ ದೇವತೆಗಳಿಗೂ ಮಿಗಿಲಾದರೂ, ವಾಮನನಾಗಿ ಬಲಿಯ ಬಾಗಿಲಿಗೆ ಬಂದನಲ್ಲವೆ ?

ಪುರುಹೂತ ಸಹಿತ —ಇಂದ್ರನೇ ಮೊದಲಾದ ದೇವತೆಗಳ ಗಡಣವು ನಿನ್ನನ್ನು ಸೇವಿಸುತ್ತಿರುವಾಗ. ನೀನು ಪಾಂಡವರಲ್ಲೊಬ್ಬನಾದ ಅರ್ಜುನನ ರಥಕ್ಕೆ ಸಾರಥಿಯಾಗಲಿಲ್ಲವೆ ?

ಧುರದಲಿ—ಯುದ್ಧದಲ್ಲಿ.

ತರಳನು—ಪ್ರಹ್ಲಾದನು.



ಕಲ್ಯಾಣಿ ತ್ರಿವಿಡೆ

ಅಂದಿಂದ ನಾ ನಿನ್ನ ನೆರೆ ನಂಬಿದೆನೊ ಕೃಷ್ಣ ಪ

ತಂದೆ ಗೋವಿಂದ ಮುಕುಂದ ನಂದನ ಕಂದ ಅ

ಬಲವಂತನುತ್ತಾನುಪಾದರಾಯನ ಕಂದ
ಬಲತಾಯಿ ನೂಕಲು ಅಡವಿಯೊಳು
ಜಲಜಾಕ್ಷ ನಿನ್ನ ಕುರಿತು ತಪವಿರಲಾಗಿ
ಒಲಿದು ಧ್ರುವಗೆ ಪಟ್ಟಗಟ್ಟಿದ್ದು ಕೇಳಿ ೧

ನಕ್ರಂಗೆ ಗಜರಾಜ ಸಿಕ್ಕು ಸರಸಿಯೊಳು
ದುಃಖದಿ ಶ್ರೀಹರಿ ಸಲಹೆನ್ನಲು
ಚಕ್ರದಿ ನೆಗಳ ಕಂಠವ ತರಿದು ಭಕ್ತನ
ವಕ್ರವ ಪರಿದಾದಿಮೂಲನೆಂಬುದ ಕೇಳಿ ೨

ದ್ರುಪದನ ಸುತೆಯು ದುಶ್ಶಾಸನ ಸಭೆಯೊಳು
ಕಪಟದಿ ಸೀರೆಯ ಸೆಳೆಯುತಿರೆ
ಸುಪರ್ಣವಾಹನ ಕೃಷ್ಣ ಸಲಹೆಂದಬಲೆಯ
ಅಪಮಾನದಿಂ ಕಾಯ್ದ ಶ್ರೀಹರಿಯೆಂಬುದ ಕೇಳಿ ೩

ಹರಿನಾರಾಯಣನೆಂದು ಪ್ರಹ್ಲಾದ ಒರೆಯಲು
ದುರುಳ ದಾನವನವನೊಳು ಮುನಿದು
ಕರೆ ನಿನ್ನ ಒಡೆಯನ ಎಂದು ಗರ್ಜಿಸೆ ನರ
ಹರಿ ಬಂದು ಒಡನೆಯೆ ಕಾಯ್ದನೆಂಬುದ ಕೇಳಿ ೪

ಅಂಬರೀಷಗೆ ದೂರ್ವಾಸ ಶಾಪವ ಕೊಡೆ
ಅಂಬುಜಲೋಚನ ಚಕ್ರದಿಂದ
ಬೆಂಬತ್ತಿ ಮುನಿಯು ಶಾಪವ ಪರಿಹರಿಸಿದ
ಕಂಬು ಚಕ್ರಧರ ಹರಿಯೆಂಬುದ ಕೇಳಿ ೫

ಛಲ ಬೇಡ ರಾಮನ ಲಲನೆಯ ಬಿಡುಯೆಂದು
ತಲೆ ಹತ್ತರವಗೆ ಪೇಳಲು ತಮ್ಮನ
ಬಳಲಿಸಿ ಹೊರಡಿಸಲವ ನಿನ್ನ ಮೊರೆಹೊಗೆ
ಸಲೆ ವಿಭೀಷಣಗೆ ಲಂಕೆಯನ್ನಿತ್ತುದ ಕೇಳಿ ೬

ಸುರ ನರ ನಾಗಲೋಕದ ಭಕ್ತ ಜನರನ್ನು
ಪೊರೆಯಲೋಸುಗ ವೈಕುಂಠದಿಂದ
ಸಿರಿಸಹಿತಲೆ ಬಂದು ಶೇಷಾಚಲದಿ ನಿಂತ
ಪುರಂದರವಿಠಲ ನಿನ್ನಯ ಚರಣವ ಕಂಡು ೭

ಉತ್ತಾನಪಾದರಾಯನ ಕಂದ—ಧ್ರುವ.

ಬಲತಾಯಿ—ಸುರುಚಿ.

ನಕ್ರಂಗೆ—ಮೊಸಳೆಗೆ (ನೆಗಳು) (ಗಜೇಂದ್ರಮೋಕ್ಷ).

ವಕ್ರವ ಪರಿದು—ಇಂದ್ರದ್ಯುಮ್ನನಿಗೆ ಬಂದಿದ್ದ ಶಾಪವನ್ನು ಹೋಗಲಾಡಿಸಿ.

ದ್ರುಪದನ ಸುತೆ—ದ್ರೌಪದಿ (ವಸ್ತ್ರಾಪಹರಣದ ಸಂದರ್ಭ).

ದುರುಳ ದಾನವ—ಹಿರಣ್ಯಕಶಿಪು (ಪ್ರಹ್ಲಾದನ ಉಪಾಖ್ಯಾನ ; ನರಸಿಂಹಾವತಾರದ ಕತೆ).

ಅಂಬರೀಷ—ಸೂರ್ಯವಂಶದಲ್ಲಿ ನಾಭಾಗರಾಜನ ಮಗನಾಗಿ ಹುಟ್ಟಿದವನು ; ವಿಷ್ಣುಭಕ್ತ, ಪರಮಭಾಗವತ. ಅವನ ಏಕಾದಶೀವ್ರತವನ್ನು ಕೆಡಿಸಬೇಕೆಂದು ದುರ್ವಾಸನು ದ್ವಾದಶಿಯ ಪಾರಣೆಗೆ ಹೊತ್ತುಮೀರಿ ಬಂದನು ; ವ್ರತದ ಕಟ್ಟಳೆಯನ್ನು ಮೀರಲಾರದೆ ಅಂಬರೀಷನು ಆ ವೇಳೆಗಾಗಲೇ ತೀರ್ಥಪ್ರಾಶನ ಮಾಡಿದ್ದುದರಿಂದ ದುರ್ವಾಸನು ಸಿಟ್ಟಿಗೆದ್ದು ಅವನನ್ನು ಶಪಿಸಲು, ವಿಷ್ಣುವಿನ ಚಕ್ರಾಯುಧವು ದುರ್ವಾಸನ ಮೇಲೆ ಎರಗಿ ಬಂದಿತು. ಅದರ ಕಾಟವನ್ನು ತಡೆಯಲಾರದೆ ದುರ್ವಾಸನು ಅಂಬರೀಷನನ್ನೇ ಮೊರೆಹೊಕ್ಕು ತನ್ನ ಶಾಪವನ್ನು ಹಿಂದೆಗೆದುಕೊಳ್ಳಬೇಕಾಯಿತು (ಭಾಗವತಪುರಾಣ ೯, ೪).

ಛಲ ಬೇಡ—ರಾಮಾಯಣದ ಕಥೆ. ರಾವಣನು (ತಲೆ ಹತ್ತರವನು) ಛಲಗಾರನೆಂದು ಹೆಸರಾದವನು. ಯುದ್ಧಕ್ಕೆ ಮುನ್ನ ಅವನು ಕರೆದ ಸಭೆಯಲ್ಲಿ ತಮ್ಮನಾದ ವಿಭೀಷಣನು ಸೀತೆಯನ್ನು ಮರಳಿ ರಾಮನಿಗೆ ಸಲ್ಲಿಸೆಂದು ಸೂಚಿಸಲು ಸಿಟ್ಟಿನಿಂದ ವಿಭೀಷಣನನ್ನು ಮೂದಲಿಸಿ ಅವನು ಲಂಕೆಯನ್ನು ಬಿಡುವಂತೆ ಮಾಡಿದ.

ಸಿರಿಸಹಿತ...—'ಸ್ವಾಮಿಪುಷ್ಕರಿಣೀತೀರೇ ರಮಯಾ ಸಹ ಮೋದತೇ' ಎಂಬ ಪುರಾಣೋಕ್ತಿಯ ಛಾಯೆ.

ಕಾಂಬೋದಿ　　　　　　　　　　　　　　　　　　　　ಝಂಪೆ

ಯಾಕೆ ನಿರ್ದಯನಾದೆ ಎಲೊ ದೇವನೆ　　　　　ಪ

ಶ್ರೀಕಾಂತ ಎನಮೇಲೆ ಎಳ್ಳಷ್ಟು ದಯವಿಲ್ಲ　　　ಅ

ಕಂಗೆಟ್ಟು ಕಂಭದಲಿ ಒಡೆದು ಬಳಲಿ ಬಂದು
ಹಿಂಗದೆ ಪ್ರಹ್ಲಾದನಪ್ಪಿಕೊಂಡೆ
ಮಂಗಳ ಪದವಿತ್ತು ಮನ್ನಿಸಿದೆ ಅವ ನಿನಗೆ
ಭಂಗಾರವೆಷ್ಟು ಕೊಟ್ಟನು ಪೇಳೊ ಹರಿಯೆ　　　೧

ಸಿರಿದೇವಿಗೆ ಹೇಳದೆ ಸೆರಗು ಸಂವರಿಸದೆ
ಗರುಡನ ಮೇಲೆ ಗಮನವಾಗದೆ
ಭರದಿಂದ ನೀ ಬಂದು ಕರಿಯನುದ್ಧರಿಸಿದೆ
ಕರಿರಾಜ ಎಷ್ಟು ಕನಕವ ಕೊಟ್ಟ ಹರಿಯೆ　　　೨

ಅಜಮಿಳನು ಅಣ್ಣನೆ ವಿಭೀಷಣನು ತಮ್ಮನೆ
ನಿಜದಿ ರುಕ್ಮಾಂಗದನು ನಿನ್ನ ಮೊಮ್ಮಗನೇ
ಭಜನೆಗವರೇ ಹಿತರೆ ನಾ ನಿನಗೆ ಅನ್ಯನೆ
ತ್ರಿಜಗಪತಿ ಸಲಹೆನ್ನ ಪುರಂದರವಿಠಲ　　　೩

ಸೆರಗು ಸಂವರಿಸದೆ—ಉಟ್ಟ ಬಟ್ಟೆಯನ್ನೂ ಸರಿಪಡಿಸಿಕೊಳ್ಳದೆ.
ಕರಿಯನು—ಆನೆಯನ್ನು (ಇಂದ್ರದ್ಯುಮ್ನನು ಶಾಪದಿಂದ ಆನೆಯಾಗಿದ್ದಾಗ).

[ಇದು ನಿಂದಾಸ್ತುತಿಯ ಪ್ರಕಾರಕ್ಕೆ ಸೇರಿದ ಪದ. ಮೊದಲ ನುಡಿಯಲ್ಲಿ ಪ್ರಹ್ಲಾದನ ಕತೆ; ಎರಡನೆಯುದರಲ್ಲಿ ಗಜೇಂದ್ರಮೋಕ್ಷದ ಪ್ರಸಂಗ; ಮೂರನೆಯುದರಲ್ಲಿ ಅಜಾಮಿಳ, ವಿಭೀಷಣ, ರುಕ್ಮಾಂಗದರನ್ನು ಹರಿಯು ಸಲಹಿದುದು. ಈ ಭಕ್ತರಿಗೆ ಒಲಿದವನು ತನಗೇಕೆ ಒಲಿಯುವುದಿಲ್ಲ ? ಈ ಭಕ್ತರು ಲಂಚವನ್ನೇನಾದರು ಕೊಟ್ಟರೋ ? ಅಥವಾ ಅವರು ಹತ್ತಿರದ ನೆಂಟರೋ ? ಪಕ್ಷಪಾತ ಬುದ್ಧಿಗೆ ಕಾರಣ ವೇನು ? ಅವರು ಬೇಕಾದವರು, ನಾನು ಬೇಡವಾದವನು ಆದುದು ಹೇಗೆ ?]

ಕಲ್ಯಾಣಿ ಆದಿ

ನಂಬಿ ಕೆಟ್ಟವರಿಲ್ಲವೊ ರಂಗಯ್ಯನ
ನಂಬದೆ ಕೆಟ್ಟರೆ ಕೆಡಲಿ ಪ

ಅಂಬುಜನಾಭನ ಅಖಿಳ ಲೋಕೇಶನ
ಅಪ್ರಮೇಯನಾದ ಆದಿಪುರುಷನ ಅ

ಪಿತನ ತೊಡೆಯ ಮೇಲೆ ಧ್ರುವರಾಯ
ಹಿತದಿಂದ ಕುಳಿತಿರಲು
ಮತಿಹೀನಳಾದ ಸುರುಚಿದೇವಿ ನೂಕಲು
ಹಿತದಿ ಧ್ರುವಗೆ ಪಟ್ಟಕೊಟ್ಟ ಮುರಾರಿಯ ೧

ವರ ಪ್ರಹ್ಲಾದನ ಪಿತನು ಬಾಧಿಸುತಿರೆ
ಹರಿ ನೀನೆ ಗತಿಯೆನಲು
ಪರಮ ಪ್ರೀತಿಯಿಂದ ತರಳನ ಪಾಲಿಸಿ
ದುರುಳ ಹಿರಣ್ಯಕಶ್ಯಪನ ಸೀಳಿದ ಧೊರೆಯ ೨

ಕರಿರಾಜನ ಸಲಹಿ ಅಂಜದಿರೆಂದು ಆ
ದರಿಸಿದವರು ಯಾರೋ
ಗರುಡಗಮನ ಶ್ರೀ ಪುರಂದರವಿಠಲನ
ಚರಣಕಮಲವನ್ನು ದೃಢದಿಂದ ನಂಬಿರೊ ೩



ಮೋಹನ ತ್ರಿವಿಡೆ

ನಿನ್ನ ನಂಬಿದೆ ನೀರಜನಯನ
ಎನ್ನ ಪಾಲಿಸೊ ಇಂದಿರಾರಮಣ ಪ

ಮುನ್ನ ಪಾಂಚಾಲಿಯ ಮೊರೆಯ ಲಾಲಿಸಿ ಕಾಯ್ದ
ಪನ್ನಗಶಯನ ನೀ ಪರಮಪುರುಷನೆಂದು ಅ

ಹರಿ ಸರ್ವೋತ್ತಮನಹುದೆಂಬೋ ಬಾಲಕನ
ಹಿರಣ್ಯಕಶಿಪು ಹಿಡಿದು ಬಾಧಿಸಲು
ನರಹರಿ ರೂಪದಿಂದವನ ವಕ್ಷವ ಸೀಳ್ದೆ
ಪರ ವಿಶ್ವಾತ್ಮಕನಹುದೆಂದು ನಾ ದೃಢವಾಗಿ ೧

ಪಾದವ ಪಿಡಿದು ನೀರೊಳಗೆಳೆವ ನಕ್ರನ
ಬಾಧೆಯ ತಾಳದೆ ಕರಿ ಮೊರೆಯಿಡಲು
ಆದಿಮೂರುತಿ ಚಕ್ರದಿ ನಕ್ರನ ಕೊಂದ
ವೇದಾಂತ ವೇದ್ಯ ಅನಾಥರಕ್ಷಕನೆಂದು ೨

ಇಳೆಯೊಡೆಯನ ತೊಡೆಗೆ ನೀನರ್ಹನಲ್ಲೆಂದು
ಲಲನೆ ಕೈಪಿಡಿದೆಳೆಯಲು ಕಂದನ
ನಳಿನಾಕ್ಷ ನಿನ್ನ ಮೊರೆಯ ಹೊಕ್ಕು ತಪಿಸಲು
ಒಲಿದು ಧ್ರುವಗೆ ನಿಜಲೋಕವಿತ್ತವನೆಂದು ೩

ಸುದತಿ ಗೌತಮಸತಿ ಮುನಿಶಾಪದಿಂದಲಿ
ಒದಗಿ ಪಾಷಾಣ ರೂಪದಲಿರಲು
ಪದ ರಜದಿಂದಲಿ ಸತಿಯ ಮಾಡಿದ ಯೋಗಿ
ಹೃದಯ ಭೂಷಣ ನಿನ್ನ ಪಾದಮಹಿಮೆಯ ಕಂಡು ೪

ಪರಮ ಪಾವನೆ ಜಗದೇಕ ಮಾತೆಯನು
ದುರುಳ ರಾವಣನು ಕದ್ದೊಯ್ದಿರಲು
ಶರಣೆಂದು ವಿಭೀಷಣ ಚರಣಕೆರಗಲಾಗಿ
ಸ್ಥಿರಪಟ್ಟವನು ಕೊಟ್ಟ ಪರಮಾತ್ಮನಹುದೆಂದು ೫

ಅಂಬರೀಷನೆಂಬ ನೃಪ ದ್ವಾದಶಿ ವ್ರತ
ಸಂಭ್ರಮದಲಿ ಹರಿಗರ್ಪಿಸಲು
ದೊಂಬಿ ಮಾಡಿ ದೂರ್ವಾಸ ಶಪಿಸಲಾಗಿ
ಬೆಂಬಿಡದೆಲೆ ಚಕ್ರದಿಂದ ಕಾಯ್ದವನೆಂದು ೬

ಧರೆಯೊಳು ನಿಮ್ಮ ಮಹಿಮೆಯ ಪೊಗಳುವರೆ
ಸರಸಿಜೋದ್ಭವ ಶೇಷರಿಗರಿದು
ಸ್ಮರಣೆ ಮಾತ್ರದೆ ಅಜಾಮಿಳಗೆ ಮುಕ್ತಿಯನಿತ್ತ
ಪುರಂದರವಿಠಲ ನೀ ಜಗದೇಶನೆಂದು ೭

ಪಾಂಚಾಲಿಯ—ದ್ರೌಪದಿಯ (ದುಃಶಾಸನನು ತುಂಬಿದ ಸಭೆಯಲ್ಲಿ ಇವಳ ವಸ್ತ್ರಾಪಹಾರಮಾಡಲು ತೊಡಗಿದಾಗ).

ಹರಿ ಸರ್ವೋತ್ತಮ .. —ಪ್ರಹ್ಲಾದನ ಕತೆ.

ಪಾದವ... —ಗಜೇಂದ್ರಮೋಕ್ಷದ ಸಂದರ್ಭ.

ಇಳೆಯೊಡೆಯನ... —ಧ್ರುವನ ಉಪಾಖ್ಯಾನ.

ಸುದತಿ... —ಅಹಲ್ಯಾಶಾಪ ವಿಮೋಚನೆ.

ಪರಮಪಾವನ... —ವಿಭೀಷಣ ಶರಣಾಗತಿ.

ಅಂಬರೀಷನೆಂಬ... —ಏಕಾದಶೀವ್ರತ ಮಾಹಾತ್ಮ್ಯೆಯ ಪ್ರಸಂಗ.

ಧರೆಯೊಳು .. —ಹರಿಯ ಮಾಹಾತ್ಮ್ಯೆಯನ್ನು ಸಂಪೂರ್ಣದಾಗಿ ಅರಿತುಕೊಳ್ಳುವುದು ಬ್ರಹ್ಮ, ಶೇಷರಿಗೂ ಸಾಧ್ಯವಿಲ್ಲ.

## ೧೨೦

ಕಾಂಬೋದಿ | ಝಂಪೆ

ಆವನಾವನಿಗಾದ ಅದನಿಯೊಳಗೆ ಪ

ಸರ್ವ ಜೀವರಿಗೆ ಶ್ರೀಹರಿಯಲ್ಲದೆ ಕೃಷ್ಣ ಅ

ಆವ ತಂದೆಯು ಸಲಹಿದನು ಪ್ರಹ್ಲಾದನ
ಆವ ತಾಯಿಯು ಸಲಹಿದಳು ಧ್ರುವನ
ಆವ ಸಹೋದರನು ಈಡೇರಿಸಿದ ವಿಭೀಷಣನ
ಸರ್ವ ಜೀವರಿಗೆ ಶ್ರೀಹರಿಯಲ್ಲದೆ ಕೃಷ್ಣ ೧

ಆವ ಬಾಂಧವ ಕಾಯ್ದನಂದು ಕರಿರಾಜನ
ಆವ ಪತಿ ಕಾಯ್ದ ದ್ರೌಪದಿ ಮಾನವ
ಆವ ಸಖನಾದ ಪಾಂಡವರ ಆಪತ್ತಿಗೆ
ಸರ್ವ ಜೀವರಿಗೆ ಶ್ರೀಹರಿಯಲ್ಲದೆ ಕೃಷ್ಣ ೨

ಆವನಾಧಾರ ಅಡವಿಯೊಳಿರುವ ಮೃಗಗಳಿಗೆ
ಆವನಾಶ್ರಯ ಪಕ್ಷಿಜಾತಿಗಳಿಗೆ
ಆವ ಪೋಷಕನು ಗರ್ಭದಲ್ಲಿದ್ದ ಶಿಶುಗಳಿಗೆ
ದೇವಗುರು ಪುರಂದರವಿಠಲನಲ್ಲದೆ ಕೃಷ್ಣ ೩

[ಯಾರು ಯಾರಿಗೆ ಆದರು ? ಜೀವರಾಶಿಯಲ್ಲಿ ಯಾರು ಯಾರನ್ನೂ ಕಾಪಿಡಲು ಸ್ವತಂತ್ರರಲ್ಲ, ಶಕ್ತರಲ್ಲ. ಎಲ್ಲ ಜೀವರಿಗೂ ರಕ್ಷಕನೂ, ನಿಯಾಮಕನೂ, ಪ್ರೇರಕನೂ ಹರಿಯೊಬ್ಬನೇ. ಪ್ರಹ್ಲಾದನನ್ನು ಅವನ ತಂದೆ ಹಿರಣ್ಯಕಶಿಪುವೇ ಕೊಲ್ಲಲೆತ್ನಿಸಿದಾಗ, ಧ್ರುವನ ಮಲತಾಯಿ ಸುರುಚಿಯೇ ಅವನನ್ನು ಹೊರದೂಡಿದಾಗ, ವಿಭೀಷಣನ ಅಣ್ಣ ರಾವಣನೇ ತಮ್ಮನನ್ನು ಲಂಕೆಯಿಂದ ಹೊರಗಟ್ಟಿದಾಗ, ಗಜೇಂದ್ರನನ್ನು ಮೊಸಳೆ ಹಿಡಿದು ಹಿಂಸಿಸುತ್ತಿರುವಾಗ, ದುಃಶಾಸನನು ದ್ರೌಪದಿಯ ಮಾನಭಂಗ ಮಾಡಲು ಸಿದ್ಧನಾಗಿದ್ದಾಗ, ಪಾಂಡವರು ತೊಂದರೆಗೆ ಒಳಗಾದಾಗ ಅವರನ್ನೆಲ್ಲ ಸಲಹಿದವನು ಹರಿಯೇ. ಕಾಡಿನಲ್ಲಿರುವ ಪ್ರಾಣಿಗಳಿಗೆಲ್ಲ, ಪಕ್ಷಿಗಳಿಗೆಲ್ಲ ಅವನೇ ಆಸರೆ ; ತಾಯಿಯ ಒಡಲಲ್ಲಿರುವ ಹಸುಳೆಗಳನ್ನು ಸಾಕುವವನು ಅವನೇ ತಾನೆ ?]

ಆನಂದಭೈರವಿ ತ್ರಿವಿಡೆ

ಮುಂಜಾನೆ ಎದ್ದು ಗೋವಿಂದನೆನ್ನಿ, ನಮ್ಮ ಪ

ನಂಜಿಪ ದುರಿತವು ದೂರವೆನ್ನಿ ಅ

ಅಸುರ ಸಂಹಾರಿಯೆನ್ನಿ ದಶಶಿರ ವೈರಿಯೆನ್ನಿ
ಶಿಶುವು ಮೊರೆಯಿಡಲು ರಕ್ಷಿಸಿದನೆನ್ನಿ
ಅಸುರನರಣ್ಯದಿ ಭಸ್ಮವ ಮಾಡಲು
ವಸುಧೆಯೊಳ್ ನಾಟ್ಯವನಾಡಿದನೆನ್ನಿ ೧

ಬಲಿಯ ಬೇಡಿದನೆನ್ನಿ ಚೆಲುವ ವಾಮನನೆನ್ನಿ
ಲಲನೆಯ ಅಭಿಮಾನ ಕಾಯ್ದನೆನ್ನಿ
ಕಲಿಯುಗದಲಿ ಬಂದ ಕೃಷ್ಣಾವತಾರನೆನ್ನಿ
ಸಲೆ ಪಾಂಡುಸುತರನ್ನು ಪಾಲಿಸಿದನೆನ್ನಿ ೨

ಕರುಣಾಕರನೆನ್ನಿ ಕಪಟನಾಟಕನೆನ್ನಿ
ಕರಿರಾಜನನು ಕಾಯ್ದ ಕೃಷ್ಣನೆನ್ನಿ
ಪರಿಪರಿಯಿಂದಲಿ ಭಕ್ತರ ಸಲಹುವ
ವರದ ಪುರಂದರವಿಠಲನೆನ್ನಿ ೩

ನಂಜಿಪ...—ವಿಷದಂತೆ ನಮ್ಮನ್ನು ತೊಂದರೆಗೀಡುಮಾಡುವ, ನಮ್ಮನು ಅಂಜಿಪ, ಹೆದರಿಸುವ.

ಅಸುರಸಂಹಾರಿಯೆನ್ನಿ...—ರಾಮಾವತಾರದ ಸಂದರ್ಭ.

ಶಿಶುವು ಮೊರೆಯಿಡಲು...—ಪ್ರಹ್ಲಾದ ಉಪಾಖ್ಯಾನ.

ಅಸುರನರಣ್ಯದಿ...—ಮೋಹಿನೀ ಭಸ್ಮಾಸುರ ಪ್ರಸಂಗ.

ಲಲನೆಯ ಅಭಿಮಾನ...—ದ್ರೌಪದಿಯ ಮಾನವನ್ನು ಕಾಯ್ದ ಪ್ರಸಂಗ (ದುಃಶಾಸನನಿಂದ ವಸ್ತ್ರಾಪಹರಣ ಸಂದರ್ಭದಲ್ಲಿ).

ಕಲಿಯುಗದಲಿ ಬಂದ—ದಿಟವಾಗಿ ಕೃಷ್ಣನು ದ್ವಾಪರಯುಗದಲ್ಲಿ ಬಂದವನು ; ಆದರೆ ಅವನ ಪ್ರಭಾವ ಕಲಿಯುಗದಲ್ಲೂ ಉಳಿದುಬಂದಿದೆ ('ಕಲೌಕೃಷ್ಣಃ').

ಕರುಣಾಕರನೆನ್ನಿ ಕಪಟನಾಟಕನೆನ್ನಿ—ಭಕ್ತರಿಗೆ ಕರುಣೆ ತೋರುವವನು, ದುಷ್ಟರನ್ನು ಮರುಳುಮಾಡಿ ಕೊಲ್ಲುವವನು.

# ೧೨೨

ಕಾಂಬೋದಿ ಝಂಪೆ

ಆರು ಬದುಕಿದರಯ್ಯ ಹರಿ ನಿನ್ನ ನಂಬಿ ಪ

ತೋರು ಈ ಜಗದೊಳಗೆ ಒಬ್ಬರನು ಕಾಣೆ ಅ

ಕರಪತ್ರದಿಂದ ತಾಮ್ರಧ್ವಜನ ತಂದೆಯ
ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ
ಮರುಳನಂದದಿ ಪೋಗಿ ಭೃಗುಮುನಿಯ ಕಣ್ಣೊಡೆದೆ
ಅರಿತು ತ್ರಿಪುರಾಸುರನ ಹೆಂಡಿರನು ಬೆರೆದೆ ೧

ಕಲಹ ಬಾರದ ಮುನ್ನ ಕರ್ಣನನು ನೀ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದೆ
ನೆಲವ ಬೇಡುತ ಹೋಗಿ ಬಲಿಯ ತನುವನು ತುಳಿದೆ
ಮೊಲೆಯನುಣಿಸಲು ಬಂದ ಪೂತನಿಯ ಕೊಂದೆ ೨

ತಿರಿದುಂಬ ದಾಸರ ಕೈಲಿ ಕಪ್ಪವ ಕೊಂಬೆ
ಗರುಡವಾಹನ ನಿನ್ನ ಚರಿಯವರಿಯೆ
ದೊರೆ ಪುರಂದರವಿಠಲ ನಿನ್ನನ್ನು ನಂಬಿದರೆ
ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ ೩

[ಇದು ನಿಂದಾಸ್ತುತಿ ಜನರ ಕಣ್ಣಿಗೆ ತಪ್ಪೆಂದು, ಮೋಸವೆಂದು, ಕ್ರೌರ್ಯವೆಂದು ಕಂಡರೂ ಹರಿಯ ಲೀಲೆಯಲ್ಲಿ ಲೋಕೋಪಕಾರ ಬುದ್ಧಿಯೇ ಇರುವುದು ಲೋಕ ಕಂಟಕರಾದವರ ಬಲಗುಂದಿಸಲು, ಅವರನ್ನು ತೊಲಗಿಸಲು ಹರಿಯ ಲೀಲೆ ಶಿಷ್ಟ ರಕ್ಷಣೆಯ ಸಲುವಾಗಿ ದುಷ್ಟಶಿಕ್ಷಣ ಇಲ್ಲಿ ದುಷ್ಟ ಶಿಕ್ಷಣವನ್ನೇ ಎತ್ತಿ ತೋರಿಸಿದ್ದಾರೆ ]

ತಾಮ್ರಧ್ವಜ ..—ಮಣಿಪುರದ ರಾಜ ಮಯೂರಧ್ವಜನ ಮಗ ಯುಧಿಷ್ಠಿರನು ಅಶ್ವಮೇಧಯಾಗ ಮಾಡುವಾಗ ಯಾಗದ ಕುದುರೆಯನ್ನು ಅಡ್ಡಗಟ್ಟಿ, ಸೆಣಸಲು ಬಂದ ಅರ್ಜುನನನ್ನು ಸೋಲಿಸಿದ ಕೃಷ್ಣಾರ್ಜುನರು ಮೋಸದಿಂದ ಮಯೂರಧ್ವಜನ ಬಳಿಹೋಗಿ ಅವನು ತಾಮ್ರಧ್ವಜನ ಶರೀರವನ್ನು ಇಬ್ಭಾಗವಾಗಿ ಗರಗಸ (ಕರಪತ್ರ)ದಿಂದ ಕುಯ್ಯುವಂತೆ ಮಾಡಿದರು

ಭೃಗಮುನಿ...—ಸರಸ್ವತೀನದಿಯ ದಡದ ಮೇಲೆ ಋಷಿಗಳು ಯಜ್ಞಮಾಡುತ್ತ, ಅಗ್ರಪೂಜೆಯನ್ನು ಯಾವ ದೇವತೆಗೆ ಸಲ್ಲಿಸಬೇಕೆಂಬ ವಿಚಾರವಾಗಿ ವಿವಾದ ವೊದಗಿ, ಭೃಗುಮುನಿಯು ತ್ರಿಮೂರ್ತಿಗಳ ಸತ್ತ್ವಪರೀಕ್ಷೆಮಾಡಲು ಹೊರ ಟಾಗ, ವೈಕುಂಠದಲ್ಲಿ ನಾರಾಯಣನು ಲಕ್ಷ್ಮಿಯೊಂದಿಗೆ ಸುಖನಿದ್ರೆಯಲ್ಲಿದ್ದು ತಾನು ಬಂದುದನ್ನೂ ಅರಿಯದೆ ಇರಲು ಭೃಗುಮುನಿಯು ಸಿಟ್ಟಿಗೆದ್ದು ನಾರಾಯಣನನ್ನು ತನ್ನ ಬಲಗಾಲಿನಿಂದ ಒದ್ದ. ಒಡನೆಯೇ ನಾರಾಯಣನು ಎದ್ದು ಕ್ಷಮೆಯನ್ನು ಬೇಡುತ್ತ, ಮುನಿಯ ಕಾಲಿಗೆಷ್ಟು ನೋವಾಯಿತೋ ಎಂದು ಅವನ ಕಾಲುಗಳನ್ನು ಒತ್ತುತ್ತ ಕಾಲಿನಲ್ಲಿದ್ದ ಕಣ್ಣನ್ನು ಕಿತ್ತುಬಿಟ್ಟ. ಕಾಲಲ್ಲಿ ಕಣ್ಣಿದ್ದುದರಿಂದಲೇ ಭೃಗುಮುನಿಗೆ ಅಹಂಕಾರವಿದ್ದಿತು.

ಅರಿತು ತ್ರಿಪುರಾಸುರನ ..—ಬೌದ್ಧಾವತಾರದಲ್ಲಿ

ಕಲಹ ಬಾರದ ಹಾಗೆ . —ಮಹಾಭಾರತ ಯುದ್ಧದಲ್ಲಿ ಕರ್ಣಾರ್ಜುನರು ಕಾದಾಡು ತ್ತಿರುವಾಗ ಕರ್ಣನ ಮರ್ಮವನ್ನು ಹೊರಗೆಡಹಿ, ಅರ್ಜುನನನ್ನು ಪ್ರೋತ್ಸಾ ಹಿಸಿ, ಕರ್ಣನನ್ನು ಕೊಲಿಸಿದನು. ಕೊಂದವನು ದಿಟವಾಗಿ ಅರ್ಜುನ ; ಆದರೆ ಅವನು ನಿಮಿತ್ತಮಾತ್ರ.

ಸುಲಭದಲಿ...—ಪಾಂಡವರ ಪಕ್ಷವನ್ನು ಹಿಡಿದು ಕೌರವವಂಶವನ್ನು ನಿರ್ಮೂಲ ಮಾಡಿದನು.

ನೆಲವ ಬೇಡುತ...—ವಾಮನಾವತಾರದಲ್ಲಿ.

ಮೊಲೆಯನುಣಿಸಲು ..—ಪೂತನೀಸಂಹಾರದ ಪ್ರಸಂಗ (ಕೃಷ್ಣನ ಬಾಲಲೀಲೆ).



ಸೌರಾಷ್ಟ್ರ ಆದಿ

ಶೋಭನವೇ ಇದು ಶೋಭನವೇ ಅ

ವೈಭವವೇ ನಮ್ಮ ವಾಮನಮೂರ್ತಿಗೆ

ಪಾಲಗಡಲು ಮನೆಯಾಗಿರಲು
ಆಲದೆಲೆಯಮೇಲೆ ಮಲಗುವರೇ
ಮೂಲೋಕವ ನಿನ್ನುದರದೊಳಿಂಬಿಟ್ಟು ಮುದ್ದು
ಬಾಲಕನಾಗಿ ಎತ್ತಿಸಿ ಕೊಂಬರೆ ೧

ಸಿರಿ ನಿನ್ನ ಕೈವಶವಾಗಿರಲು
ತಿರಿವರೆ ಬಲಿಯು ದಾನವ ಬೇಡಿ
ಸರಸಿಜಭವ ನಿಮ್ಮ ಪೂಜೆ ಮಾಡುತಲಿರೆ
ನರನ ಬಂಡಿಯು ಬೋವನಾಗುವರೆ ೨

ಕಮ್ಮಗೋಲನ ಪಿತನಾಗಿರಲು
ಸುಮ್ಮನೆ ಕುಬುಜೆಗೆ ಸೋಲುವರೆ
ಬೊಮ್ಮಮೂರುತಿ ನಿನಗೆಣೆಯುಂಟೆ ತ್ರಿಜಗದಿ
ಹಮ್ಮಿನ ದೇವ ಪುರಂದರವಿಠಲ ೩

ನರನ ಬಂಡಿಯು ಬೋವ—ಅರ್ಜುನನ ಸಾರಥಿ.
ಕಮ್ಮಗೋಲ—ಮನ್ಮಥ.
ಕುಬುಜೆ—ಕಂಸನ ಗಂಧದಾಸಿಯೊದ ಕುಬ್ಜೆ; ಗೂನು ಬೆನ್ನಿನವಳು, ಕುರೂಪಿ. ಅವಳಿಗೆ ಒಲಿದು ಕೃಷ್ಣನು ಅವಳ ಬೆನ್ನನ್ನು ನೇರ್ಪಡಿಸಿ, ಸುಂದರಿಯನ್ನಾಗಿಸಿದ ನೆಂದು ಭಾಗವತದ ಉಲ್ಲೇಖ.
ಸುಮ್ಮನೆ—ಅವಳು ಕೇಳದೆ ಇದ್ದರೂ, ತನ್ನಲ್ಲಿ ಮೊರೆಹೋಗದೆ ಇದ್ದರೂ, ಅಕಾರಣ ವಾಗಿ ಕೃಷ್ಣನು ಕುಬ್ಜೆಗೆ ಒಲಿದನು.
ಬೊಮ್ಮಮೂರುತಿ—ಪರಬ್ರಹ್ಮಸ್ವರೂಪ.
ಹಮ್ಮಿನ—ಹೆಮ್ಮೆಯ.

## ೧೨೪

ಕಲ್ಯಾಣಿ ಅಟ್ಟ

ಎಲ್ಲಿರುವನೋ ರಂಗ ಎಂಬ ಸಂಶಯ ಬೇಡ
ಎಲ್ಲಿ ಭಕ್ತರು ಕರೆದರಲ್ಲೆ ಒದಗುವನು ಪ

ತರಳ ಪ್ರಹ್ಲಾದ ಶ್ರೀಹರಿ ವಿಶ್ವಮಯನೆಂದು
ಬರೆದೋದಲವನ ಪಿತ ಕೋಪದಿಂದ
ಸ್ಥಿರವಾದಡೀ ಕಂಭದೊಳು ತೋರೆನಲು
ಭರದಿ ಬರಲದಕೆ ವೈಕುಂಠ ನೆರೆಮನೆಯೆ ೧

ಪಾಪ ಕರ್ಮವ ಮಾಡಿದಜಾಮಿಳನ ಯಮಭಟರು
ಕೋಪದಿಂದೆಳೆಯುತಿರೆ ಭೀತಿಯಿಂದ
ತಾ ಪುತ್ರನನು ಕರೆಯೆ ಕೇಳಿ ರಕ್ಷಿಸೆ ಶ್ವೇತ
ದ್ವೀಪವೀ ಧರೆಗತಿ ಸಮೀಪದಲ್ಲಿಹುದೆ ೨

ಕರಿರಾಜನನು ನೆಗಳು ನುಂಗುತಿರೆ ಭಯದಿಂದ
ಮೊರೆಯಿಡಲು ಕೇಳಿ ಅತಿ ತ್ವರಿತದಿಂದ
ಕರುಣದಲಿ ಬಂಧನವ ಬಿಡಿಸಲಾ ಗಜರಾಜ
ನಿರುವ ಸರಸಿಗೆ ಅನಂತಾಸನವು ಮುಮ್ಮನೆಯೆ ೩

ಕುರುಪತಿಯು ದ್ರೌಪದಿಯ ಸೀರೆಯನು ಸೆಳೆಯುತಿರೆ
ತರುಣಿ ಹಾ ಕೃಷ್ಣಯೆಂದೊದರೆ ಕೇಳಿ
ಭರದಿಂದ ಅಕ್ಷಯಾಂಬರವಿತ್ತ, ಹಸ್ತಿನಾ
ಪುರಿಗು ದ್ವಾರಾವತಿಗು ಕೂಗಳತೆಯೋ ೪

ಅಣು ಮಹತ್ತುಗಳಲ್ಲಿ, ಪರಿಪೂರ್ಣನೆಂದೆನಿಸಿ
ಗಣನೆಯಿಲ್ಲದ ಮಹಾ ಮಹಿಮನೆನಿಪ
ಘನ ಕೃಪಾನಿಧಿ ನಮ್ಮ ಪುರಂದರವಿಠ್ಠಲನು ನೆನೆದವರ
ಮನದಲ್ಲೆ ಇಹನೆಂಬ ಬಿರುದಿರಲು ೫

[ವಿಷ್ಣುವಿನ ಮೂರು ಸ್ಥಾನಗಳು ವೈಕುಂಠ, ಶ್ವೇತದ್ವೀಪ, ಅನಂತಾಸನ. ಇವು ಭೂಮಿಗೆ ತುಂಬ ದೂರದಲ್ಲಿದ್ದರೂ, ಭೂಮಿಯ ಮೇಲಿರುವ ಭಕ್ತರ ಹೃದಯದಲ್ಲೇ ಅಂತರ್ಯಾಮಿಯಾಗಿಯೂ ಇರುವವನಾದ್ದರಿಂದ, ಭಕ್ತರು ಕರೆದಾಗ ಓ ಎನ್ನುವವನು, ಅವರ ಆಪತ್ತಿನ ವೇಳೆಗೆ ಒದಗಿಬಂದು ನೆರವಾಗುವವನು. ಪ್ರಹ್ಲಾದ, ಅಜಾಮಿಳ, ಗಜೇಂದ್ರ, ದ್ರೌಪದಿ ಇವರಿಗೆ ಅವನು ಒಲಿದ ಪ್ರಸಂಗಗಳನ್ನು ನಿದರ್ಶನವಾಗಿ ಹೇಳಿದ್ದಾರೆ.]

ತರಳ—ಹುಡುಗ.

ನೆಗಳು—ಮೊಸಳೆ.



ಶಂಕರಾಭರಣ ಆದಿ

ತಾರಿಸೋ ಶ್ರೀಹರಿ ನಮ್ಮ ತಾರಿಸೊ ಪ

ತಾರಿಸೊ ಭವ ನಿವಾರಿಸೊ ನಿನ ಪದ
ತೋರಿಸೊ ವೈಕುಂಠ ಸೇರಿಸೊ ರಂಗಯ್ಯ ಅ

ಪಾಪವಿನಾಶನ ಮಾಡುವಿ ನೀ
ತಾಪಸರನು ನಿತ್ಯ ಸಲುಹುವಿ
ವ್ಯಾಪಿಸಿ ಸರ್ವತ್ರ ನಿನ್ನವರನು ಕಾಯ್ವ
ಶ್ರೀ ಪಾಂಡುರಂಗ ಪರಮಾತ್ಮ ಮುಕುಂದ ೧

ಹಿರಣ್ಯಕಶಿಪುವನು ಸೀಳಿದೆ ಅವನ
ಕರುಳ ಕೊರಳೊಳು ಹಾಕಿದೆ
ದುರುಳ ಬುದ್ಧಿಯ ತಳೆದ ದೈತ್ಯಾಧಮನ ಕೊಂದು
ಕರುಣದಿಂದಲಿ ಕಂದಗೊಲಿದೆ ಗೋವಿಂದ ೨

ಅಸುರೆ ಪೂತನಿಯ ಸಂಹರಿಸಿದೆ ನೀ
ಶಶಿಮುಖಿಯಭಿಮಾನ ಕಾಯಿದೆ
ಶಿಶುವಾಗಿ ಬಾಲಲೀಲೆಗಳನು ತೋರಿದೆ
ಕುಸುಮನಾಭ ಶ್ರೀ ಪುರಂದರವಿಠಲ ೩

ತಾರಿಸೋ—ಪಾರುಗಾಣಿಸೋ ; ಸಂಸಾರ(ಭವ)ವೆಂಬ ತೊರೆಯನ್ನು ದಾಟಿಸೋ.

ಕಂದಗೆ—ಪ್ರಹ್ಲಾದನಿಗೆ.

ಶಶಿಮುಖಿಯಭಿಮಾನ—ದ್ರೌಪದಿಯ ಮಾನವನ್ನು.

ಬೇಹಾಗು ಆದಿ

ನರಸಿಂಹನ ಪಾದ ಭಜನೆಯ ಮಾಡೋ ಪ

ನರಸಿಂಹನ ಪಾದ ಭಜನೆಯ ಮಾಡಲು
ದುರಿತ ಪರ್ವತವ ಖಂಡಿಸುವ ಕುಲಿಶದಂತೆ ಅ

ತರಳನ ಮೊರೆ ಕೇಳಿ ತವಕದಿಂದಲಿ ಬಂದು
ದುರುಳನ ಕೊರಳ ತನ್ನ ಕೊರಳಲಿ ಧರಿಸಿದ ೧

ಸುರರೆಲ್ಲ ನಡುಗಲು ಸಿರಿದೇವಿ ಮೊರೆಯಿಡೆ
ವರ ಕಂಭದಿಂದ ಬಂದ ವೈಕುಂಠಪತಿ ನಮ್ಮ ೨

ಹರಿವಿರಿಂಚಾದಿಗಳು ಕರವೆತ್ತಿ ಮುಗಿಯಲು
ಪರಮ ಶಾಂತನಾದ ಪುರಂದರವಿಠಲ ೩

ಕುಲಿಶ—ವಜ್ರಾಯುಧ. ಮೊದಲಿಗೆ ಬೆಟ್ಟಗಳಿಗೆ ರೆಕ್ಕೆಗಳಿದ್ದುವೆಂದೂ, ಅವು ಹಾರಾಡುತ್ತ ದೇವಲೋಕ ಭೂಲೋಕಗಳ ನಿವಾಸಿಗಳಿಗೆ ಉಪದ್ರವ ಕೊಡುತ್ತಿದ್ದುದರಿಂದ ಇಂದ್ರನು ತನ್ನ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕತ್ತರಿಸಿದನೆಂದೂ ಅಂದಿನಿಂದ ಅವು ಅಚಲವೆನಿಸಿಕೊಂಡುವೆಂದೂ ಕಥೆ.

ತರಳನ—ಪ್ರಹ್ಲಾದನ.

ದುರುಳನ—ಹಿರಣ್ಯಕಶಿಪುವಿನ.

ಕಾಂಬೋದಿ ಝಂಪೆ

ಏನು ಮರುಳಾದೆವ್ಮ ಎಲೆ ರುಕ್ಮಿಣಿ ಪ

ಹೀನಕುಲ ಗೊಲ್ಲ ಶ್ರೀ ಗೋಪಾಲಕೃಷ್ಣಗೆ ಅ

ಹಾಸಿಕಿಲ್ಲದೆ ಹಾವಿನ ಮೇಲೆ ಒರಗಿದವ
ಹೇಸಿಕಿಲ್ಲದೆ ಕರಡಿಯ ಕೂಡಿದ
ಗ್ರಾಸಕಿಲ್ಲದೆ ತೊತ್ತಿನಮಗನ ಮನೆಲುಂಡ
ದೋಷಕಂಜದೆ ಮಾವನ ಸಿರವ ತರಿದವಗೆ ೧

ಕುಂಡಗೋಳಕರ ಮನೆ ಕುಲದೈವವೆನಿಸಿದಗೆ
ಮಂಡೆ ಬೋಳರ ಮನಕೆ ಪುನಸ್ಯವವ
ಹಿಂಡು ಗೊಲ್ಲರ ಮನೆ ಹಿರಿಯನೆಂದೆನಿಸುವ
ಭಂಡಾಟದ ಗೊಲ್ಲ ಈ ಬಳಗದೊಳಗೆಲ್ಲ ೨

ಒಬ್ಬರಲ್ಲಿ ಹುಟ್ಟಿ ಒಬ್ಬರಲ್ಲಿ ಬೆಳೆದ
ಒಬ್ಬರಿಗೆ ಮಗನಲ್ಲ ಜಗದೊಳಗೆಲ್ಲ
ಅಬ್ಬರದ ದೈವ ಶ್ರೀ ಪುರಂದರವಿಠ್ಠಲನ
ಉಬ್ಬುಬ್ಬಿ ಮದುವ್ಯಾದೆ ಉತ್ಸಾಹದಿಂದ ೩

ಹಾವಿನ ಮೇಲೆ...—ಆದಿಶೇಷನ ಮೇಲೆ ಮಲಗಿದವನು.

ಕರಡಿಯ ಕೂಡಿದ—ಜಾಂಬವತಿಯನ್ನು ಮದುವೆಯಾದವನು.

ತೊತ್ತಿನ ಮಗನ ಮನೆಯಲಿ—ದಾಸೀ ಪುತ್ರನಾದ ವಿದುರ. ವಿಚಿತ್ರವೀರ್ಯನ ಹೆಂಡತಿ ಅಂಬಿಕೆಯ ಊಳಿಗದವಳ ಮಗ. ಕೃಷ್ಣನು ಪಾಂಡವರ ರಾಯಭಾರಿಯಾಗಿ ಹಸ್ತಿನಾವತಿಗೆ ಬಂದಾಗ ಇವನ ಮನೆಯಲ್ಲೇ ಇಳಿದುಕೊಂಡು ಊಟ ಮಾಡಿದ ಪ್ರಸಂಗ ಮಹಾಭಾರತದ ಉದ್ಯೋಗಪರ್ವದಲ್ಲಿದೆ.

ಮಾವನ—ತನ್ನ ಸೋದರಮಾವನಾದ ಕಂಸನನ್ನು ಕೊಂದವನು.

ಕುಂಡಗೋಳಕರ—ಕುಟುಂಬದ ಹೊರಗೆ ಹುಟ್ಟಿದವರ ; ವರ್ಣಬಾಹಿರರ.

ಮಂಡೆಬೋಳರ—ಸಂನ್ಯಾಸಿಗಳ.

ಒಬ್ಬರಲ್ಲಿ ಹುಟ್ಟಿ ಒಬ್ಬರಲ್ಲಿ ಬೆಳೆದ—ದೇವಕಿಯು ಕೃಷ್ಣನ ತಾಯಿ, ಆದರೆ ಕಂಸನ ಭಯದಿಂದ ಹುಟ್ಟಿದೊಡನೆ ವಸುದೇವನು ನಂದಗೋಪನ ಹೆಂಡತಿ ಯಶೋದೆಯ ಮನೆಗೊಯ್ದು ಅಲ್ಲಿ ಬಿಟ್ಟನಾಗಿ ಯಶೋದೆ ಕೃಷ್ಣನಿಗೆ ಸಾಕು ತಾಯಿಯಾದಳು.

ಒಬ್ಬರಿಗೆ ಮಗನಲ್ಲ—ದಿಟವಾಗಿ ಪರಮಾತ್ಮನಾದ ಅವನು ನಿತ್ಯ; ಅವನಿಂದಲೇ ಉಳಿದದ್ದೆಲ್ಲ ಒದಗಿ ಬಂದುದು. ಅವನಿಗೆ ಹುಟ್ಟೆಂಬುದೂ ಇಲ್ಲ, ಬೆಳವಣಿಗೆಯೂ ಇಲ್ಲ, ಕೊನೆಯೂ ಇಲ್ಲ. ಅವತಾರಗಳಲ್ಲಿ ಮಾತ್ರ ಮನುಷ್ಯನಾಗಿ ಕಾಣಿಸಿಕೊಂಡಾಗ ತಂದೆ ತಾಯಿಯರನ್ನು ಆರಿಸಿಕೊಳ್ಳುವನು.

ಅಬ್ಬರದ—ಸರ್ವವ್ಯಾಪಿ, ಸರ್ವಶಕ್ತ, ಸರ್ವನಿಯಾಮಕನಾಗಿ ಪ್ರಸಿದ್ಧನಾದವನು.



ಕಾಂಬೋದಿ — ಅಟ್ಟ

ರಾಮನಾಮ ರತ್ನಹಾರ ದೊರಕಿತೆನಗೆ ಪ

ಪೂರ್ವ ಪುಣ್ಯದ ಫಲಕೆ ಅ

ಮಚ್ಛನೆಂಬೋ ಮಾಣಿಕ್ಯದ ಹರಳು
ಕೂರ್ಮನೆಂಬೋ ಕುಸುರಿಗಳು
ವರಹನೆಂಬೊ ಹೊಸ ಮೋಹನದ ಚಿನ್ನ
ನರಹರಿಯೆಂಬೋ ನಾಮದ
ಸರಮುತ್ತು ೧

ವಾಮನನೆಂಬೊ ಒಲಿವ ಏಕಾವಳಿಯು
ಪರಶುರಾಮನೆಂಬೊ ಪಚ್ಚೆಯ ಹರಳು
ಕೃಷ್ಣನೆಂಬೊ ಕೀಲುಗಳು
ಅತಿಕುಶಲದಿಂದಿತ್ತು ೨

ಬೌದ್ಧನೆಂಬೋ ಅತುಳಗಳ ಬಿಗಿದಿತ್ತು
ಕಲ್ಕಿಯೆಂಬೊ ಕುಣಿಕೆಯು ಹಚ್ಚಿಟ್ಟು
ಪುರಂದರವಿಠಲನ ನಾಮದ ಸರಮುತ್ತು
ಸೌಭಾಗ್ಯ ನಿಗಳಿಲಿತ್ತು ೩

[ಈ ಪದದಲ್ಲಿ ದಾಸರು ರಾಮಾವತಾರವನ್ನು ಪ್ರಧಾನವಾಗಿ (ರತ್ನಹಾರ) ಹಿಡಿದು ಉಳಿದ ಒಂಬತ್ತು ಅವತಾರಗಳನ್ನು ಸೇರಿಸಿ ತಮ್ಮ ಕೊರಳಿಗೆ ಹಾಕಿಕೊಂಡ ಮಾಲೆಗಳಂತೆ ಕಲ್ಪಿಸಿಕೊಂಡಿದ್ದಾರೆ.]

ಮಚ್ಛ—ಮತ್ಸ್ಯ.

ಕುಸುರಿ—ಬಂಗಾರ, ಬೆಳ್ಳಿ ಚೌಕಟ್ಟಿನಲ್ಲಿ ಹೂವಿನ ಕೇಸರದಂತೆ ಸೂಕ್ಷ್ಮವಾದ ಕೆಲಸ ಮಾಡಿರುವುದು.

ಮೋಹನದ ಚಿನ್ನ—ಮೋಹಳ, ಮೋಹಣ; ಚಿನ್ನದ ಗುಂಡುಗಳನ್ನು ಗಟ್ಟಿಯಾಗಿ ಕೂಡಿಸಿರುವ (ಮೋಹು) ಮಾಲೆ.

ಸರಮುತ್ತು—ಸರದ ಮುತ್ತು.

ಏಕಾವಳಿ—ಒಂದೆಳೆ ಸರ.

ಕೀಲು—ಸೇರ್ಪಡೆಯ ಭಾಗ, ಸರದಲ್ಲಿ ಸೂಜಿಯಂಥ ಅಥವಾ ಸಣ್ಣ ಗೂಟದಂಥ ಭಾಗ.

ಅತುಳ—ಸರದಲ್ಲಿ ಎಳ್ಳಿನಂತೆ ಸೂಕ್ಷ್ಮವಾದ ಭಾಗ.

ಕುಣಿಕೆ—ಕೊಂಡಿ, ಗಂಟು, ಪಾಶದಂತೆ ತೋರುವ ಭಾಗ.

ನಿಗಳಿಲಿತ್ತು—ನಿಗಳವೆಂದರೆ ಅಲಂಕಾರದ ಸರವಳಿ.



# ಬಿಂಬರೂಪ

ಪರಮಾತ್ಮನಿಗೆ ಆಧಿಭೌತಿಕ, ಆಧಿದೈವಿಕ, ಆಧ್ಯಾತ್ಮಿಕ ಎಂಬ ಮೂರು ರೂಪಗಳು. ಆಧಿಭೌತಿಕ ರೂಪದಲ್ಲಿ ಬ್ರಹ್ಮಾಂಡದ ಒಳಗೂ ಹೊರಗೂ ಎಲ್ಲ ವಸ್ತುಗಳಲ್ಲೂ ಹರಡಿಕೊಂಡಿದ್ದು 'ವಿಶ್ವತೋಮುಖ' ನಾಗಿರುವುದು. ಆಧಿದೈವಿಕವೆಂದರೆ ಬ್ರಹ್ಮಾಂಡದಲ್ಲಿ ಆಯಾ ತತ್ತ್ವಾಭಿಮಾನಿ ದೇವತೆಗಳಲ್ಲಿದ್ದುಕೊಂಡು ಎಲ್ಲ ಕಾರ್ಯಗಳನ್ನೂ ಮಾಡಿಸುತ್ತಿರುವ ರೂಪ, ಬ್ರಹ್ಮ, ವಾಯು, ಗರುಡ, ಶೇಷ, ರುದ್ರ, ಇಂದ್ರ, ಕಾಮ ಇತ್ಯಾದಿ. ಆಧ್ಯಾತ್ಮವೆಂದರೆ ಎಲ್ಲ ಜೀವರಿಗೂ ಆತ್ಮನಾಗಿರುವ ಭಾವ ; ಜೀವರ ದೇಹೇಂದ್ರಿಯ ಮನೋವ್ಯಾಪಾರಗಳಲ್ಲಿ, ಪ್ರಾಣಾದಿ ಚೇಷ್ಟೆಗಳಲ್ಲಿ ಪ್ರವೃತ್ತವಾಗಿರುವ ಇಪ್ಪತ್ತುನಾಲ್ಕು ತತ್ತ್ವಗಳಿಗೂ ಅಭಿಮಾನಿಯಾಗಿದ್ದು, ಪ್ರತಿಯೊಂದು ಜೀವಿಯ ಅನಿರುದ್ಧಾಖ್ಯ ತತ್ತ್ವ ಶರೀರದಲ್ಲಿದ್ದುಕೊಂಡು ಆಯಾ ಕೆಲಸಗಳನ್ನು ಮಾಡಿಸುತ್ತಿರುವುದು. ಅಂತಸ್ತತ್ತ್ವನಿಯಾಮಕರಾದ ಈ ದೇವತೆಗಳೇ ಹೊರಗೆ ಬ್ರಹ್ಮಾಂಡದಲ್ಲೂ ಪ್ರವೃತ್ತರಾಗಿರುವವರು. ಈ ತತ್ತ್ವಗಳೆಲ್ಲ ಪ್ರತಿಬಿಂಬಗಳಾದರೆ, ಪರಮಾತ್ಮನು ಬಿಂಬ

'ಎಂಬತ್ತುನಾಲ್ಕು ಲಕ್ಷಯೋನಿ ಜೀವರಾಶಿಗೆ
ಬಿಂಬನಾಗಿ ಹರಿಯು ಇಂಬಾಗಿ ತದಾಕಾರ
ಬಿಂಬನಾಗಿ ಒಳಗೆ ಇದ್ದು ಆ
ನಂದಸಂಭ್ರಮವನೊದಗಿಸುವನು'

ಭಾಗವತದ (ಏಕಾದಶಸ್ಕಂಧ) ತಾತ್ಪರ್ಯ ನಿರ್ಣಯದಲ್ಲಿ ಜೀವತ್ರಯರ ಆರಾಧ್ಯಮೂರ್ತಿಗಳನ್ನು ಹೇಳಿದ್ದಾರೆ. ಭಕ್ತಜೀವರ ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳ ಪ್ರಾಧಾನ್ಯವನ್ನವಲಂಬಿಸಿ ಉತ್ತಮ (ಸಾತ್ತ್ವಿಕ), ಮಧ್ಯಮ (ರಾಜಸ), ಅಧಮ (ತಾಮಸ) ಎಂದು ವಿಭಾಗ ಮಾಡುತ್ತಾರೆ. ತಾಮಸ ಭಕ್ತರು ಪ್ರತಿಮಾದಿಗಳಲ್ಲಿ ಪರಮಾತ್ಮನಿರುವನೆಂದು ಭಾವಿಸಿ ಅಲ್ಲಿಯೇ ಪೂಜೆ ಮಾಡುತ್ತಾರೆ ; ಬೇರೆಡೆಗಳಲ್ಲಿ ಪರಮಾತ್ಮನಿರುವುದನ್ನು ಅವರು ಅರಿಯರು. ಆದರೆ ತಾವೇ ಭಕ್ತರೆಂಬ ಅಹಂಕಾರ ಅವರಿಗೆ, ಇತರ ಭಕ್ತರನ್ನು ಉಪೇಕ್ಷೆ ಮಾಡುವರು. ಅವರಿಗೆ ಮನುಷ್ಯನಿಗಿಂತ ಕೊಂಚ ಹೆಚ್ಚು ಶಕ್ತಿಯುಳ್ಳವನು ಪರಮಾತ್ಮ ಅಷ್ಟೆ. ರಾಜಸಭಕ್ತರು ಪರಮಾತ್ಮನು ಸರ್ವೋತ್ತಮನೆಂಬುದನ್ನು ಬಲ್ಲರು ; ಅವನಲ್ಲಿ ಆದರವನ್ನು ಇರಿಸಿಕೊಂಡು ಅವನ ಭಕ್ತರನ್ನೂ ವಿಶ್ವಾಸದಿಂದ ಕಾಣುವರು. ಭಗವದ್ವಿಷಯದಲ್ಲಿ ಅವರಿಗೆ ಶ್ರದ್ಧೆಯುಂಟು. ಆದರೆ ಅವರ ಕಲ್ಪನೆಯಲ್ಲಿ ಪರಮಾತ್ಮ ಕ್ಷೀರಸಾಗರ ಮಧ್ಯಗತ ; ಕೆಲವು ವಿಶಿಷ್ಟ ರೂಪಗಳುಳ್ಳವ, ಗುಣಗಳುಳ್ಳವ. ಜೀವ–ಜಡ ಜಗತ್ತೆಲ್ಲ ಪರಮಾತ್ಮನ ಅಧೀನವೆಂಬುದನ್ನು ಅವರು ಅರಿಯರು. ಸಾತ್ವಿಕಭಕ್ತರು ಪರಮಾತ್ಮನು ಸರ್ವೋತ್ತಮ ಮಾತ್ರವಲ್ಲದೆ ಸರ್ವಾತ್ಮಕನೆಂದೂ ಬಲ್ಲರು ;

ಸಕಲ ಗುಣಪೂರ್ಣನೆಂದು ತಿಳಿದು ಎಲ್ಲೆಲ್ಲಿಯೂ ಇರುವನೆಂಬುದನ್ನು ಗಟ್ಟಿ ಮಾಡಿಕೊಂಡು ತಮಗೆ ಆತ್ಮನಾಗಿ ಅವನನ್ನು ಕಾಣುವರು. 'ಆತ್ಮ'ನೆಂಬ ಮಾತಿಗೆ ಪೂರ್ಣನೆಂದೇ ಅರ್ಥ ('ಪೂರ್ಣತ್ವಾದಾತ್ಮಶಬ್ದೋಕ್ತಃ . ಸಃ ನಾರಾಯಣೋ ನಾನ್ಯಃ ಸ ಚ ಸರ್ವೇಷು ಸಂಸ್ಥಿತಃ'). ಹೀಗೆ ಪರಮಾತ್ಮನನ್ನು ತಮ್ಮ ಹೃದಯದಲ್ಲೇ ತಮಗೆ ಬಿಂಬವಾಗಿ (ಸ್ವಾಮಿಯಾಗಿ, ನಿಯಾಮಕ ನಾಗಿ) ಕಾಣುವವರನ್ನು 'ಭಾಗವತೋತ್ತಮ' ರೆಂದು ಕರೆಯಲಾಗಿದೆ.

ಮಧ್ವಾಚಾರ್ಯರು ಗೀತಾಭಾಷ್ಯದಲ್ಲಿ 'ಸರ್ವೇಷಾಂ ಬಿಂಬರೂಪೋ ಹರಿರೇವ' ಎಂಬ ಸೂತ್ರವನ್ನು ನಿರೂಪಿಸಿದ್ದಾರೆ. ಭಕ್ತನು ಪರಮಾತ್ಮ ನನ್ನು ತನ್ನ ಬಿಂಬವೆಂದು ತಿಳಿದಾಗ ತನ್ನ ನಿಜಸ್ವಾಮಿಯೆಂದೂ, ಮುಖ್ಯ ಸ್ವತಂತ್ರನೆಂದೂ, ಜೀವನಲ್ಲಿ ಸರ್ವವ್ಯಾಪ್ತನಾಗಿರುವನೆಂದೂ ತನ್ನ ಭಾವ, ಕ್ರಿಯೆ, ದ್ರವ್ಯಗಳಲ್ಲಿ ನಿಂತು ಪ್ರೇರಿಸುವನೆಂದೂ, ತನ್ನ ಕೆಲಸವೆಲ್ಲ ಬಿಂಬಾ ಧೀನವಾದುದೆಂದೂ ತಿಳಿಯುವನು. ಬಿಂಬನಾದ ಪರಮಾತ್ಮನು ಅಂಶಿ, ಪ್ರತಿಬಿಂಬನಾದ ತಾನು ಅಂಶ ಎಂಬುದನ್ನು ಮ ನ ಗಾ ಣು ವ ನು. ಪ್ರತಿಬಿಂಬನಿಗೆ ಅಲ್ಪಜ್ಞಾನಾಂಶವಿದ್ದು ಕರ್ಮಾಧೀನನಾದುದರಿಂದ ಭ್ರಮೆಗೆ ಕಾರಣವುಂಟು ; ವಿಷಯಭೋಗ, ಸುಖದುಃಖಾನುಭವಗಳು ಜೀವನಿಗೆ ಒದಗುವುದು ಹೀಗೆ. ಆದರೆ ಬಿಂಬನು ನಿಯಾಮಕ ; ಕರ್ಮಪ್ರಚೋದಕ, ಜೀವರ ಸ್ವರೂಪಕ್ಕೆ ಯೋಗ್ಯತೆಗೆ ಅನುಗುಣವಾಗಿ ಅವರಿಂದ ಕರ್ಮವನ್ನು ಮಾಡಿಸುತ್ತಾನೆ, ಅದರ ಫಲವನ್ನು ಉಣಿಸುತ್ತಾನೆ, ತಾನು ಮಾತ್ರ ನಿರ್ಲಿಪ್ತನಾಗಿ ಸಾಕ್ಷಿಯಂತೆ ಉಳಿಯುತ್ತಾನೆ. ಇದಕ್ಕನುಸಾರವಾಗಿ ಬಿಂಬನ ಕರ್ತೃತ್ವಾಂಶವನ್ನು ಪ್ರೇರಕ, ನೇಮಕ, ಸಾಕ್ಷಿಕ ಎಂದು ವಿಭಾಗಮಾಡುವು ದುಂಟು.

ಜೀವ ಮತ್ತು ಈಶರು (ಪ್ರತಿಬಿಂಬ ಮತ್ತು ಬಿಂಬರು) ಅನಾದಿ ಕಾಲದಿಂದ ಒಂದೆಡೆ ನೆಲೆಸಿದ್ದಾರೆ, ಜೀವನ ಹೃದಯಗುಹೆಯಲ್ಲಿ. ಜೀವನು ತನ್ನ ಹೃದಯದಲ್ಲೇ ಬಿಂಬನನ್ನು ಕಂಡುಕೊಂಡು ಒಳಗೆ ಬಿಂಬ, ಹೊರಗೆ ರಕ್ಷಕ ಎಂದು ಧ್ಯಾನಿಸುವುದು, ಜೀವನಲ್ಲೆಲ್ಲ ಬಿಂಬನು ನಿತ್ಯವ್ಯಾಪ್ತನೆಂದು ಅರಿತುಕೊಳ್ಳುವುದು ಬಿಂಬೋಪಾಸನೆಯೆನಿಸುತ್ತದೆ.

ಮುಖಾರಿ　　　　　　　　　　　　　　　　　　　　　　　　　　　　　ಅಟ್ಟ

ತೊಳಲದಿರು ಕಂಡ್ಯ ಕಡೆಗೆ ಪರಮಾತ್ಮ
ನೊಳೆ ಕಂಡು ಸುಖಿಸೊ ಮನವೆ　　　　ಪ

ಲಿಪಿಯೊಳಖಿಳವ ಚಿಂತಿಸಿ ಕಡೆಕಡೆಗೆ
ಕಪಿಯಂತೆ ಎಡೆಗೊಡದೆ ಮನವೆ
ಗುಪಿತದೊಳಗಿದ್ದಾತ್ಮನ ಧ್ಯಾನಿಸಲು
ಅಪರಿಮಿತ ಸುಖ ಸುಖಿಸುವೆ ಮನವೆ　　　　೧

ನಾಗ ಸುರ ನರಲೋಕವ ತಿರುತಿರುಗಿ
ಕಾಗೆಯಂತೆಡೆಯಾಡದೆ
ರಾಗ ದ್ವೇಷವ ತೊಲಗಿಸಿ ಮನದಿ ಮಧು
ಸೂದನನ ಕಾಣು ಕಂಡ್ಯ ಮನವೆ　　　　೨

ಪರರಿಗಿದ ಸೂಚಿಸದಿರೊ ಸಿದ್ಧಾಂತ
ಪರಮ ತತ್ವವನು ತಿಳಿದು ಮನವೆ
ಪರ ಪುರಂದರವಿಠಲನ ಸ್ಮರಿಸಲು
ಸ್ಥಿರವುಳ್ಳ ಮುಕುತಿಯಹುದೊ ಮನವೆ　　　　೩

ಕಡೆಗೆ—ಸಾಧನೆಗಳನ್ನೆಲ್ಲ ಪೂರೈಸಿದ ಮೇಲೆ.

ಒಳ ಕಂಡು—ಹೃದಯ ಗುಹೆಯಲ್ಲಿ, ಅಂತರಂಗದಲ್ಲಿ.

ಲಿಪಿಯೊಳಗೆ—ಬರಹದಲ್ಲಿ, ಶಾಸ್ತ್ರಗಳಲ್ಲಿ; ಇಲ್ಲಿ ಹೇಳಿರುವುದನ್ನೆಲ್ಲ ಶ್ರವಣ–ಮನನ ಗಳಿಂದ ಮನದಟ್ಟುಮಾಡಿಕೊಂಡು

ಕಪಿಯಂತೆ ಎಡೆಗೊಡದೆ. .—ನಿದಿಧ್ಯಾಸನ, ಏಕಾಗ್ರಬುದ್ಧಿ (ಮನಸ್ಸಿನಲ್ಲಿ ಬೇರೆ ವಿಷಯಗಳಿಗೆ ಎಡೆಯನ್ನು ಕೊಡದೆ).

ಗುಪಿತದೊಳಗಿದ್ದ ಆತ್ಮನ .—ಗುಪ್ತವಾಗಿ, ಅವ್ಯಕ್ತನಾಗಿ, ಹೃದಯಗುಹೆಯಲ್ಲಿ

ಅಡಗಿರುವ ಬಿಂಬನನ್ನು ; ಆತ್ಮನೆಂದರೆ ಎಲ್ಲೆಲ್ಲೂ ವ್ಯಾಪಿಸಿಕೊಂಡು ಪೂರ್ಣ ನಾಗಿರುವುದು ('ಪೂರ್ಣತ್ವಾತ್ ಆತ್ಮಶಬ್ದಃ').

ಅಪರಿಮಿತ ಸುಖ—ಅಲೌಕಿಕವಾದ ಸ್ವರೂಪಾನಂದ.

ನಾಗ ಸುರ ನರ ಲೋಕಗಳ—ಪಾತಾಳ, ಸ್ವರ್ಗ, ಮನುಷ್ಯಲೋಕಗಳಲ್ಲಿ.

ಪರರಿಗಿದ ಸೂಚಿಸದಿರೊ—ಬಿಂಬೋಪಾಸನೆ ಎಲ್ಲರಿಗೂ ಸಾಧ್ಯವಿಲ್ಲ ; ಜ್ಞಾನಸಂಪನ್ನ ರಿಗೆ ಮಾತ್ರ ಬಿಂಬನ ಕ್ರಿಯಾನುಸಂಧಾನಪೂರ್ವಕವಾದ ಧ್ಯಾನ ಸಾಧ್ಯವಾಗು ತ್ತದೆ. ಉಳಿದವರಿಗೆ ಕರ್ಮಮಾರ್ಗ, ನಾಮಸ್ಮರಣೆ, ಕ್ಷೇತ್ರಾಟನೆ, ಭಜನೆ ಮೊದಲಾದ ಇತರ ಮಾರ್ಗಗಳನ್ನು ಹೇಳಿದ್ದಾರೆ.



ಪೂರ್ವಿಕಲ್ಯಾಣಿ ಚಾಪು

ಬ್ರಹ್ಮಾಂಡದೊಳಗೆ ಅರಸಿ ನೋಡಲು ಸಮ್ಮೂರೇ ವಾಸಿ ಪ

ರಮೆಯು ಅರಸನು ಸರ್ವದಾ ವಾಸಿಪ ಸುಮ್ಮಾನದಿ ತಾನು ಅ

ಜನನ ಮರಣವಿಲ್ಲ, ಅಲ್ಲಿ, ಉಣುವ ದುಃಖವಿಲ್ಲ
ಅನುಜ ತನುಜರು ಅಲ್ಲಿಲ್ಲ, ಅನುಮಾನದ ಸೊಲ್ಲೇ ಇಲ್ಲ ೧

ನಿದ್ರೆಯು ಅಲ್ಲಿಲ್ಲ, ರೋಗೋಪದ್ರಗಳಲ್ಲಿಲ್ಲ
ಕ್ಷುದ್ರ ಜನಂಗಳು ಅಲ್ಲಿಲ್ಲ, ಸಮುದ್ರಶಯನ ಬಲ್ಲ ಎಲ್ಲ ೨

ಸಾಧು ಜನರ ಕೂಡೆ, ಮೋಕ್ಷಕೆ ಸಾಧನೆಗಳ ಮಾಡೆ
ಮಾಧವ ಪುರಂದರವಿಠ್ಠಲರಾಯನು, ಆದರಿಸುವನಲ್ಲೆ ಬಲ್ಲೆ ೩

ಸಮ್ಮೂರು—ಪ್ರತಿಬಿಂಬನಾದ ಜೀವನ ಸ್ವಸ್ಥಾನ; ಹೃದಯಕಮಲ; ಬಿಂಬನ ಸಾನ್ನಿಧ್ಯದಲ್ಲಿ. ಅಲ್ಲಿಯೇ ರಮೆಯ ಅರಸನಾದ ಹರಿಯು ನಿರ್ಲಿಪ್ತನಾಗಿ ಕಾರುಣ್ಯದಿಂದ (ಸುಮ್ಮಾನದಿ) ನೆಲೆಸಿರುವನು. ಜೀವೇಶರಿಗೆ ನಿತ್ಯವಾಸವು ಏಕತ್ರವೆಂದು ಸಿದ್ಧಾಂತ. ಮುಕ್ತಿಯಲ್ಲಿ ವೈಕುಂಠ ಜೀವದ ನೆಲೆಮನೆ.

ಸಾಧುಜನರ ಕೂಡೆ—ಸತ್ಸಂಗ ಮಾಡಲು.

ಮೋಕ್ಷಕೆ ಸಾಧನೆ—ಜ್ಞಾನ, ಭಕ್ತಿ, ವೈರಾಗ್ಯ ; ಶ್ರವಣ, ಮನನ, ನಿದಿಧ್ಯಾಸನ.

ನಾದನಾಮಕ್ರಿಯೆ ಅಟ್ಟ

ಕಣ್ಣಿನೊಳಗೆ ನೋಡೊ ಹರಿಯ ಒಳ
ಗಣ್ಣಿನಿಂದಲಿ ನೋಡೊ ಮೂಜಗದ ಧೊರೆಯ ಪ

ಆಧಾರ ಮೊದಲಾದ ಆರು ಚಕ್ರ
ಶೋಧಿಸಿ ಬಿಡಬೇಕು ಈಷಣ ಮೂರು
ಸಾಧಿಸಿ ಸುಷುಮ್ನ ಏರು ಅಲ್ಲಿ
ಭೇದಿಸಿ ನೀ ಪರಬ್ರಹ್ಮನ ಸೇರು ೧

ಎವೆ ಹಾಕದೆ ಮೇಲೆ ನೋಡು ಮುಂದೆ
ತವಕದಿಂದಲಿ ವಾಯು ಬಂಧನ ಮಾಡು
ಸವಿದು ನಾದವ ಪಾನಮಾಡು ಅಲ್ಲಿ
ನವ ವಿಧ ಭಕ್ತಿಲಿ ನಲಿ ನಲಿದಾಡು ೨

ಅಂಡದೊಳಗೆ ಆಡುತಾನೆ ಭಾನು
ಮಂಡಲ ನಾರಾಯಣನೆಂಬುವನೆ
ಕುಂಡಲಿ ತುದಿಯೊಳಿದ್ದಾನೆ ನಮ್ಮ
ಪುರಂದರವಿಠಲನು ಪಾಲಿಸುತಾನೆ ೩

ಕಣ್ಣಿನೊಳಗೆ—ಬಲಗಣ್ಣಿನಲ್ಲಿ ವಿಶ್ವನಾಮಕ ಪರಮಾತ್ಮನ ಸ್ಥಾನ.

ಒಳಗಣ್ಣಿನಿಂದಲಿ—ಧ್ಯಾನದಲ್ಲಿ.

ಆಧಾರ ಮೊದಲಾದ...—ಷಟ್ಚಕ್ರ ನಿರೂಪಣೆಯಲ್ಲಿ ಬರುವ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ ಎಂಬ ಆರು ಚಕ್ರಗಳು. ನಿರ್ದಿಷ್ಟ ಸಾಧನೆಗಳಿಂದ ಕ್ರಮವರಿತು ಈ ಚಕ್ರಗಳನ್ನು ಜಾಗ್ರತಗೊಳಿಸುವುದು ಶೋಧನವೆನಿಸಿಕೊಳ್ಳುತ್ತದೆ. ಸಾಮಾನ್ಯ ಮನುಷ್ಯರಲ್ಲಿ ಈ ಚಕ್ರಗಳು ಅಧೋಮುಖವಾಗಿರುತ್ತವೆಂದೂ, ಯೋಗಿಗಳಲ್ಲಿ ಸಾಧನೆಯ ಫಲವಾಗಿ ಊರ್ಧ್ವಮುಖವಾಗಿ ಅರಳುವುವೆಂದೂ, ಅದೇ ಜಾಗ್ರತ ಸ್ಥಿತಿಯೆಂದೂ ಕಲ್ಪನೆ.

ಈಷಣ ಮೂರು—'ಏಷಣ' ಎಂದಿರಬೇಕು ; ಬಲವಾದ ಬಯಕೆಯೆಂದರ್ಥ. ಏಷಣಾತ್ರಯವೆಂದು ಹೆಣ್ಣಿಗಾಗಿ ಬಯಕೆ (ದಾರೈಷಣ), ಹೊನ್ನಿಗಾಗಿ ಬಯಕೆ (ವಿತ್ತೈಷಣ), ಮಕ್ಕಳಿಗಾಗಿ ಬಯಕೆ (ಪುತ್ರೈಷಣ) ಎಂಬ ಬಯಕೆಗಳನ್ನು ಹೇಳುವುದಿದೆ.

ಸಾಧಿಸಿ ಸುಷುಮ್ನ...—ದೇಹದಲ್ಲಿರುವ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಹೃದಯಕ್ಕೆ ಹೊಂದಿಕೊಂಡಂತೆ ಇರುವ ನೂರೊಂದು ನಾಡಿಗಳು ಮುಖ್ಯವಾದುವು ; ಅವುಗಳಲ್ಲಿ ಬಲಗಡೆ ಇರುವ ಇಡಾ (ಸೋಮ), ಎಡಗಡೆ ಇರುವ ಪಿಂಗಳಾ (ಸೂರ್ಯ), ನಡುವೆ ಇರುವ ಸುಷುಮ್ನಾ (ಅಗ್ನಿ) ಇವು ಪ್ರಧಾನವಾದುವು. ಇವುಗಳಲ್ಲಿ ಸುಷುಮ್ನಾ ಎಂಬುದೇ ಕುಂಡಲಿನೀ ಮಾರ್ಗ (ರುದ್ರಯಾಮಳ). ಇದರಲ್ಲಿ ಆಧಾರಶಕ್ತಿಯನ್ನು ತೊಡಗಿಸಿ ಮೇಲುಮೇಲಿನ ಚಕ್ರಗಳಿಗೆ ಸಾಗಿಸುವುದು 'ಕುಂಡಲಿನೀ ಉತ್ಥಾಪನ' ಎನಿಸಿಕೊಳ್ಳುತ್ತದೆ. ಮೇಲೆ ಕ್ರಮವಾಗಿ ಆರೂ ಚಕ್ರಗಳನ್ನು ದಾಟಿ ಸಹಸ್ರಾರವೆಂಬ ಪರಬ್ರಹ್ಮನ ಸ್ಥಾನಕ್ಕೆ ಸೇರುವುದು ಉದ್ದೇಶ.

ಎವೆ ಹಾಕದೆ ನೋಡು—ಯೋಗಸಾಧನೆಯ ಒಂದು ಪ್ರಕಾರ.

ವಾಯುಬಂಧನ—ಕುಂಭಕವೆಂಬ ಪ್ರಾಣಾಯಾಮದ ಅಂಗ. ಗಾಳಿಯನ್ನು ಒಳಗೆಳೆದುಕೊಳ್ಳುವುದು ಪೂರಕ, ಹೊರಕ್ಕೆ ಬಿಡುವುದು ರೇಚಕ, ಒಳಗೇ ನಿಲ್ಲಿಸುವುದು ಕುಂಭಕ.

ನಾದವ ಪಾನಮಾಡು—ಸಹಸ್ರಾರದಲ್ಲಿ ಕುಂಡಲಿನಿಯ ಪ್ರವೇಶವಾದರೆ ಪ್ರಣವ ನಾದದ ಅನುಭವವಾಗುವುದೆಂದು ಕಲ್ಪನೆ.

ನವವಿಧ ಭಕ್ತಿಲಿ—ಭಕ್ತಿಯ ಒಂಬತ್ತು ಪ್ರಕಾರಗಳು, ಶ್ರವಣ, ಕೀರ್ತನೆ, ಸ್ಮರಣ, ಪಾದಸೇವನ, ಅರ್ಚನ, ವಂದನ, ಸಖ್ಯ, ದಾಸ್ಯ ಮತ್ತು ಆತ್ಮನಿವೇದನ.

ಅಂಡದೊಳಗೆ—ಬ್ರಹ್ಮಾಂಡದಲ್ಲಿ, ಪಿಂಡಾಂಡದಲ್ಲಿ.

ಭಾನುಮಂಡಲ ನಾರಾಯಣ—ಸೂರ್ಯಮಂಡಲದ ನಡುವೆ ಇರುವವ ; 'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ ಸರಸಿಜಾಸನ ಸಂನಿವಿಷ್ಟಃ'.

ಕುಂಡಲಿ ತುದಿಯಲಿ—ಕುಂಡಲಿನೀಶಕ್ತಿಯ ಚರಮಾವಸ್ಥೆಯಲ್ಲಿ, ಸಹಸ್ರಾರ ಚಕ್ರದಲ್ಲಿ.

ಧನ್ಯಾಸಿ ಆದಿ

ಪಿಂಡಾಂಡದೊಳಗಿನ ಗಂಡನ ಕಾಣದೆ
ಮುಂಡೆಯರಾದರು ಪಂಡಿತರೆಲ್ಲ ಪ

ಆಧಾರ ಮೊದಲಾದ ಆರು ಚಕ್ರವ ಮೀರಿ
ನಾದಬಿಂದು ಕಳೆಯುಳಿದ ಬಳಿಕ
ಶೋಧಿಸಿ ಸುಧೆಯ ಪ್ರಸಾದವನುಣ್ಣದೆ
ಓದುತ ಮನದೊಳು ಒಂದನು ತಿಳಿಯದೆ ೧

ನಾದದೊಳಗೆ ಸುನಾದ ಓಂಕಾರದಿ
ಪದವ ಬಿತ್ತಿ ಪರಿಣಾಮಿಯಾಗದೆ
ವೇದಾಂತರೂಪ ತದ್ರೂಪ ನಾಲಗೆಯಲಿ
ವಾದಿಸಿ ಮನದೊಳು ಒಂದನು ಅರಿಯದೆ ೨

ನವನಾಳ ಮಧ್ಯದಿ ಪವನ ಸುತ್ತಿದ್ದು ಫಣಿ
ಶಿವನ ತ್ರಿಪುಟ ಸ್ಥಿತಿ ಸ್ಥಿರವಾಗದೆ
ಭವರೋಗ ವೈದ್ಯನ ಧ್ಯಾನವ ಮಾಡದೆ
ಶವುರಿ ಶ್ರೀಪುರಂದರವಿಠಲನ ಸ್ಮರಿಸದೆ ೩

ಪಿಂಡಾಂಡ—ಜೀವರ ಕರ್ಮಭೋಗಕ್ಕೆಂದು ಸಿದ್ಧವಾದ ಶರೀರ ; ಇಂದ್ರಿಯಗಳು, ಮನಸ್ಸು, ಪಂಚಪ್ರಾಣಗಳು, ಪಂಚಮಹಾಭೂತಗಳು ಇವುಗಳಿಂದ ಕೂಡಿದ ಸ್ಥೂಲ–ಸೂಕ್ಷ್ಮ ಶರೀರಗಳು ; ಕ್ಷೇತ್ರಜ್ಞನಾದ ಜೀವನಿಗೆ ಕ್ಷೇತ್ರಪ್ರಾಯ ವಾಗಿರುವುದು ; ಅನ್ನದಿಂದ ಬೆಳೆಯುವ ಅನ್ನಮಯ ಕೋಶವೇ ಮೊದಲಾಗಿ ಐದು ಕೋಶಗಳುಳ್ಳದ್ದು. ಹೊರಗಣ ಇಡೀ ಜಗತ್ತನ್ನು ಬ್ರಹ್ಮಾಂಡವೆಂದೂ ಅದರಿಂದ ಬೇರೆಯಾದ ಶರೀರವನ್ನು ಪಿಂಡಾಂಡವೆಂದೂ ಕರೆಯುವರು.

ಗಂಡ—ಪಿಂಡಾಂಡದೊಳಗಿರುವ ಬಿಂಬರೂಪೀ ಪರಮಾತ್ಮ ; ಹೃದಯ ಕುಹರದಲ್ಲಿ ರುವ ಪರಮಾತ್ಮ ; ಎಲ್ಲಕ್ಕೂ ಪ್ರೇರಕ, ನಿಯಾಮಕ, ಸಾಕ್ಷಿ.

ಮುಂಡೆಯರಾದರು...—ಪಂಡಿತರು ಕೇವಲ ಶಾಸ್ತ್ರಜ್ಞರಾಗಿ ಸಾಧನೆ ಮಾಡದೆ ಇದ್ದರೆ, ಅವರಿಗೆ ದಿಕ್ಕು ಕಾಣದೆ, ಗತಿಯಿಲ್ಲದವರಾಗುವರೆಂದು ಭಾವ.

ಆಧಾರ ಮೊದಲಾದ...—ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ.

ನಾದ ಬಿಂದು ಕಳೆಯುಳಿದ ಬಳಿಕ—'ನಾದಬಿಂದು ಕಲಾತೀತ' ; ಸಗುಣಪರಮೇಶ್ವರ ನಿಂದ (ಸಚ್ಚಿದಾನಂದವಿಭವ) ಶಕ್ತಿಯು (ಪ್ರಕೃತಿ) ಹೊರಹೊಮ್ಮಿ, ಅದು ಪರನಾದವಾಗಿಯೂ, ಮುಂದೆ ಪರಬಿಂದುವಾಗಿಯೂ ತೋರಿಕೊಳ್ಳುವುದು ; ಪರಬಿಂದುವು ಮೂರು ಭಾಗವಾಗಿ ಒಡೆದು ಅಪರಬಿಂದು (ಶಿವ), ಅಪರನಾದ, ಮತ್ತು ಬೀಜ (ಶಕ್ತಿ)ಗಳಾಗಿ ಏರ್ಪಡುವುವು. ಬೀಜರೂಪವಾದ ಶಕ್ತಿಯೇ ಶಬ್ದ ಬ್ರಹ್ಮ, ಪರಾಶಕ್ತಿ ; ಕುಂಡಲಿನಿಯ ಆಕಾರದಲ್ಲಿರುತ್ತದೆ. ಕಾರ್ಯಪ್ರಪಂಚ ದಲ್ಲಿ ಇದಕ್ಕೆ ಏಳು ಕಲೆಗಳು (ಗುಣಗಳು). (ಶಾರದಾತಿಲಕ, ರುದ್ರಯಾಮಳ).

ಸುಧೆಯ ಪ್ರಸಾದ—ಕುಂಡಲಿನಿಯು ಜಾಗ್ರತವಾದಾಗ ಸಹಸ್ರಾರದಿಂದ ಸುಧಾ ಸ್ರವಣವಾಗುವುದು ; ಇದೇ ಅಮೃತ ('ಪ್ರತಿಪ್ರಯಾಣೇಪ್ಯಮೃತಾಯ ಮಾನಾ').

ಸುನಾದ ಓಂಕಾರದಿ.. —ಪ್ರಣವ ಉದ್ಗೀಥ ; ಇದರ ಉಪಾಸನೆಯಿಂದ ಶಬ್ದಬ್ರಹ್ಮ ನನ್ನು ನೆಲೆಗೊಳಿಸಿ, ವಿಕಾರವನ್ನು ಹೊಂದದೆ, ಚಿತ್ತಸ್ಥೈರ್ಯದಿಂದ.

ವೇದಾಂತರೂಪ...—ಉಪನಿಷತ್‌ಪ್ರತಿಪಾದ್ಯನಾದ ಬ್ರಹ್ಮನ ಅರಿವನ್ನು ಪಡೆದ ನಾಲಗೆಯೆಂದರೆ ಶಬ್ದದ ಚರಮಾವಸ್ಥೆ (ಪರಾವಾಕ್) (ಉಳಿದವು ಪಶ್ಯಂತಿ, ಮಧ್ಯಮಾ, ವೈಖರೀ).

ಮನದೊಳು ಒಂದನು ಅರಿಯದೆ—ಅಸಂಪ್ರಜ್ಞಾತಸಮಾಧಿ.

ನವನಾಳಮಧ್ಯದಿ...—ಒಂಬತ್ತು ಆವರಣಗಳು ; ಛಿದ್ರರೂಪವಾಗಿರುವುದರಿಂದ ನಾಳಗಳು ; ಬ್ರಹ್ಮರಂಧ್ರ, ಮಸ್ತಕ, ಲಲಾಟ, ಭ್ರೂಮಧ್ಯ, ಕಂಠ, ಹೃದಯ, ನಾಭಿ, ಸ್ವಾಧಿಷ್ಠಾನ, ತ್ರಿಪುರ (ಪಾದ, ಜಂಘೆ, ಜಾನು).

ಪವನ ಸುತ್ತಿದ್ದು ಫಣಿ—ಕುಂಡಲಿನೀ.

ಶಿವನ ತ್ರಿಪುಟ ಸ್ಥಿತಿ—ಸತ್, ಚಿತ್, ಆನಂದಗಳು ತ್ರಿಪುಟಿಯೆನಿಸಿಕೊಳ್ಳುತ್ತವೆ ; ಇವು ಒಟ್ಟಾಗಿರುವ ಸ್ಥಿತಿ ; ಅಖಂಡಬ್ರಹ್ಮ ; ಸೋಮ, ಸೂರ್ಯ, ಅಗ್ನಿ ಗಳೆಂಬ ಖಂಡಗಳು ಕೂಡಿ ಶಿವನೆಂದು ತಂತ್ರಶಾಸ್ತ್ರದ ಒಕ್ಕಣೆ ; ಜ್ಞಾನ, ಜ್ಞೇಯ, ಜ್ಞಾತೃ ಇದು ಸಾಮರಸ್ಯದ ತ್ರಿಪುಟಿ.

ಮೋಹನ ಅಟ್ಟ

ಹಂಸ ನಿನ್ನಲ್ಲಿ ನೀ ನೋಡೋ, ಭವ
ಪಾಶ ಮುಕ್ತನಾಗಿ ಹರಿಯನ್ನು ಕೂಡೊ ಪ

ಸಖಿಗಳೆರಡುಂಟು ನಿನಗೆ ನೀ
ಹೊಕ್ಕು ಹೋಗುವೆ ಮೂರು ಪಂಜರದೊಳಗೆ
ಲೆಖ್ಖವಿಲ್ಲದ ಬಟ್ಟೆ ನಿನಗೆ ಈಗ
ಸಿಕ್ಕಿದೆಯೋ ಮಾಯಪಾಶದೊಳಗೆ ೧

ಹಬ್ಬದ ಸವಿಗೆ ನೀ ಬಂದೆ
ಬಲು ಕೊಬ್ಬಿಲಿ ಕಾಣದೆ ವಿಷದೊಳು ಬಿದ್ದೆ
ನಿಬ್ಬಣದಲಿ ಮೈಯು ಮುರಿದೆ, ನೀ
ಒಬ್ಬನೆ ಹೋಗಿ ಕಾಲಕ್ಕೆ ಗುರಿಯಾದೆ ೨

ದಾರಿಗೆ ದಾರು ಮತ್ತಿಲ್ಲ ದೃಢ
ಸೇರಿಸು ಮನವನು ಮನೆಯೊಳಗೆಲ್ಲ
ದೂರ ಹೋಯಿತು ಪ್ರಾಯವೆಲ್ಲ ಸಿರಿ
ಪುರಂದರವಿಠಲನಲ್ಲದೆ ಬೇರೆಯಿಲ್ಲ ೩

ಹಂಸ—ಪರೋಪಾಸನೆಯಲ್ಲಿ ಶ್ವಾಸದ ಬಹಿರ್ಗಮನವನ್ನು 'ಹಂ' ಎಂದೂ, ಶ್ವಾಸದ ಅಂತರ್ಗಮನವನ್ನು 'ಸಃ' ಎಂದೂ ಉಚ್ಚಾರಣೆಯಿಂದ ನಿರ್ದೇಶಿಸುತ್ತಾರೆ. ಹೀಗೆ ಜೀವನು ಹಂಸರೂಪಿಣಿಯಾದ ಅಜಪಾಗಾಯತ್ರಿಯನ್ನು ('ಹಂಸಃ ಸೋಽಹಂ') ಎಡೆಬಿಡದೆ ಜಪಿಸುತ್ತಿರುವುದರಿಂದ, ಜೀವನಿಗೇ ಹಂಸವೆಂದು ಹೆಸರು.

ನಿನ್ನಲ್ಲಿ...—ಜೀವನು ಪ್ರತಿಬಿಂಬನಾಗಿ ಅದರಲ್ಲಿ ಪ್ರೇರಕ, ನಿಯಾಮಕ, ಸಾಕ್ಷಿಕ ನಾಗಿರುವ ಬಿಂಬರೂಪೀ ಪರಮಾತ್ಮನನ್ನು ಧ್ಯಾನದಲ್ಲಿ ನೋಡು.

ಸಖಿಗಳೆರಡು—ಜ್ಞಾನ, ಭಕ್ತಿಗಳೆರಡು ಸ್ನೇಹಿತರಂತೆ ಹಿತಕಾರಿಗಳು.

ಮೂರು ಪಂಜರದೊಳಗೆ—ಸ್ಥೂಲಶರೀರ, ಸೂಕ್ಷ್ಮಶರೀರ, ಕಾರಣಶರೀರಗಳೆಂಬುವು ಪಂಜರಗಳಂತೆ.

ಲೆಖ್ಖವಿಲ್ಲದ ಬಟ್ಟೆ—ಬಟ್ಟೆಯೆಂದರೆ ಜನ್ಮ, ದೇಹ ; ಭಗವದ್ಗೀತೆಯ 'ಮನುಷ್ಯನು ಹಳೆಯ ಬಟ್ಟೆಯನ್ನು ಬಿಸುಟು ಹೊಸಬಟ್ಟೆಗಳನ್ನುಡುವಂತೆ ಜೀವವು ಜೀರ್ಣವಾದ ದೇಹವನ್ನು ಕಳೆಚಿ ಹೊಸದೇಹವನ್ನು ಪಡೆಯುತ್ತದೆ' ('ವಾಸಾಂಸಿ ಜೀರ್ಣಾನಿ ಯಥಾ ವಿಹಾಯ') ಎಂಬ ಮಾತಿನ ಮೂಲ.

ಮಾಯಾಪಾಶ—ಹರಿಯ ಸಂಕಲ್ಪದಿಂದ ಅನಾದಿಸಿದ್ಧವಾದ ಭ್ರಮೆ (ತಾನೇ ಸ್ವತಂತ್ರ, ತಾನೇ ಕರ್ತೃ, ತಾನೇ ಭೋಕ್ತೃ ಎನ್ನುವ ಭ್ರಮೆ).

ಹಬ್ಬದ ನವಿಗೆ—ಕರ್ಮಫಲದ ಭೋಗಕ್ಕೆಂದು.

ಬಲುಕೊಬ್ಬಿಲಿ—ಹರಿವಿಸ್ಮರಣೆಯೆಂಬ ಕೊಬ್ಬಿನಲ್ಲಿ.

ವಿಷದೊಳು—ಸಂಸಾರದಲ್ಲಿ.

ನಿಬ್ಬಣವಲಿ—ಮೆರವಣಿಗೆಯಲ್ಲಿ.

ಸೇರಿಸು ಮನವನು ಮನೆಯೊಳಗೆಲ್ಲ—ಬಿಂಬೋಪಾಸನೆಯ ಕ್ರಮದಿಂದ.



ಮೋಹನ ಚಾಪು

ನಿಲ್ಲಬೇಕಯ್ಯ ಕೃಷ್ಣಯ್ಯ ನೀ ಪ

ನಿಲ್ಲಬೇಕಯ್ಯ ಮಲ್ಲಮರ್ದನ ಸಿರಿ
ವಲ್ಲಭ ಎನ್ನ ಹೃದಯದಲ್ಲಿ ಸತತ ನೀ ಅ

ಚುಪ್ಪಾಣಿ ಮುತ್ತಿಟ್ಟು ನೋಡುವೆ ನಿನ್ನ
ಚಪ್ಪಾಳಿ ತಟ್ಟಿ ನಾ ಪಾಡುವೆ
ಅಪ್ಪ ಶ್ರೀ ಕೃಷ್ಣ ನಿನ್ನೆತ್ತಿ ಮುದ್ದಿಸಿಕೊಂಬೆ
ಸರ್ಪಶಯನ ಕೃಪೆ ಮಾಡೆಂದು ಬೇಡುವೆ ೧

ಚಂದದ ಹಾಸಿಗೆ ಹಾಸುವೆ ಪುನುಗು
ಗಂಧ ಕಸ್ತೂರಿಯ ಪೂಸುವೆ
ತಂದು ಮುದದಿ ಮುತ್ತಿನ ಹಾರ ಹಾಕುವೆ
ನಂದಾದಿಂದಲಿ ನಿನ್ನ ಎತ್ತಿ ಮುದ್ದಿಸಿಕೊಂಬೆ ೨

ನೀಲದ ಕಿರೀಟವನಿಡುವೆ ಬಲು
ಬಾಲಲೀಲೆಗಳ ಪಾಡುವೆ
ಚೆಲುವ ಶ್ರೀ ಪುರಂದರವಿಠಲರಾಯನೆ
ನಿಲು ಎನ್ನ ಮನದಲ್ಲಿ ಒಂದೇ ಘಳಿಗೆ ೩

ಸಿರಿವಲ್ಲಭ—ಮೂಲಪ್ರಕೃತಿಯಾದ ಲಕ್ಷ್ಮಿಯೊಂದಿಗೆ ಅವಿನಾಭಾವದಿಂದ ಇರುವ ಪರಮಾತ್ಮ.

ಎನ್ನ ಹೃದಯದಲ್ಲಿ—ಜೀವ, ಈಶ ಇಬ್ಬರೂ ಏಕತ್ರವಾಗಿ ಇರುವ ಹೃದಯ ಕಮಲದಲ್ಲಿ ; ಬಿಂಬರೂಪಿಯಾಗಿ.

ಚುಪ್ಪಾಣಿ—ಮುತ್ತಿಡುವಾಗ ಮಾಡುವ ಶಬ್ದವನ್ನನುಕರಿಸಿ ; ಸುಪ್ಪಾಣಿ ಮುತ್ತು, ಶ್ರೇಷ್ಠವಾದ ಮುತ್ತಿನ ಆಭರಣ.

ನಂದಾದಿಂದಲಿ—ಆನಂದದಿಂದ.

ಆನಂದಭೈರವಿ ತ್ರಿವಿಡೆ

ಸುಮ್ಮನೆ ದೊರಕುವುದೇ ಶ್ರೀರಾಮನ ದಿವ್ಯ ನಾಮವು ಪ

ಜನ್ಮ ಜನ್ಮಾಂತರದ ದುಷ್ಕರ್ಮ ಹೋದವಗಲ್ಲದೆ ಅ

ಭಕ್ತಿರಸದಲಿ ತನ್ನ ಚಿತ್ತ ಪರವಶವಾಗಿ
ಅಚ್ಯುತನ್ನ ನಾಮವ ಬಚ್ಚಿಟ್ಟುಕೊಂಡವಗಲ್ಲದೆ ೧

ಕಂತುಪಿತನ ದಿವ್ಯನಾಮ ಅಂತರಂಗದೊಳಿಟ್ಟು
ಚಿಂತೆಯೆಲ್ಲವ ಬಿಟ್ಟು ನಿಶ್ಚಿಂತನಾದವಗಲ್ಲದೆ ೨

ಕಣ್ಣೊಳಗಿದ್ದ ಮೂರುತಿ ತನ್ನೊಳಗೆ ತಂದುಕೊಂಡು
ಘನ್ನಪೂರ್ಣ ಪುರಂದರವಿಠಲನ ಭಜಿಸದೆ ೩

ಜನ್ಮಜನ್ಮಾಂತರದ ದುಷ್ಕರ್ಮ...—ಸಂಚಿತವಾದ ಕರ್ಮದ ವಾಸನೆಗಳು, ಕರ್ಮ ಫಲ ಭೋಗದಿಂದಲೂ, ಪುಣ್ಯಕರ್ಮಗಳಿಂದಲೂ, ಪ್ರಾಯಶ್ಚಿತ್ತದಿಂದಲೂ, ಗುರುಕರುಣೆಯಿಂದಲೂ ಸವೆದಮೇಲೆ ಪರಮಾತ್ಮನಲ್ಲಿ ಮನಃಪ್ರಾವಣ್ಯ ಒದಗುತ್ತದೆ.

ಬಚ್ಚಿಟ್ಟುಕೊಂಡವಗಲ್ಲದೆ—ನಾಮಸ್ಮರಣೆಯನ್ನು ಅಜಪಾಗಾಯತ್ರಿಯ ಮೂಲಕ (ಹಂಸಮಂತ್ರ ವಿಧಾನದಲ್ಲಿ) ಮಾಡುವನಿಗಲ್ಲದೆ.

ಅಂತರಂಗದೊಳಿಟ್ಟು—ಮಾನಸಪೂಜಾಕ್ರಮ.

ಚಿಂತೆಯೆಲ್ಲವ—ಪ್ರಾಪಂಚಿಕವಾದ ಚಿಂತೆಯನ್ನೂ, ಸಾಧನೆಯ ವಿಚಾರವಾಗಿ ಸಂಶಯ ವನ್ನೂ ಬಿಟ್ಟು, 'ರಕ್ಷಿಷ್ಯತಿ' (ಎಂದರೆ ಸಲಹುವನು) ಎಂಬ ವಿಶ್ವಾಸದಿಂದ.

ಕಣ್ಣೊಳಗಿದ್ದ ಮೂರುತಿ...—ಬಲಗಣ್ಣಿನಲ್ಲಿರುವ ವಿಶ್ವನಾಮಕ ಪರಮಾತ್ಮನನ್ನು ತನ್ನ ಹೃದಯಗುಹೆಯಲ್ಲಿರುವ ಬಿಂಬರೂಪೀ ಪರಮಾತ್ಮನೆಂದು.

ಪಂತುವರಾಳಿ ಅಟ್ಟ

ಕೂಸನು ಕಂಡಿರಾ ಜ್ಞಾನಿಗಳೆಲ್ಲ ಕೂಸನು ಕಂಡಿರಾ ಪ

ನಾಸಿರನಾಮದ ಶತಕೋಟಿ ತೇಜದ
ಸೂಸುವ ಸುಖಮಯ ಜ್ಞಾನದ ಕೂಸು ಅ

ಜ್ಞಾನ ಸಮುದ್ರದೊಳಾಡುವ ಕೂಸು
ಜ್ಞಾನಿಗಳ ಹೃದಯದಿ ಹೊಳೆಯುವ ಕೂಸು
ದೀನದಾಸರಿಗೆ ಕಾಣುವ ಕೂಸು
ತಾನೆ ಬಲ್ಲುದು ತನ್ನ ಮಹಿಮೆಯ ಕೂಸು ೧

ಲೋಕತ್ರಯವೆಲ್ಲ ನೋಡುವ ಕೂಸು
ಬೇಕಾದ ಭಕ್ತರೊಳಾಡುವ ಕೂಸು
ಆಕಾರವಿದ್ದು ನಿರಾಕಾರ ಕೂಸು
ಸಾಕಲ್ಯ ದೃಷ್ಟಿಗೆ ಸಿಲುಕಿದ ಕೂಸು. ೨

ತನುಮನಧನದಲಿ ಕುಳಿತಿಹ ಕೂಸು
ಘನವಾದ ಮಹಿಮೆಗೆ ಕಾರಣ ಕೂಸು
ಬಿನುಗು ಬುದ್ಧಿಗೆ ಎಂದು ಸಿಲುಕದ ಕೂಸು
ಚಿನುಮಯ ಪುರಂದರವಿಠ್ಠಲ ಕೂಸು ೩

ನಾಸಿರ ನಾಮದ—ವಿಷ್ಣು ಸಹಸ್ರನಾಮದಲ್ಲಿರುವ ಹೆಸರುಗಳನ್ನುಳ್ಳ.
ಸೂಸುವ—ಸಿಂಪಡಿಸುವ (ಆನಂದವನ್ನು).
ಜ್ಞಾನಸಮುದ್ರದೊಳು—ಮಾಹಾತ್ಮ್ಯಜ್ಞಾನದಲ್ಲಿ.
ಜ್ಞಾನಿಗಳ ಹೃದಯದಿ—ಬಿಂಬರೂಪವಾಗಿ.
ದೀನದಾಸರಿಗೆ—ಆರ್ತಭಕ್ತಿಯುಳ್ಳವರಿಗೆ.
ತಾನೆ ಬಲ್ಲುದು ತನ್ನ ಮಹಿಮೆಯ—ಭಗವನ್ಮಾಹಾತ್ಮ್ಯೆಯನ್ನು ಸಂಪೂರ್ಣವಾಗಿ ಅರಿ

ಯುವುದು ಲಕ್ಷ್ಮಿಗೂ ಸಾಧ್ಯವಿಲ್ಲ ಎಂದ ಮೇಲೆ ಅವನಿಗೊಬ್ಬನಿಗೇ ಅದು ವೇದ್ಯ.

ಲೋಕತ್ರಯವೆಲ್ಲ—ಪರಮಾತ್ಮನು ಜೀವರ ಹೃದಯದಲ್ಲಿದ್ದರೂ ಬ್ರಹ್ಮಾಂಡವನ್ನೆಲ್ಲ ಅರಿಯುವನು.

ಬೇಕಾದ ಭಕ್ತರೊಳಗೆ—ತಾನು ತನ್ನ ಅನುಗ್ರಹವನ್ನು ಬೀರಿದ ಭಕ್ತರಲ್ಲಿ ; 'ಯಮೇವೈಷ ವೃಣುತೇ ತೇನ ಲಭ್ಯಃ' ಎನ್ನುವ ಉಪನಿಷದ್ವಚನ ಹಿನ್ನೆಲೆ.

ಆಕಾರವಿದ್ದು ನಿರಾಕಾರ—ಬ್ರಹ್ಮಾಂಡದ ಅಷ್ಟಮಹಾಕಾರ್ಯಗಳನ್ನು ನಡೆಸುವಾಗ ಪರಮಾತ್ಮನು ರೂಪ, ಗುಣಗಳನ್ನು ತಳೆದರೂ ಅವು ಪ್ರಾಕೃತವಲ್ಲ, ಕಾರ್ಮಣವಲ್ಲ, ವೈಕಾರಿಕವಲ್ಲ. ತನ್ನ ನೆಲೆಯಲ್ಲಿರುವಾಗ ('ಸ್ವೇ ಮಹಿಮ್ನಿ ಪ್ರತಿಷ್ಠಿತಃ') ಅವನು ನಿರಾಕಾರ, ನಿರ್ಗುಣ ಬಿಂಬರೂಪಿಯೂ ನಿರ್ಗುಣನೇ. ಜೀವರ ಪ್ರೇರಕನಾಗಿ ಪ್ರತಿಬಿಂಬಾಂಶವೆಂಬಾಗ ಸಗುಣ, ಸಾಕಾರ ; ಸ್ವರೂಪಾಂಶದಲ್ಲಿ ನಿರ್ಗುಣ, ನಿರಾಕಾರ.

ಸಾಕಲ್ಯದೃಷ್ಟಿಗೆ ಸಿಲುಕಿದ—ಅಂಶನಾದ ಜೀವ ಅಂಶಿಯಾದ ಪರಮಾತ್ಮನನ್ನು ಅಶೇಷವಾಗಿ ತಿಳಿಯುವುದು ಸಾಧ್ಯವಿಲ್ಲ.

ತನು ಮನ ಧನದಲಿ—ದೇಹದಲ್ಲಿ, ಮನಸ್ಸಿನಲ್ಲಿ, ವಿಷಯಗಳಲ್ಲಿ ವ್ಯಾಪ್ತನಾಗಿರುವ : ಸಾಧಕಪ್ರಯೋಜಕವಾದ ದೇಹವನ್ನೂ ಮನಸ್ಸನ್ನೂ ವಿಷಯಭೋಗವನ್ನೂ ಜೀವರಿಗೆ ತನ್ನ ಸಂಕಲ್ಪದಿಂದಲೇ ಒದಗಿಸುವನು.

ಬಿಸುಗುಬುದ್ಧಿಗೆ—ನೀಚಬುದ್ಧಿಗೆ.



ಕಮಾಚು ಆದಿ

ಮೂರುತಿಯನು ನಿಲ್ಲಿಸೊ, ಮಾಧವ ನಿನ್ನ ಪ

ಎಳೆ ತುಳಸಿಯ ವನಮಾಲೆಯು ಕೊರಳೊಳು
ಪೊಳೆವ ಪೀತಾಂಬರದಿಂದಲೊಪ್ಪುವ ನಿನ್ನ ೧

ಮುತ್ತಿನ ಸರ ನವರತ್ನದುಂಗುರವಿಟ್ಟು
ಮತ್ತೆ ಶ್ರೀ ಲಕ್ಷ್ಮಿಯು ಉರದೊಳೊಪ್ಪುವ ನಿನ್ನ ೨

ಭಕ್ತ ಕಲ್ಪತರು ಭಾಗ್ಯದ ಸುರಧೇನು
ಮುಕ್ತಿದಾಯಕ ಪುರಂದರವಿಠಲ ನಿನ್ನ ೩

ಮೂರುತಿಯನು—ಬಿಂಬರೂಪವನ್ನು, ನನ್ನ ಮನಸ್ಸಿನಲ್ಲಿ. ಪ್ರತಿಮಾದಿಗಳಲ್ಲಿ ಕಾಣುವ ಆಕಾರವನ್ನೇ ಇಲ್ಲಿ ವರ್ಣಿಸಿದ್ದಾರೆ.

ಭಕ್ತ ಕಲ್ಪತರು—ಭಕ್ತರ ಬಯಕೆಯನ್ನು (ಮುಕ್ತಿಯನ್ನು) ಒಡನೆ ಸಲ್ಲಿಸುವ ಕಲ್ಪ ವೃಕ್ಷ.

ಭಾಗ್ಯದ ಸುರಧೇನು—ಬಿಂಬಾಪರೋಕ್ಷವೆಂಬ ಭಾಗ್ಯವನ್ನು ನೀಡುವ ಕಾಮಧೇನು.

ಶಂಕರಾಭರಣ ಅಟ್ಟ

ಕಂಡೆ ನಾ ಕನಸಿನಲಿ ಗೋವಿಂದನ ಪ

ಕಂಡೆ ನಾ ಕನಸಿನಲಿ ಕನಕರತ್ನದ ಖಣಿಯು
ನಂದನ ಕಂದ ಮುಕುಂದನ ಚರಣವ ಅ

ಅಂದಿಗೆ ಕಿರುಗೆಜ್ಜೆ ಘಲಿರೆಂಬ ವಾದ್ಯದಿ
ಬಂದು ಕಾಳಿಂಗನ ಹೆಡೆಯನೇರಿ
ಧಿಂಧಿಮಿ ಧಿಮಿಕೆಂದು ತಾಳಗತಿಗಳಿಂದಾ
ನಂದದಿ ಕುಣಿವ ಮುಕುಂದನ ಚರಣವ ೧

ಉಟ್ಟ ಪೀತಾಂಬರ ಉಡಿಯು ಕಾಂಚನಧಾಮ
ತೊಟ್ಟ ಮುತ್ತಿನ ಹಾರ ಕೌಸ್ತುಭವು
ಕಟ್ಟಿದ ವೈಜಯಂತಿ ತುಳಸಿ ವನಮಾಲೆ
ಇಟ್ಟ ದ್ವಾದಶನಾಮ ನಿಗಮ ಗೋಚರನ ೨

ಕಿರುಬೆರಳಿನ ಮುದ್ರೆಯುಂಗುರ ಮುಂಗೈಯು
ಕರದಲ್ಲಿ ಕಂಕಣ ನಳಿತೋಳುಗಳ
ವರ ಚತುರ್ಭುಜ ಶಂಖ ಚಕ್ರದಿ ಮೆರೆವನ
ನಿರುತದಿ ಒಪ್ಪುವ ಕರುಣಾಮೂರುತಿಯು ೩

ಬಣ್ಣದ ತುಟಿ ಭಾವರಚನೆಯ ಸುಲಿಪಲ್ಲು
ಸಣ್ಣ ನಗೆಯು ನುಡಿ ಸವಿಮಾತಿನ
ಪುಣ್ಯಚರಿತ್ರನ ಪೊಳವ ಕಿರೀಟನ
ಕಣ್ಣುಮನ ದಣಿಯದು ಕಂಸಾರಿ ಕೃಷ್ಣನ ೪

ಮಂಗಳವರ ತುಂಗಭದ್ರದಿ ಮೆರೆವನ
ಅಂಗಜಪಿತ ಶ್ರೀ ಲಕ್ಷ್ಮೀಪತಿಯು
ಶೃಂಗಾರ ಮೂರುತಿ ಪುರಂದರವಿಠಲನ
ಕಂಗಳಿಂದಲಿ ಕಂಡೆ ಹಿಂಗಿತು ಭವಭಯ ೫

['ಕನಸು ಮನಸಿನೊಳೆಲ್ಲ ಕನವರಿಸಿ ವಿಷಯಗಳ' ಎಂಬುದು ಸಾಮಾನ್ಯಜನರ ವರ್ಣನೆ ; ಸಾಧಕರಿಗೆ 'ಕನಸು ಮನಸಿನೊಳೆಲ್ಲ ಹರಿಯ ಸ್ಮರಣೆ'. ಇಂದ್ರಿಯಾದಿ ವ್ಯಾಪಾರವಿಲ್ಲದೆ ಮನಸ್ಸೊಂದೇ ಕೆಲಸಮಾಡುವ ಸ್ವಪ್ನಾವಸ್ಥೆಯಲ್ಲಿಯೂ ಜಾಗತ್ತ್ವ ಚೋದಕನಾದ ವಿಶ್ವನಾಮಕ ಪರಮಾತ್ಮನೇ ತೈಜಸರೂಪದಿಂದ ಇರುತ್ತಾನೆ , ಕನಸಿನ ದ್ರವ್ಯವೂ ಅವನೇ, ಕ್ರಿಯೆಯೂ ಅವನೇ, ಗುಣವೂ ಅವನೇ ಬಿಂಬೋಪಾಸಕರ ಧ್ಯಾನ ನಿದ್ರೆಯಲ್ಲೂ ಸಾಗುವುದು. ಜೀವರಿಗೆ ತಂತಮ್ಮ ಸಾಧನೆಯ ಹಂತದಂತೆ ಬಿಂಬ ರೂಪಿ ಪರಮಾತ್ಮನು ತೋರಿಕೊಳ್ಳುತ್ತಾನೆ. ಜಿಜ್ಞಾಸು ಸಾಧಕರಿಗೆ ಶರೀರೇಂದ್ರಿಯ ದೇವತಾದಿ ಭಾವರೂಪಾತ್ಮಕನಾಗಿಯೂ, ಜ್ಞಾನಿಸಾಧಕರಿಗೆ ರಾಮ, ಕೃಷ್ಣ ಮೊದಲಾದ ಅವತಾರ ರೂಪಾತ್ಮಕನಾಗಿಯೂ, ಅಧ್ಯಾತ್ಮ ನಿಷ್ಠರಿಗೆ ಪಂಚವ್ಯೂಹ ಮೂರ್ತಿಗಳ ರೂಪದಲ್ಲಿಯೂ ಅವರವರ ಅಂತರಂಗದಲ್ಲಿಯೇ ಕಾಣಿಸಿಕೊಳ್ಳುತ್ತಾನೆ.]



ಕಾನಡ ಆದಿ

ಶ್ರೀಕಾಂತ ಎನಗಿಷ್ಟು ದಯಮಾಡೊ ತಂದೆ
ಏಕಾಂತದಲಿ ನಿನ್ನ ಭಜಿಸುವ ಭಾಗ್ಯ ಪ

ಧನದಾಸೆಗಾಗಿ ನಾ ಧನಿಕರ ಮನೆಗಳ
ಕೊನೆಬಾಗಿಲಲಿ ನಿಂದು ತೊಳಲಿ ಬಳಲಿದೆನೊ ೧

ದೇಹಾಭಿಮಾನದಿಂದ ವಿಹಿತ ಧರ್ಮವ ತೊರೆದು
ಸ್ನೇಹಾನುಬದ್ಧನಾಗಿ ಸತಿಸುತರ ಪೊರೆದೆನೊ ೨

ಏನಾದರೇನೆನ್ನ ಹೀನ ಗುಣಗಳೆಲ್ಲ
ಮನ್ನಿಸಿ ಸಲಹೊ ಶ್ರೀ ಪುರಂದರವಿಠಲ ೩

[ಇದರಲ್ಲಿ ದಾಸರು ಬಿಂಬೋಪಾಸನೆಗೆ ಅಗತ್ಯವಾದ ಮನಃಪ್ರಾವಣ್ಯವನ್ನು ಬೇಡಿಕೊಂಡಿದ್ದಾರೆ ಬಹಿರ್ಮುಖಪ್ರವೃತ್ತಿಗಳಿಂದ ಕ್ರಮವಾಗಿ ಮಿಥ್ಯಾಜ್ಞಾನ, ಹರಿಯ ವಿಸ್ಮರಣೆ, ವಿಷಯೋಪಭೋಗ, ಸುಖದುಃಖಾನುಭವ. ಇದನ್ನು ಲೋಕೈಷಣ ಎಂದು ಕರೆಯುತ್ತಾರೆ. ಇದರಲ್ಲಿ ವಿತ್ತೈಷಣ (ಮೊದಲ ನುಡಿ), ದಾರೈಷಣ, ಪುತ್ರೈಷಣ (ಎರಡನೆಯ ನುಡಿ) ಗಳೆಂಬ ಮೂರು ಪ್ರಕಾರಗಳು. ಅಂತರ್ಮುಖ ಪ್ರವೃತ್ತಿಯೇ ಸಾಧನೆಗೆ ಅನುಕೂಲದಾದುದು ಬಿಂಬಾಪರೋಕ್ಷ ಜೀವನಿಗೆ ಮುಕ್ತಿ ಕಾರಣವಾದುದರಿಂದ, ಬಿಂಬವನ್ನು ತನ್ನ ಹೃದಯದಲ್ಲೇ ಸಾಕ್ಷಾತ್ಕರಿಸಿಕೊಳ್ಳಬೇಕು. ಇದಕ್ಕಾಗಿಯೇ ದಾಸರು 'ಏಕಾಂತದಲಿ ಭಜಿಸುವ ಭಾಗ್ಯ'ವನ್ನು ಬೇಡಿದ್ದಾರೆ.]

ಮೋಹನ ಅಟ್ಟ

ಜ್ಞಾನವೊಂದೇ ಸಾಕು ಮುಕ್ತಿಗೆ
ಇನ್ನೇನು ಬೇಕು ಹುಚ್ಚು ಮರುಳೆ ಪ

ಪಿತ ಮಾತೆ ಸತಿ ಸುತರ ಅಗಲಿರಬೇಡ
ಯತಿಯಾಗಿ ಅರಣ್ಯ ಚರಿಸಲುಬೇಡ
ವ್ರತ ನೇಮವ ಮಾಡಿ ದಣಿಯಲುಬೇಡ
ಸತಿಯಿಲ್ಲದವರಿಗೆ ಸದ್ಗತಿಯಿಲ್ಲೋ ಮೂಢ ೧

ಜಪತಪವನೆ ಮಾಡಿ ದಣಿಯಲುಬೇಡ
ಕಪಿಯಂತೆ ಅಡಿಗಡಿಗೆ ಹಾರಲುಬೇಡ
ಉಪವಾಸದಲಿ ಕಾಲ ಕಳೆಯಲುಬೇಡ
ಚಪಲತನದಲ್ಲಿ ಫಲವಿಲ್ಲೊ ಮೂಢ ೨

ಜಾಗರದಲಿ ನಿದ್ರೆ ಕೆಡಿಸಲುಬೇಡ
ಓಗರವನು ಬಿಟ್ಟು ಒಣಗಲುಬೇಡ
ಸೋಗು ಮಾಡಿ ಹೊತ್ತು ಕಳೆಯಲುಬೇಡ
ಗೂಗೆ ಹಾಗೆ ಕಣ್ಣು ಮುಚ್ಚಲುಬೇಡ ೩

ಹೊನ್ನು ಹೆಣ್ಣು ಮಣ್ಣು ಜರೆದಿರಬೇಡ
ಅನ್ನ ವಸ್ತ್ರ ನೀನು ತೊರೆದಿರಬೇಡ
ಬಣ್ಣದ ದೇಹವ ನಂಬಲುಬೇಡ
ತಣ್ಣೀರಲಿ ಮುಣುಗಿ ನಡುಗಲುಬೇಡ ೪

ಮಹಾ ವಿಷ್ಣುಮೂರ್ತಿಯ ಮರೆದಿರಬೇಡ
ಸಾಹಸದಿಂದಲಿ ಶ್ರಮ ಪಡಬೇಡ
ಕುಹಕಬುದ್ಧಿಯಲಿ ಕುಣಿದಾಡಬೇಡ
ಪುರಂದರವಿಠಲನ್ನ ಮರೆದಿರಬೇಡ ೫

[ಇಲ್ಲಿ ಜ್ಞಾನಮಾರ್ಗದ ಪ್ರಶಂಸೆಯಿದೆ. ಸಂಸಾರದಲ್ಲಿ ಹೇಯಬುದ್ಧಿ, ಸಂನ್ಯಾಸ, ದೇಹದಂಡನೆ, ವ್ರತ, ನೇಮ, ಕರ್ಮ, ಮಡಿ, ಜಪ, ತಪಗಳು ಭಗವತ್ ಸಾಕ್ಷಾತ್ಕಾರಕ್ಕೆ ಪ್ರಧಾನಸಾಧನಗಳಲ್ಲ. ಸಂಸಾರದಲ್ಲಿದ್ದುಕೊಂಡೇ, ಸಾಮಾನ್ಯಜೀವನ ನಡೆಸುತ್ತಲೇ, ಮಾಹಾತ್ಮ್ಯ ಜ್ಞಾನವನ್ನು ಪಡೆದುಕೊಂಡು ಬಿಂಬಾಪರೋಕ್ಷ ಮಾಡಿಕೊಳ್ಳಬಹುದು.]

ಕಾಂಬೋದಿ ಝಂಪೆ

ಸುಲಭ ಪೂಜೆಯ ಮಾಡಿ ಬಲವಿಲ್ಲದವರು ಪ

ನಳಿನನಾಭನ ಪಾದ ನಳಿನ ಸೇವಕರು ಅ

ಇರುಳು ಹಚ್ಚುವ ದೀಪ ಹರಿಗೆ ನೀರಾಜನವು
ಮರೆಮಾಡುವ ವಸ್ತ್ರ ಪರಮ ಮಡಿಯು
ತಿರುಗಾಡಿ ದಣಿಯುವುದೆ ಹರಿಗೆ ಪ್ರದಕ್ಷಿಣೆಯು
ಹೊರಳಿ ಮಲಗುವುದೆಲ್ಲ ಹರಿಗೆ ವಂದನೆಯು ೧

ನುಡಿವ ಮಾತುಗಳೆಲ್ಲ ಕಡಲಶಯನನ ಜಪವು
ಮಡದಿ ಮಕ್ಕಳು ಮತ್ತೆ ಒಡನೆ ಪರಿವಾರ
ನಡುಮನೆಯು ಅಂಗಳವು ಉಡುಪಿ ವೈಕುಂಠಗಳು
ಎಡಬಲದ ಮನೆಯವರು ಕಡುಭಾಗವತರು ೨

ಹೀಗೆ ಅನುದಿನ ತಿಳಿದು ಹಿಗ್ಗುವ ಜನರ ಭವ
ರೋಗ ಪರಿಹರವು ಮೂಜಗದಿ ಸುಖವು
ಹೋಗುತಿದೆ ಈ ಆಯು ಬೇಗದಿಂದಲಿ ನಮ್ಮ
ಯೋಗೇಶ ಪುರಂದರವಿಠಲನ ನೆನೆನೆನೆದು ೩

[ಸುಲಭ ಪೂಜೆಯೆಂದರೆ ಮಾನಸಪೂಜೆ. ಹೊರಗಣ ಯಾವ ಪರಿಕರದ, ದೇಹ ಶ್ರಮದ, ಧನವ್ಯಯದ, ವಿಧಿನಿಯಮಗಳ ಆಗತ್ಯವಿರದೆ, ಅಂತರಂಗದಲ್ಲೇ ನಡೆಸುವ ಪೂಜೆ. ಬಲವಿಲ್ಲದವರು, ಎಂದರೆ ವಿದ್ಯಾಬಲ, ಜ್ಞಾನಬಲ, ಸಂಸ್ಕಾರಬಲ, ಧನಬಲ, ದೇಹಬಲ ಎಂಬ ಬಲಪಂಚಕವಿಲ್ಲದವರು ಕೂಡ ಇದನ್ನು ಮಾಡಬಹುದು. ಆದರೆ ಭಕ್ತಿಯೊಂದು ಅನಿವಾರ್ಯವಾಗಿ ಇದ್ದೇ ಇರಬೇಕು.

ಬಿಂಬೋಪಾಸನೆಯಲ್ಲಿ ಸರ್ವಸಮರ್ಪಣಭಾವ ಮುಖ್ಯವಾದುದು. ಜೀವರಿಗೆ ಬಿಂಬರೂಪೀ ಪರಮಾತ್ಮನೇ ಪ್ರೇರಕನೆಂದೂ ನಿಯಾಮಕನೆಂದೂ ಮನದಟ್ಟುಮಾಡಿಕೊಂಡು, ದೇಹೇಂದ್ರಿಯ ಮನಸ್ಸುಗಳಿಂದ ಮಾಡುವ ಎಲ್ಲ ಕೆಲಸಕ್ಕೂ ಅವನೇ ಮುಖ್ಯಕರ್ತೃ, ಮುಖ್ಯಭೋಕ್ತೃ ಎಂದು ಭಾವಿಸಿ, ಮಾಡುವುದೆಲ್ಲ ಅವನ ಪೂಜೆಯೇ ಎಂದು ತನ್ನ ಕರ್ತೃತ್ವವನ್ನೂ ಭೋಕ್ತೃತ್ವವನ್ನೂ ಅವನಿಗೇ ಸಮರ್ಪಿಸುವುದು ಈ ವಿವರದ ಸ್ವಾರಸ್ಯ. 'ನಾಹಂ ಕರ್ತಾ, ಹರಿಃ ಕರ್ತಾ, ತತ್ಪೂಜಾ ಕರ್ಮ ಚಾಖಿಲಂ' ಎನ್ನುವ ಆಚಾರ್ಯೋಕ್ತಿಯ ಛಾಯೆ.]

ನೀರಾಜನ—ನೀಲಾಂಜನ, ದೀಪ.

[ಮುಂದಿನ ಕೃತಿ 'ಹೃದಯಕಮಲಮಾನಸಪೂಜೆ' ಯೆಂದು ಹೆಸರಾಗಿದೆ. ಇದನ್ನು 'ಭಗವದ್ಗೀತಾಸಾರ'ವೆಂದೂ ಕರೆಯುವುದಿದೆ. ಆದರೆ ಭಗವದ್ಗೀತೆಗೊ ಇದಕ್ಕೂ ಅಷ್ಟು ಸಂಬಂಧವಿರದು. ಮೊದಲಲ್ಲಿ ಸಂಸ್ಕೃತ ಶ್ಲೋಕ, ಅನಂತರ ಕನ್ನಡದಲ್ಲಿ ಪದ. ಬಹುಮಟ್ಟಿಗೆ ಕನ್ನಡದ ಪದ ಸಂಸ್ಕೃತ ಶ್ಲೋಕದ ಭಾವವನ್ನು ಹೇಳುತ್ತದೆ ]

ಶ್ಲೋಕ

ನಾಭಿಮೂಲೇ ಸ್ಥಿತಂ ಪದ್ಮಂ ನಾಭ್ಯಾಂತರದಶಾಂಗುಲಂ
ಕೋಮಲಂ ತಸ್ಯ ತಂ ನಾಲಂ ನಿಮ್ನ ಪದ್ಮಮಧೋಮುಖಂ (೧)

ಕದಲೀಪುಷ್ಪಸಂಕಾಶಂ ಚಂದ್ರಕಾಂತಿ ಸಮಪ್ರಭಂ
ವಿಶಾಲದಲಸಂಪೂರ್ಣಂ ಚಾರುಹಾಸ ಸುನಿರ್ಮಲಂ
ಪದ್ಮಕಿಂಜಲ್ಕಸದೃಶಂ ತಪ್ತಕಾಂಚನ ಸನ್ನಿಭಂ (೨)

ಸಾವೇರಿ — ಝಂಪೆ

ಹೃದಯಕಮಲದಷ್ಟದಳ ಹೃಷೀಕೇಶ ನಾರಾಯಣ ಹಂಸಗಮನ
ತುದಿತುದಿಲು ಕೇಸರದಿ ಥುಮುಕಿ ನಾಳಕರ್ಣಿಕೆಯಲ್ಲು ಪ

ಕಮಲಮೂಲನಾಭಿಗೆ ಹೃತ್ಕಮಲಕೆ ಹತ್ತಂಗುಲ ಕಮಲ ಕೋಮಲನಾಳ
ಕಮಲ ಅಧೋಮುಖ
ಕಮಲಕದಳೀಪುಷ್ಪದಂತೆ ಕಮಲಚಂದ್ರಕಾಂತಿಯಂತೆ
ಕಮಲ ವಿಶಾಲಪೂರ್ಣ ದಶದಿಕ್ಕು ಕಮಲ ಸ್ವರ್ಣದಂತಿಹುದು ೧

ಶ್ಲೋಕ

ಹೃದಿ ಸ್ಥಿತಂ ಪಂಕಜಮಷ್ಟಪತ್ರಂ ಸಕೇಸರಂ ಕರ್ಣಿಕ ಪತ್ರನಾಲಮ್
ಅಂಗುಷ್ಠಮಾತ್ರಂ ಮುನಯೋ ವದಂತಿ ಧ್ಯಾಯೇಚ್ಚ ವಿಷ್ಣುಂ
ಪುರುಷಂ ಪುರಾಣಂ (೩)

ಅಷ್ಟಪತ್ರಂ ತು ಹೃತ್ಪದ್ಮಂ ದ್ವಾತ್ರಿಂಶತ್ಕೇಸರಾನ್ವಿತಮ್
ತಸ್ಯ ಮಧ್ಯೇ ಸ್ಥಿತಂ ದೇವಂ ಇಂದ್ರಾದ್ಯೈಶ್ಚ ಸುಸೇವಿತಮ್ (೪)

ಸಾವೇರಿ ಝಂಪೆ

ಅಷ್ಟದಳ ಹೃತ್ಕಮಲ ಅದಕೆ ಮೂವತ್ತೆರಡು ಕೇಸರ
ಅಷ್ಟರಲ್ಲಿ ಕರ್ಣಿಕೆನಾಳ ಅರಸಿ ಶ್ರೀಭೂದೇವಿಯು
ಅಷ್ಟಬಾಹು ಅಷ್ಟಾಯುಧ ಅಂಗುಷ್ಠ ಮಾತ್ರ ವಿಷ್ಣು
ಅಷ್ಟದಿಕ್ಪಾಲಕರಿರಲು ಅಲ್ಲಿ ಬ್ರಹ್ಮಾದಿಗಳಿಂದ ೨

ಶ್ಲೋಕ

ಕೃತೇ ಶ್ವೇತಂ ಹರಿಂ ವಿದ್ಯಾತ್ ತ್ರೇತಾಯಾಂ ರಕ್ತವರ್ಣಕಮ್
ದ್ವಾಪರೇ ಪೀತವರ್ಣಂ ತು ಕೃಷ್ಣವರ್ಣಂ ಕಲೌ ಯುಗೇ (೫)

ಶಂಖಚಕ್ರಗದಾಪದ್ಮಂ ಮುಸಲಂ ಖಡ್ಗಮೇವ ಚ
ಧನುಸ್ಸಹಿತಬಾಣಂ ಚ ಅಷ್ಟಬಾಹುಧರಂ ಹರಿಮ್ (೬)

ಸಾವೇರಿ ಝಂಪೆ

ಶ್ವೇತವರ್ಣ ಕೃತಯುಗದಿ ತ್ರೇತಾಯುಗದಿ ರಕ್ತವರ್ಣ
ಪೀತವರ್ಣ ದ್ವಾಪರದಿ ಪ್ರತಿ ಕೃಷ್ಣವರ್ಣ ಕಲಿಯುಗದಿ
ಧಾತ ಧನು ನೇಣು ಬಾಣ ಶಂಖ ಚಕ್ರ ಗದೆ ಪದ್ಮ
ಆತುರ್ಯ ಖಡ್ಗ ಮುಸಲಾದಿಗಳ ಅಷ್ಟಬಾಹುಗಳಿಂದ ಧರಿಸಿ ೩

ಶ್ಲೋಕ

ಪೂರ್ವೇ ದಲೇ ಪುಣ್ಯಬುದ್ಧಿರಾಗ್ನೇಯೇ ನಿದ್ರಾಲಸಾಧಿಕಮ್
ಯಾಮ್ಯೇ ದಲೇ ಕ್ರೂರಬುದ್ಧಿರ್ನೈರ್ಋತ್ಯಾಂ ಪಾಪಬುದ್ಧಿಕೃತ್ (೭)

ವಾರುಣೇ ಚ ಪರಿಕ್ರೀಡಾ ವಾಯವ್ಯಾಂ ಗಮನಾಗಮಮ್
ಕೌಬೇರ್ಯಾಂ ರತಿಬುದ್ಧಿಃ ಸ್ಯಾತ್ ಈಶಾನ್ಯೇ ದ್ರವ್ಯದಾನಕೃತ್ (೮)

ಕಲ್ಯಾಣಿ ಚಾಪು

ಪೂರ್ವದಳದಿ ಪುಣ್ಯಮಯದಿ ಜೀವನಿರುವ
ಆರೂಢ ಆಗ್ನೇಯದಳದಿ ಆಲಸ್ಯ ಆಕಳಿಕೆ ನಿದ್ರೆ
ತೋರುತಿಹ ಯಮದಿಕ್ಕಿಲಿ ತುಂಬಿದ ಕ್ರೋಧವು ಬಿಗಿಯೆ
ಹರಿದಡೆ ನೈಋತ್ಯದಿ ಪಾಪಕೃತ್ಯ

ವರುಣ ದಿಕ್ಕಿಲಿ ವಿನೋದ ವಾಯುವ್ಯದಿ ಗಮನಾಗಮ
ಕುರುಹು ಕುಬೇರ ದಿಕ್ಕಿಲಿ ಕೊಡುವ ರತಿಬುದ್ಧಿಯು
ತೆರಳಿ ಬಂದು ಈಶಾನ್ಯದಿ ದ್ರವ್ಯದಾನ ಮಾಡಿಸುವ
ನೆರೆದು ದಿಕ್ಪಾಲಕರ ಕೂಡಿ ನಿಂತು ನಿಂತು ಬರುವ ೪

ಶ್ಲೋಕ

ಮಧ್ಯೇ ವೈರಾಗ್ಯಬುದ್ಧಿಃ ಸ್ಯಾತ್ ಜಾಗ್ರದ್ಬುದ್ಧಿಸ್ತು ಕೇಸರೇ
ಸ್ವಪ್ನಾವಸ್ಥಾ ಕರ್ಣಿಕಾಯಾಂ ಅಂಗೈಶ್ಚೈವ ಸುಷುಪ್ತಿಕೃತ್ (೯)

ಕಲ್ಯಾಣಿ ಅಟ್ಟ

ಜೀವಕೀವ ವೈರಾಗ್ಯ ಜಗದೀಶ ಮಧ್ಯವಿದ್ದು
ಮೂವತ್ತೆರಡು ಕೇಸರದಿ ಮುಕುಂದ ಬರಲು ಜಾಗ್ರತು
ಭಾವವಿತ್ತು ಕರ್ಣಿಕೆಯಲಿ ಬಂದು ಸ್ವಪ್ನಂಗಳು ತೋರಿ
ಹೂವು ಕರ್ಣಿಕೆ ಬಿಟ್ಟು ಮಣಿಗಳ ಹೊಂದಿ ಸುಷುಪ್ತಿಯೀವ ೫

ಶ್ಲೋಕ

ತಸ್ಯ ಮಧ್ಯೇ ಗತೋ ಭಾನುಃ ಭಾನುಮಧ್ಯೇ ಗತಃ ಶಶೀ
ಶಶಿಮಧ್ಯೇ ಗತೋ ವಹ್ನಿಃ ವಹ್ನಿಮಧ್ಯೇ ಗತಾ ಪ್ರಭಾ (೧೦)

ಪ್ರಭಾಮಧ್ಯೇ ಗತಂ ಪೀಠಂ ನಾನಾರತ್ನೋಪಶೋಭಿತಮ್
ಅನೇಕರತ್ನ ಸಂಕೀರ್ಣಂ ಜ್ವಲನಾರ್ಕಸಮಪ್ರಭಮ್
ಸಹಸ್ರಫಣಸಂಯುಕ್ತಂ ಮಧ್ಯೇ ದೇವಃ ಸ್ಥಿತೋ ಭವೇತ್ (೧೧)

ಭೈರವಿ ಚಾಪು

ಮಧ್ಯಕಮಲದಿ ಸೂರ್ಯ ಮಧ್ಯಸೂರ್ಯನಲಿ ಚಂದ್ರ
ಮಧ್ಯಚಂದ್ರನಲಿ ಅಗ್ನಿ ಮಧ್ಯನೆಲೆ ತೇರು ಶೃಂಗಾರ
ಮಧ್ಯ ಜಗಲಿ ಕಲ್ಪವೃಕ್ಷ ಮಧ್ಯ ಮಂಟಪ ಸ್ವರ್ಣಪೀಠ
ಮಧ್ಯಪೀಠ ಸಹಸ್ರ ಫಣಿ ಮಧ್ಯ ಶ್ರೀಭೂನಾರಾಯಣ ೬

ಶ್ಲೋಕ

ಗುಹ್ಯಾದ್ಗುಹ್ಯತಮಂ ಪುಣ್ಯಂ ಸಪ್ರಕಾಶಂ ಕಥಂಚನ
ಹೃದಯೇಽಷ್ಟದಲಂ ಪದ್ಮಂ ಕರ್ಣಿಕಾಮಧ್ಯಶೋಭಿತಮ್ (೧೨)

ಓಂಕಾರನಾದವಿಲಸದ್ವೇದಗ್ರಂಥಿಸಮಪ್ರಭಮ್
ತನ್ಮಧ್ಯೇ ನವರತ್ನಾಢ್ಯಂ ತಪ್ತಹಾಟಕ ಸನ್ನಿಭಮ್ (೧೩)

ವಿದ್ರುಮಸ್ಫಟಿಕಾಕಾರಂ ಶತಸ್ತಂಭಸಮನ್ವಿತಮ್
ಕೋಟಿಸೂರ್ಯಪ್ರತೀಕಾಶಂ ವಿಮಾನೇನ ವಿರಾಜಿತಮ್
ಮುಕ್ತಾದಾಮ ವಿತಾನಾಢ್ಯಂ ಛತ್ರಧ್ವಜಪತಾಕಿನಮ್ (೧೪)

[ಈ ಮೂರು ಶ್ಲೋಕಗಳು ಆಗ್ನೇಯ ಪುರಾಣದಲ್ಲಿವೆಯೆಂದು ಸೂಚನೆಯಿದೆ.]

ಭೈರವಿ ಚಾಪು

ಹವಳದ ಸ್ಫಟಿಕಕಂಬ ನೂರು ಹಾಟಕ ನವರತ್ನ ತೇರು
ಹವಣಿ ನಾಲ್ಕು ಮೂಲ ಜಗಲಿ ಹೊಳೆವ ರತ್ನದಲ್ಲಿಹುದು
ವಿವಿಧ ಮುತ್ತಿನ ಗೊಂಚಲುಗಳು ಛತ್ರ ಧ್ವಜ ಪತಾಕೆಗಳು
ರವಿಕೋಟಿ ಕಾಂತಿಯಿಂದ ರಥವು ಹೊಳೆವುತಿರಲು ೭

ಶ್ಲೋಕ

ಮಲ್ಲಿಕಾ ಕುಂದಮಂದಾರೈಃ ಕೇತಕೈಶ್ಚಂಪಕಾದಿಭಿಃ
ಅನ್ಯೈಶ್ಚಗಂಧವತ್ಪುಷ್ಪೈಃ ಸಮಂತಾದಿವ ಕರ್ಣಿಕಮ್ (೧೫)

ಮಹಾಶ್ಲಾಘ್ಯತಮಂ ಪುಣ್ಯಂ ಕಲ್ಪವೃಕ್ಷಾಂತರೇ ಸ್ಥಿತಮ್
ಏತನ್ಮಂಟಪಮಧ್ಯಸ್ಥಂ ಸ್ವರ್ಣಪೀಠೋಪರಿ ಸ್ಥಿತಮ್
ಸಿಂಹಾಸನಸಮಾಸೀನಂ ಕೋಟಿಸೂರ್ಯಸಮಪ್ರಭಮ್
ವಿಷ್ಣುಂ ಚತುರ್ಭುಜಂ ಲಕ್ಷ್ಮೀಭೂಮಿಭ್ಯಾಂ ಪಾರ್ಶ್ವಶೋಭಿತಮ್ (೧೬)

ಭೈರವಿ ಚಾಪು

ಮಲ್ಲಿಗೆ ಕುಂದಮಂದಾರ ಮರುಗ ಕೇದಿಗೆ ಸಂಪಿಗೆ
ಅಲ್ಲಿ ಮಂಟಪ ಶೃಂಗಾರ ಅನೇಕ ಹೂವಿಲಿ ಮಂದಿರ
ಸಲ್ಲುವ ಕಲ್ಪವೃಕ್ಷದ ಕೆಳಗೆ ಸ್ವರ್ಣಪೀಠ ಸಿಂಹಾಸನ
ಅಲ್ಲಿ ಕೋಟಿಸೂರ್ಯಪ್ರಕಾಶದಿಂದಿರುವ ವಿಷ್ಣು ಚತುರ್ಭುಜದಿ ೮

ಶ್ಲೋಕ

ಕೋಟಿಸೂರ್ಯಪ್ರಕಾಶಂ ಚ ಮುಕುಟಾಟೋಪಮಸ್ತಕಮ್
ಕಟಿಸೂತ್ರಬ್ರಹ್ಮಸೂತ್ರ ನೂಪುರೇಣ ವಿರಾಜಿತಮ್ (೧೭)

ಶ್ರೀವತ್ಸವನಮಾಲಾಢ್ಯಂ ತುಲಸೀದಾಮಭೂಷಿತಮ್
ವರದಾಭಯಹಸ್ತಾಭ್ಯಾಂ ಶಂಖಚಕ್ರಪುರಸ್ಸರಮ್ (೧೮)

ಪೀತಾಂಬರಧರಂ ದೇವಂ ಪ್ರಸನ್ನವದನಂ ಶುಭಮ್
ಮನೋಹರಂ ದಯಾಮೂರ್ತಿಂ ಮಂದಹಾಸಮುಖಾಂಬುಜಮ್ (೧೯)

ಸಾವೇರಿ ಏಕ

ಕೋಟಿಸೂರ್ಯಪ್ರಕಾಶ ಅಲ್ಲಿ ಮುಕುಟಾಟೋಪ ಮಸ್ತಕ
ವನಜಾಕ್ಷ ಅಚ್ಯುತಗೆ ಶ್ರೀವತ್ಸ ಕೌಸ್ತುಭ ಕೇಯೂರ
ಕನಕಾಂಬರ ಹಾರ ಕುಂಡಲ ಕಟಿಸೂತ್ರ ಯಜ್ಞೋಪವೀತ
ವನಜ ಗಂಧ ಪುಷ್ಪ ತುಲಸಿ ವೈಜಯಂತಿ ವನಮಾಲೆ ಧರಿಸಿ ೯

ಶ್ಲೋಕ

ಅನೇಕದಿವ್ಯಾಭರಣೈಃ ಕರಕಂಕಣಶೋಭಿತಮ್
ದಿವ್ಯಶ್ರೀವರಯುಗ್ಮಾಭ್ಯಾಂ ಚಾಮರಾಭ್ಯಾಂ ಸುಸೇವಿತಮ್ (೨೦)

ಮಾಧವಂ ಪರಮಾತ್ಮಾನಂ ಭಕ್ತವತ್ಸಲಮೀಶ್ವರಮ್
ಧ್ಯಾತ್ವೈವ ಹೃದಿ ವಾ ಸೂರ್ಯಮಂಡಲಾಂತರ್ಗತಂ ಜಪೇತ್ (೨೧)

ಸಾವೇರಿ ಏಕ

ಅನೇಕ ದಿವ್ಯಾಭರಣದಿಂದ ಅಂಗನೇರು ತನುಲಂಕೃತಾದಿ
ವನಜನಾಭಗೆ ಕಡಗ ಕಂಕಣ ವರಾಭಯಹಸ್ತದಿ
ಕನಕಾಂಗ ಕಸ್ತೂರಿನಾಮ ಕರುಣಿ ಪ್ರಸನ್ನವದನ ಶುಭ
ಮನೋಹರ ದಯಾಮೂರ್ತಿ ಮಂದಹಾಸಮುಖಾಂಬುಜದಿ ೧೦

ಶ್ಲೋಕ

ಅಣಿಮಾದ್ಯೈರ್ಮೂರ್ತಿಮದ್ಭಿಃ ಅಷ್ಟೈಶ್ವರ್ಯಮುಪಾಸಿತಮ್
ಬದ್ಧಾಂಜಲಿಪುಟೈರ್ಭಕ್ತೈಃ ಬ್ರಹ್ಮರುದ್ರಾದಿಭಿಃ ಸುರೈಃ (೨೨)

ಗಾಯದ್ಭಿರ್ನಾರದಾದ್ಯೈಶ್ಚ ಸನಕಾದ್ಯೈಃ ಸುಸೇವಿತಮ್
ನುತಂ ಪರಮಕಲ್ಯಾಣಂ ಸೂತಮಾಗಧವಂದಿಭಿಃ (೨೩)

ಸಾವೇರಿ ಏಕ

ಅಣಿಮಾದಿ ಅಷ್ಟೈಶ್ವರ್ಯ ಆದಿಮೂರ್ತಿಯನಾರಾಧಿಸಲು
ಅಣಿಯಾಗಿ ಬ್ರಹ್ಮರುದ್ರರು ಅಮರರಂಜಲಿ ಮಾಡಲು
ಕಣಿಯಾಗಿ ನಾರದಾದ್ಯರು ಕೈಮುಗಿದು ಗಾನವನು ಮಾಡಲು
ಕುಣಿಯಲು ಊರ್ವಶಿ ರಂಭೆ ಮೇನಕೆ ಕೋಮಲೆ ತಿಲೋತ್ತಮೆ
ಸನಕಾದಿ ಯೋಗಿಗಳು ಸ್ತೋತ್ರಗಳ ಮಾಡಲು
ಮನಮೆಚ್ಚಿ ವಂದಿ ಸೂತ ಮಾಗಧರು ಪೊಗಳಲು
ಅನೇಕ ದಿವ್ಯಾಭರಣಾದಿ ಕೈಕಂಕಣಾದಿ ಉಭಯ ಪಾರ್ಶ್ವ
ಕನಕ ಕಾಮಿನಿ ಛತ್ರ ಚಾಮರ ಕಾಂತೇರಿಬ್ಬರು ಡಾಳಿಸಲು ಆಗ ೧೧

ಶ್ಲೋಕ

ದುರ್ವಿಜ್ಞೇಯೋ ದುರಾರಾಧ್ಯೋ ದುಷ್ಪ್ರಾಗಮ್ಯೋ ಜನಾರ್ದನಃ
ಅಧೋಮುಖಮಧೋಭೂತ್ವಾ ಹೃದಯಂ ತೇನ ಗಚ್ಛತಿ (೨೪)

ಸಾವೇರಿ ಏಕ

ದುರ್ವಿಜ್ಞೇಯ ದುರಾರಾಧ್ಯ ದುಷ್ಪ್ರಾಗಮ್ಯ ಜನಾರ್ದನ
ನಿರ್ವಿಘ್ನಾದಿ ಅಧೋಮುಖದ ವಿರಜವ ನಿಲಿಸಿ
ಉರ್ವಿಯೊಳು ಮಾನಸಪೂಜೆಗೆ ಉಪಾಸ್ತಿಗರ್ಜುನ ಕೇಳಲು
ಸರ್ವಾಂತರ್ಯಾಮಿ ಕೃಷ್ಣಸ್ವಾಮಿ ಭಾವವ ಪೇಳಿದನು ೧೨

ಶ್ಲೋಕ

ಅಧೋಮುಖಂ ತು ಹೃತ್ಪದ್ಮಕೋಶಂ ವಿಕಸಿತಂ ಸ್ಮೃತಮ್
ಪುನಃ ಪಶ್ಚಾದ್ಭವೇತ್ಪದ್ಮಂ ಸರ್ವಗಾತ್ರಶುಭಾವಹಮ್
ಆವಾಹನಾಸನಂ ಪಾದ್ಯಂ ಅರ್ಘ್ಯಮಾಚಮನೀಯಕಮ್ (೨೫)

ಸಾವೇರಿ ಏಕ

ಭಾರಪ್ರಣವವ್ಯಾಹೃತಿ ವಾಯುಬದ್ಧದಲ್ಲಿ ಹೃತ್ಕಮಲ
ನೋವಿಲ್ಲದೆ ಅಧೋಮುಖವನು ಕೇಸರ ಉನ್ನತದರಳುವುದು
ಆವಾಹನೆ ಆಸನವು ಅಂತರದಿ ಪಾದ್ಯವು
ದೇವರಿಗೆ ಅರ್ಘ್ಯಾಚಮನಾದಿಗಳು ಉಪಚರಿಸು ನೀನು ೧೩

ಶ್ಲೋಕ

ಸ್ನಾನಂ ವಸ್ತ್ರೋಪವೀತಂ ಚಾಚಮನಂ ಚೋತ್ತರೀಯಕಮ್
ಆಚಮ್ಯಂ ಗಂಧಪುಷ್ಪೇ ಚ ಧೂಪದೀಪೌ ಪ್ರಕಲ್ಪಯೇತ್ (೨೬)

ನೈವೇದ್ಯಂ ಪುನರಾಚಮ್ಯ ತಾಂಬೂಲಂ ಚ ನಿವೇದಯೇತ್
ಪ್ರದಕ್ಷಿಣನಮಸ್ಕಾರಾನ್ ಕೃತ್ವಾ ಸ್ಥಿತ್ವಾ ಸಮರ್ಪಯೇತ್ (೨೭)

ಪಂತುವರಾಳಿ ಚಾಪು

ಅಭಿಷೇಕಂಗಳು ವಸ್ತ್ರ ಅರ್ಪಿಸು ಯಜ್ಞೋಪವೀತ
ಉಭಯಾಚಮನೋತ್ತರೀಯ ಒಮ್ಮೆ ಮತ್ತೊಂದಾಚಮನೆ
ವಿಭುವಿಗೆ ಗಂಧ ಪುಷ್ಪವಿಟ್ಟು ಧೂಪ ದೀಪ ನೈವೇದ್ಯ
ಪ್ರಭುವಿಗಾಚಮನ ತಾಂಬೂಲ ಪ್ರದಕ್ಷಿಣೆ ನಮಸ್ಕಾರ ೧೪

ಶ್ಲೋಕ

ತೈಲಾಜ್ಯವರ್ತಿಸಂಯುಕ್ತಂ ಮಧ್ಯಾಹ್ನೇ ಜ್ಯೋತಿರೂಪಕಮ್
ತಾದೃಶಂ ಪರಮಾತ್ಮಾನಂ ಸ್ಮರೇತ್ಪಾರ್ಥ ಮನಸ್ಯಮುಮ್ (೨೮)

ಸದಸೂಕ್ಷ್ಮಂ ನಿರ್ವಿಕಾರಂ ಶ್ರೀನಿವಾಸಂ ನಿರಂಜನಮ್
ಅಪ್ರಮೇಯಮಜಂ ದೇವಂ ತನ್ಮಧ್ಯೇ ಪುರುಷೋತ್ತಮಂ (೨೯)

ಪಂತುವರಾಳಿ ಚಾಪು

ತವಕದಲಿ ಸ್ತುತಿಸಿ ತೈಲಾಜ್ಯ ಬತ್ತಿಯಿಂದ
ಹವಣಿಸಿದ ಜ್ಯೋತಿಯಂತೆ ಹರಿಯ ಮೂರುತಿ ಕಾಣು
ವವನೆ ತಾನಿಂತು ಧ್ಯಾನಿಸಲು ಪರಮಾತ್ಮ ಸದಸೂಕ್ಷ್ಮ ಶ್ರೀನಿವಾಸ
ನಿರ್ವಿಕಾರ ನಿರಂಜನಾಪ್ರಮೇಯ ೧೫

ಶ್ಲೋಕ

ಪಾದಾಧರಮತಲಂ ವಿಂದ್ಯಾತ್ ಪಾದೋರ್ಧ್ವಂ ವಿತಲಂ ಭವೇತ್
ಸುತಲಂ ಜಂಘದೇಶೇ ತು ಜಾನುದೇಶೇ ರಸಾತಲಮ್ (೩೦)

ತಲಾತಲಂ ಊರುದೇಶೇ ಗುಹ್ಯದೇಶೇ ಮಹಾತಲಮ್
ಪಾತಾಲಂ ಕಟಿದೇಶೇ ತು ಸಪ್ತಮಂ ಪರಿಕಲ್ಪಿತಮ್ (೩೧)

ಪಂತುವರಾಳಿ ಚಾಪು

ಅತಳದಲ್ಲಿ ಪಾದವಿಹುದು ಆ ಪದೋರ್ಧ್ವ ವಿತಳದಲ್ಲಿ
ಸುತಳದಲ್ಲಿ ಜಂಘೆಗಳು ಸೋದ್ಯಜಾನು ರಸಾತಳದಿ
ತಳಾತಳದಿ ತೊಡೆ ಇಹುದು ಮಹಾತಳದಿ ಗುಹ್ಯವಿಹುದು
ಪ್ರತಿಯಿಲ್ಲದೆ ಕಟಿಪದವಿ ಪಾತಾಳವಿಹುದು ೧೬

ಶ್ಲೋಕ

ಭೂಲೋರ್ಕಂ ನಾಭಿಮಧ್ಯೇ ತು ಭುವರ್ಲೋಕಂ ತು ಕುಕ್ಷಿಕೇ
ವಕ್ಷಃಸ್ಥಲೇ ಸುವರ್ಲೋಕಂ ಮಹರ್ಲೋಕಂ ತು ಕಕ್ಷಕೇ (೩೨)

ಜನೋಲೋಕಂ ಕಂಠದೇಶೇ ತಪೋಲೋಕಂ ಲಲಾಟಕೇ
ಸತ್ಯಲೋಕಂ ತು ಮೂರ್ಧ್ನ್ಯಸ್ತಿ ಭುವನಾನಿ ಚತುರ್ದಶ (೩೩)

ಪಂತುವರಾಳಿ ಚಾಪು

ಭೂಲೋರ್ಕ ನಾಭಿಮಧ್ಯ ಭುವರ್ಲೋಕದಲಿ ಕುಕ್ಷಿ
ಮೇಲೆ ಸುವರ್ಲೋಕದಲಿ ಮೃದುಹೃದಯ ಶ್ರೀವತ್ಸ
ಶ್ರೀಲೋಲನ ಕಕ್ಷಗಳಲಿ ಸೇರಿಹುದು ಮಹರ್ಲೋಕ
ಮೇಲೆ ಕೌಸ್ತುಭ ಜನೋಲೋಕ ಮತ್ತೆ ಕೊರಳಲಿಹುದು
ತಪೋಲೋಕದಿ ಲಲಾಟ ತಲೆ ಸತ್ಯಲೋಕದಿ
ವಿಪರೀತ ವಿರಾಟರೂಪ ವಿಶ್ವತೇಜಸ ಪ್ರಾಜ್ಞ ತುರ್ಯ
ಉಪೇಂದ್ರ ಎಪ್ಪತ್ತೆರಡು ಸಾವಿರ ಉಪನಾಡಿಯಲಿ
ಕಪಟನಾಟಕ ಸೂತ್ರಧಾರಿ ಪುರಂದರವಿಠಲ ೧೭

## ೧೪೩

ಕಲ್ಯಾಣಿ ಅಟ್ಟ

ಲಗ್ಗೆಯೋ ವೈಕುಂಠ ಲಗ್ಗೆಯೋ ಪ

ಒಗ್ಗಿಲಿ ಶ್ರೀಹರಿಯೊಡನಾಡೊ ಸುಜನರ್ಗೆ ಅ

ಸಂಸಾರವೆಂಬೋದು ಸದರವಲ್ಲವೆಂದು
ಸಂಶಯವೆಂಬೋದು ಇನಿತಿಲ್ಲದೆ
ಹಂಸನ ತನ್ನ ಮನೆಯೊಳು ನೇಮಿಸಿ
ಕಂಸಾರಿಯೆಡೆಯೊಳು ಕಡುಸ್ನೇಹ ಮಾಳ್ಪಗೆ ೧

ಮಾಯಾಪಾಶವ ಕಳೆದು ಮದಮತ್ಸರವಳಿದು
ಕಾಯವು ಸ್ಥಿರವಲ್ಲವೆಂದು ತಿಳಿದು
ನ್ಯಾಯ ಮೀರದೆ ಅನ್ಯಾಯಕ್ಕೆ ಸೇರದೆ
ಕಾಯಜಪಿತನೊಳು ಕಡುಸ್ನೇಹ ಮಾಳ್ಪಗೆ ೨

ಭ್ರೂಮಧ್ಯದೆಡೆಯೊಳು ನಾಸಿಕಾಗ್ರದೊಳು
ನೇಮದಿಂದ ದೃಷ್ಟಿಯ ನಿಲ್ಲಿಸಿ
ಪ್ರೇಮದಿ ಪುರಂದರವಿಠಲನ ಭಜಿಸುತ
ಭೂಮಿಯೊಳಿಹ ಬುದ್ಧಿವಂತ ಮನಜರಿಗೆ ೩

[ಧ್ಯಾನಮಾರ್ಗದ ಹೆಗ್ಗಳಿಕೆಯನ್ನು ಹೇಳುವ ಪದ ಇದು. ಯೋಗ ವಿಧಾನದ ಉಲ್ಲೇಖವೂ ಇದೆ. ಮಧ್ವಾಚಾರ್ಯರು ಅನುವ್ಯಾಖ್ಯಾನದಲ್ಲಿ 'ಯೋಗ್ಯೋಪಾಸಾಃ ವಿನಾ ನೈವ ಮುಕ್ತಿಃ ಕಸ್ಯಾಪಿ ಸೇತ್ಸ್ಯತಿ' (ಜೀವರು ತಮ್ಮ ಯೋಗ್ಯತೆಗನುಸಾರವಾಗಿ ಉಪಾಸನೆಯನ್ನು ಮಾಡಬೇಕು, ಉಪಾಸನೆಯಿಲ್ಲದೆ ಮುಕ್ತಿ ದೊರಕುವುದಿಲ್ಲ) ಎಂದು ಹೇಳಿರುವುದು ಈ ಪದದ ಹಿನ್ನೆಲೆ.]

ಲಗ್ಗೆ—ಮುತ್ತಿಗೆ ಹಾಕು, ದಾಳಿಮಾಡು.

ಒಗ್ಗಿಲಿ—ಸೇರಿಕೊಂಡು (ಒಗ್ಗು), ಪರವಶರಾಗಿ.

ಭೈರವಿ                                                                                    ಚಾಪು

ಜಯ ಮಂಗಳಂ ನಿತ್ಯ ಶುಭ ಮಂಗಳಂ ಪ

ಗುರು ಭಕ್ತಿಯೆಂತೆಂಬ ಕನಕದೋಲೆಯನಿಟ್ಟು
ಹರಿ ಧ್ಯಾನವೆಂಬ ಆಭರಣವಿಟ್ಟು
ವರತತ್ವವೆಂತೆಂಬ ಪಾರಿಜಾತವ ಮುಡಿದು
ಪರಮಾತ್ಮ ಹರಿಗೆ ಆರತಿಯೆತ್ತಿರೆ ೧

ಆದಿಮೂರುತಿಯೆಂಬ ಅಚ್ಚ ಅರಿಶಿನ ಬಳಿದು
ವೇದಮುಖನೆಂಬ ಕುಂಕುಮವನಿಟ್ಟು
ಸಾಧು ಸಜ್ಜನ ಸೇವೆಯೆಂಬ ಸಂಪಿಗೆ ಮುಡಿದು
ಮೋದದಿಂ ಲಕ್ಷ್ಮಿಗಾರತಿಯೆತ್ತಿರೆ ೨

ತನುವೆಂಬ ತಟ್ಟೆಯಲಿ ಮನಸೊಡಲನು ಇರಿಸಿ
ಘನ ಶಾಂತಿಯೆಂಬ ಆಜ್ಯವನು ತುಂಬಿ
ಆನಂದವೆಂತೆಂಬ ಬತ್ತಿಯನು ಹಚ್ಚಿಟ್ಟು
ಚಿನುಮಯ ಹರಿಗೆ ಆರತಿಯೆತ್ತಿರೆ ೩

ಕಾಮಾಂಧವಳಿದಂಥ ಕಮಲದ ತಟ್ಟೆಯಲಿ
ನೇಮವೆಂತೆಂಬ ಹರಿದ್ರವನು ಕದಡಿ
ಆ ಮಹಾ ಸುಜ್ಞಾನವೆಂಬ ಸುಣ್ಣವ ಬೆರೆಸಿ
ಸೋಮಧರವಂದ್ಯಗಾರತಿ ಎತ್ತಿರೆ ೪

ನಾರದವಂದ್ಯಗೆ ನವನೀತಚೋರಗೆ
ನಾರಾಯಣಗೆ ಶ್ರೀ ವರಲಕ್ಷ್ಮಿಗೆ
ಸಾರಿದವರನು ಪೊರೆವ ಪುರಂದರವಿಠ್ಠಲಗೆ
ನೀರಜಮುಖಿಯರಾರತಿ ಎತ್ತಿರೆ ೫

[ಮಾನಸಪೂಜಾ ಪ್ರಕಾರಕ್ಕೆ ಸೇರಿದ ಪದ; ಅರ್ಚನೆಯ ಸಾಂಪ್ರದಾಯಿಕ ವಿಧಿಗಳನ್ನು ಸಾಂಕೇತಿಕವಾಗಿ ಗ್ರಹಿಸಿ, ಪೂಜೆಯ ನಂತರ ಆರತಿ ಎತ್ತುವ ಬಗೆಯನ್ನು ಸೊಗಸಾಗಿ ಬಣ್ಣಿಸಿದ್ದಾರೆ. ಹರಿಯನ್ನು ಪರಮಾತ್ಮವೆಂದು ಕರೆದು ಬಿಂಬಭಾವವನ್ನು ಸೂಚಿಸಿದ್ದಾರೆ. ಹರಿಯೇ ಸರ್ವೋತ್ತಮನೆಂಬ ತತ್ತ್ವ ಹೂವು. ಸಾಧಕನ ಶರೀರವೇ ಆರತಿಯ ತಟ್ಟೆ ; ಮನಸ್ಸೇ ಅದರಲ್ಲಿರಿಸಿದ ದೀಪ (ಸೊಡರು) ; ಸಮಾಧಾನವೆಂಬುದು ತುಪ್ಪ (ಆಜ್ಯ) ; ಆನಂದವೆಂಬುದೇ ಬತ್ತಿ. ಈ ಆರತಿಯನ್ನು ಪಡೆದುಕೊಳ್ಳುವ ಹರಿ ಚಿನ್ಮಯ.]

ಧ್ಯಾಂಜಿ ಚಾಪು

ಎನ್ನ ಬಿಟ್ಟು ನೀನಗಲದಿರು ಶ್ರೀನಿವಾಸ ಪ

ನಿನ್ನ ನಂಬಿದ ದಾಸನಲ್ಲವೇನೊ ಅ

ತನುವೆಂಬೊ ಮಂಟಪದಿ
ಮನವೆಂಬೊ ಹಸೆಮಂಚ
ಘನವಾದ ಸುಜ್ಞಾನ ದೀಪದ ಬೆಳಕಲ್ಲಿ
ಸನಕಾದಿವಂದ್ಯ ನೀ ಬೇಗ ಬಾರೋ ೧

ಪಂಚರಿವರು ಯಾವಾಗಲೂ
ಹೊಂಚ್ಹಾಕಿ ಎನ್ನನು ನೋಡುತಾರೆ
ಕೊಂಚಗಾರರು ಆರು ಮಂದಿ ಅವರು
ಹಿಂಚು ಮಿಂಚಿಲ್ಲದೆ ಎಳೆಯುತಾರೆ ೨

ಮುನ್ನ ಮಾಡಿದ ದುಷ್ಕರ್ಮಾದಿ ಬಳಲಿದೆ
ಇನ್ನಾದರೂ ನೀನೆನ್ನ ಕಾಯೊ
ಘನ್ನ ಮಹಿಮ ಶ್ರೀಪುರಂದರವಿಠಲ
ಮನ್ನಿಸಿ ಮಮತೆ ಎನ್ನಲಿ ತೋರೊ ೩

[ಹರಿಯನ್ನು ಹೃದಯ ಕುಹರದಲ್ಲಿ ಕಾಣುವ ತವಕ ಇಲ್ಲಿ ಕಾಣುತ್ತದೆ. ಬಿಂಬೋಪಾಸನೆಯ ಸ್ವಾರಸ್ಯ ಇದೇ. ಶರೀರವೇ ಮಂಟಪ, ಮನಸ್ಸೇ ಹಸೆಮಣೆ; ಸಚ್ಛಾಸ್ತ್ರದಿಂದ ಒದಗಿದ ಜ್ಞಾನವೇ ದೀಪ. ಇದು ಸಾಧಕನು ಪರಮಾತ್ಮನನ್ನು ತನ್ನಲ್ಲಿ ಬಿಜಯಮಾಡಿಕೊಳ್ಳುವ ಸಿದ್ಧತೆ. ಹೀಗೆ ಬಿಂಬದ ಅರಿವಾಗದಿದ್ದರೆ ವಿಷಯ ಭೋಗದಲ್ಲಿ ತೊಡಗಿ ಹಾಳುಗುವೆನೆಂಬ ಆತಂಕ ಸಾಧಕನಿಗೆ.]

ಪಂಚರಿವರು—ಪಂಚೇಂದ್ರಿಯಗಳು ; ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ.
ಕೊಂಚಗಾರರು ಆರು ಮಂದಿ — ಅರಿಷಡ್ವರ್ಗ ; ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ.
ಕೊಂಚಗಾರ—ನಾಡಾಡಿ, ಕ್ಷುದ್ರನಾದವನು.

ನಾದನಾಮಕ್ರಿಯೆ ಅಟ್ಟ

ಸದರವಲ್ಲವೊ ನಿಜ ಭಕುತಿ, ಸತ್ಯ
ಸದಮಲ ಗುರು ಕರುಣಾನಂದ ಮೂರುತಿ ಪ

ಅಡಿಯಲಂಬರ ಮಾಡೋತನಕ ಅಗ್ನಿ
ಕಡಲುಂಡು ಮಲಿನ ಕೊನೆನೀಗೋ ತನಕ
ಒಡಲಿಬ್ಬರೊಂದಾಗೋತನಕ ಆ
ಹಡೆಯದಂಥ ಹೆಣ್ಣು ಪ್ರಸವಾಗೋ ತನಕ ೧

ನಾಡಿ ಹಲವು ಕೂಡೋತನಕ ಬ್ರಹ್ಮ
ನಾಡಿ ಪೊಕ್ಕು ನಲಿದಾಡುವ ತನಕ
ಕಾಡುವ ಕಪಿ ನಾಯೋತನಕ ಸುಟ್ಟು
ಕಾಡಿನೊಳು ರಸ ತೊಟ್ಟಿಡೋ ತನಕ ೨

ಆದಿಕುಂಭವ ಕಾಂಬೋತನಕ ಅಲ್ಲಿ
ಸಾಧಿಸಿ ಅಮೃತ ಸವಿದುಂಬೋತನಕ
ಬಾಧೆ ಸಹಿಸಿಕೊಂಬೋ ತನಕ ಆದಿ
ಪುರಂದರವಿಠಲನ ಸ್ಮರಿಸೋ ತನಕ ೩

[ಇದು ಹಠಯೋಗಮಾರ್ಗವನ್ನೂ ಗುರುವಿನ ಅಗತ್ಯವನ್ನೂ ತಿಳಿಯಹೇಳುತ್ತದೆ. ಯೋಗದ 'ಸಂಧಾಯ' ಪರಿಭಾಷೆಯಲ್ಲೇ ಇರುವುದರಿಂದ ಒಗಟಿನಂತಿದೆ. ನಾಥ ಪಂಥದ ಪ್ರಕ್ರಿಯೆಗಳನ್ನೂ ಪ್ರಯೋಗಗಳನ್ನೂ ಇಲ್ಲಿ ಕಾಣಬಹುದು. ಗುರು ಕಾರುಣ್ಯ ದಿಂದ ಶಿಷ್ಯನ ಕಾಲು ನೆಲದಿಂದ ಕಿತ್ತು ಮೇಲೆ ನಿರಾಲಂಬವಾಗುತ್ತದೆ ; ಸಂಸಾರದಲ್ಲಿ ಬೇರೂರಿರುವ ಪ್ರಸಕ್ತಿ ವಿರಕ್ತಿಯಿಂದ ತೊಲಗುತ್ತದೆ ('ಅಡಿಯಲಿ ಅಂಬರ ಮಾಡು'). ಪ್ರಾಣಾಯಾಮದಿಂದ ಒದಗಿದ ಕಾವು ಕಡಲಿನಂತೆ ಅಪಾರವಾದ ಶಾರೀರ ಮತ್ತು ಮಾನಸ ವಾಸನೆಗಳನ್ನು ಸುಟ್ಟುಹಾಕುತ್ತದೆ ('ಅಗ್ನಿ ಕಡಲುಂಡು ಮಲಿನ ಕೊನೆ ನೀಗು') ಸಾಧನೆಯಿಂದ ಇಡಾ ಮತ್ತು ಪಿಂಗಳಾ ಎಂಬೆರಡು ಪ್ರಧಾನ ನಾಡಿಗಳೂ ಸುಷುಮ್ನಾ ದಲ್ಲಿ ಸೇರಿ ('ಒಡಲ ಇಬ್ಬರು ಒಂದಾಗು'), ಸುಷುಮ್ನಾ ನಾಡಿಯು ಮೇಲೇರಿ ಅಮೃತವನ್ನು ಸೂಸುತ್ತದೆ ('ಹಡೆಯದಂಥ ಹೆಣ್ಣು ಪ್ರಸವವಾಗು'). ಎಪ್ಪತ್ತೆರಡು

ಸಾವಿರ ನಾಡಿಗಳೂ ಯೋಗದಿಂದ ಸಮಾಸವಾಗಿ ('ನಾಡಿ ಹಲವು ಕೂಡು'), ಕಪಾಲದಲ್ಲಿರುವ ಬ್ರಹ್ಮರಂಧ್ರವನ್ನು ಪ್ರವೇಶಿಸಿ (ಬ್ರಹ್ಮನಾಡಿ ಪೊಕ್ಕು'), ಸಹಸ್ರಾರದಲ್ಲಿ ಆನಂದಾನುಭವವನ್ನು ಪಡೆಯುತ್ತವೆ ('ನಲಿದಾಡು') ಕರ್ಮದ ಬಲದಿಂದ ಚಪಲವಾಗಿದ್ದ ಚಿತ್ತ ಆಗ ಲಯವನ್ನು ಹೊಂದುತ್ತದೆ ('ಕಾಡುವ ಕಪಿ ಸಾಯು'). ದುರ್ಗಮವಾದ ಸಹಸ್ರಾರ ಪದ್ಮದಿಂದ ಸುಧಾರಸದ ಸ್ರವಣವಾಗುತ್ತದೆ ('ಕಾಡಿನೊಳು ರಸ ತೊಟ್ಟಿಡು'). ಸಹಸ್ರಾರವೇ 'ಆದಿಕುಂಭ', ಅನಾದಿ ಕಾಲದಿಂದ ಸಿದ್ಧವಾದ ಅಮೃತ ಕಲಶ. ಸಂಸಾರದಿಂದಾಗಿ ಅದು ಜೀವನಿಗೆ ಕಾಣದಾಗುತ್ತದೆ; ಯೋಗಸಾಧನೆಯಿಂದ ಮತ್ತೆ ಅದು ಗೋಚರವಾಗುತ್ತದೆ. ಅಲ್ಲಿಯವರೆಗೆ ಹಠಯೋಗದ ಕಠಿನಮಾರ್ಗದಲ್ಲಿ ಬರುವ ತೊಂದರೆಗಳನ್ನೆಲ್ಲ ಸ್ಥೈರ್ಯದಿಂದ ತಾಳಿಕೊಳ್ಳಬೇಕು ('ಬಾಧೆ ಸಹಿಸಿಕೊ'). ನಿಜಭಕ್ತಿಯೆಂದರೆ ಪರಮಾತ್ಮನನ್ನು ಕೂಡಿಕೊಳ್ಳುವುದು ('ಭಜ್'ಧಾತುವಿನಿಂದ); ಅದೇನು ಸುಲಭವಲ್ಲ ಎಂದು ಪದದ ತಾತ್ಪರ್ಯ.]



ಮೋಹನ ಅಟ್ಟ

ಬಾರಮ್ಮ ನಾವಿಬ್ಬರಾಡುವ
ಮುಕ್ತಿ ಸಾಧನಂಗಳ ಬೇಗ ಬೇಡುವ ಪ

ಕಾಡುವ ಕಪಿ ಲಯಸಂಗಳ
ಬೇಡುವ ಜ್ಞಾನಮಂಟಪದಲ್ಲಿ ಜೋಡಿ ಕೂಡಾಡುವ ಅ

ಮೂರು ಮನೆಯ ಭೇದವ ಮಾಡಿ
ಮತ್ತೈದೆಂಟು ಮನೆ ಕಿತ್ತಾ್ಯಡುವ ೧

ಪುಂಡರೀಕಾಕ್ಷ ಶೇಷನ ಮೇಲೆ
ಭೂಮಂಡಲದೊಳಗೆ ಬ್ರಹ್ಮಾಂಡವು ೨

ಶಂಖ ಚಕ್ರಾಂಕಿತ ಪುರಂದರವಿಠಲನ್ನ
ಜ್ಞಾನಮಂಟಪದಲ್ಲಿ ೩

[ಇದು ಭಕ್ತಿಗೆ ಸಂಬೋಧನೆ ; ಸಂಸ್ಕೃತದಲ್ಲಿ 'ಭಕ್ತಿ' ಎಂಬ ಮಾತು ಸ್ತ್ರೀಲಿಂಗ.]

ನಾವಿಬ್ಬರು—ಜೀವಾತ್ಮನೂ ಭಕ್ತಿಯೂ ; ಇಲ್ಲಿ ಅಪರಭಕ್ತಿಯನ್ನು ಹೇಳಿದೆ.

ಮುಕ್ತಿ ಸಾಧನಂಗಳ—ಜ್ಞಾನ, ಭಕ್ತಿ (ಪರಭಕ್ತಿ), ವೈರಾಗ್ಯಗಳನ್ನು.

ಕಾಡುವ ಕಪಿ —ಚಪಲ ಚಿತ್ತವು ಲಯವನ್ನು ಹೊಂದುವಂತೆ.

ಜೋಡಿ ಕೂಡಿ—ಜ್ಞಾನವೇ ಮುಕ್ತಿಗೆ ಕಾರಣವಾದುದರಿಂದ ಅದನ್ನು ಮುಕ್ತಿಯ ಮಂಟಪವೆಂದು ಕರೆದಿದ್ದಾರೆ ; ಅಲ್ಲಿ ಜೀವಾತ್ಮನೂ ಭಕ್ತಿಯೂ ಕೂಡಿಕೊಂಡು, ಎಂದರೆ ದೃಢವಾದ ಸ್ನೇಹವನ್ನು ಮಾಡಿ.

ಮೂರು ಮನೆಯ ಭೇದವ—ಪ್ರಾಕೃತಗುಣತ್ರಯವಾದ ಸತ್ತ್ವ, ರಜಸ್ಸು, ತಮಸ್ಸುಗಳನ್ನು ದಾಟಿ.

ಮತ್ತೈದೆಂಟು—ಐದು ಮನೆಯೆಂದರೆ ಪಂಚಭೂತಗಳು (ಪೃಥ್ವೀ, ಅಪ್, ತೇಜ, ವಾಯು, ಆಕಾಶ), ಎಂಟು ಮನೆಯೆಂದರೆ 'ಪುರ್ಯಷ್ಟಕ' ಅಥವಾ 'ಅಷ್ಟವಿಧ ಪ್ರಕೃತಿ' (ಪಂಚೇಂದ್ರಿಯಗಳು, ಶಬ್ದ, ಸ್ಪರ್ಶ, ರೂಪ, ರಸ, ಗಂಧ ಮತ್ತು ಅವ್ಯಕ್ತ, ಮಹತ್, ಅಹಂಕಾರ ಈ ಮೂರು).

ಮಾಯಾಮಾಳವ ಗೌಳ ಆದಿ

ಒಂಭತ್ತು ಬಾಗಿಲೊಳು ಒಂದೇ ದೀವಿಗೆ ಹಚ್ಚಿ
ನಂಬಿಕಿಲ್ಲದ ಸಂಸಾರ ಮಾಡಿದೆನೆ ಸೂವಿಯಾ ಬೀಬಿ ಪ

ತನುವೆಂಬ ಕಲ್ಲಿನೊಳು ಮನವೆಂಬ ಧಾನ್ಯವ ಹುಂಬಿ
ವನವನದು ನವಬೇಳೆ ಬೀಸಿದೆನೆ ೧

ಅಷ್ಟಕರ್ತೃಗಳೆಂಬೊ ಅಷ್ಟನವಧಾನ್ಯವ ತಂದು
ಕುಟ್ಟಿಕಟ್ಟಿ ಕಜ್ಜಾಯ ಕರಿದೆನೆ ೨

ಅಷ್ಟಕರ್ಮಗಳೆಂಬೊ ಕಾಷ್ಠವನ್ನುರುಹಿ ನಾನು
ನಿಷ್ಠೆಯಿಂದಲಿ ಅನ್ನವ ಬಾಗಿದೆನೆ ೩

ಅಷ್ಟರೊಳಗೆನ್ನ ಗಂಡ ಬಂದು ಅಡುವ ಮಡಿಕೆಯ ಒಡೆದು
ಮುಟ್ಟಿಮುರಿದು ಮೂಲೆಗೆ ಹಾಕಿದನೆ ೪

ಉಡುವ ಸೀರೆಯ ಸೆಳೆದು ಗಿಡದ ತೊಪ್ಪಲ ಸುತ್ತಿ
ತಿರುಗಿ ಬಾರದ್ಹಾಂಗೆ ಮಾಡಿದನೆ ೫

ಮಾಡಿದೆ ಒಗೆತನವ ನಂಬಿಕಿಲ್ಲದ ಸಂಸಾರವ ನೆಚ್ಚಿ
ಕೂಡಿದೆ ಪುರಂದರವಿಠಲನ್ನ ದಾಸರ ೬

ಒಂಬತ್ತು ಬಾಗಿಲೊಳು—'ನವದ್ವಾರೇ ಪುರೇ' ಎಂಬ ಕಲ್ಪನೆ, ದೇಹಕ್ಕೆ ಒಂಬತ್ತು ಬಾಗಿಲುಗಳು. ಕಣ್ಣುಗಳೆರಡು, ಕಿವಿಗಳೆರಡು, ಬಾಯಿ ಒಂದು, ಮೂಗಿನ ಹೊಳ್ಳೆಗಳೆರಡು, ಮೂತ್ರದ್ವಾರ, ಮಲದ್ವಾರ

ಒಂದೇ ದೀವಿಗೆ—ವ್ಯವಹಾರಕ್ಕೆ ಬೆಳಕನ್ನು ಕೊಡುವ ಬುದ್ಧಿ

ನಂಬಿಕಿಲ್ಲದ ಸಂಸಾರ—ವಿರಕ್ತಿ

ಸೂವಿಯಾ ಬೀಬಿ—ಸೌವಿದ, ಹೆಂಗಳೆಯರ ಒಳಕೋಣೆಯಲ್ಲಿ ಊಳಿಗವಮಾಡುವ ಹೆಣ್ಣು, ಇಲ್ಲಿ ಮನಸ್ಸು.

ತನುವೆಂಬ ಕಲ್ಲಿನೊಳು—ಶರೀರವೆಂಬ ಜೋಲದಲ್ಲಿ.

ವನವನದು—ಒಂದರಿಯಾಡಿ, ಜಲ್ಲಡಿಯಾಡಿ.

ನವಬೇಳೆ ಬೀಸಿದೆ—ಒಂಬತ್ತು ಬಗೆಯ ಬೇಳೆಗಳು ; ಇಲ್ಲಿ ನವವಿಧ ಭಕ್ತಿ.

ಅಷ್ಟಕರ್ತೃಗಳೆಂಬೊ—ಭೂತ, ತನ್ಮಾತ್ರ, ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಅಂತಃಕರಣ, ಗುಣ, ಪ್ರವೃತ್ತಿ, ಕಾಲ ಇವು ಎಂಟು ಎಲ್ಲ ಕೆಲಸಗಳನ್ನೂ ಮಾಡಿಸುವುವು.

ಅಷ್ಟನವಧಾನ್ಯವ—ಎಂಟು ಭಾವಗಳು ಹೊಸದಾಗಿ ಮೂಡಿಕೊಂಡವು : ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ, ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ.

ಅಷ್ಟಕರ್ಮಗಳೆಂಬೊ—ಶಮ, ದಮ, ತಪಸ್ಸು, ಶೌಚ, ಕ್ಷಾಂತಿ, ಜ್ಞಾನ, ವಿಜ್ಞಾನ, ಆರ್ಜವ.

ಕಾಷ್ಠವನ್ನುರುಹಿ—ಕಟ್ಟಿಗೆಯನ್ನು ಉರಿಸಿ.

ಎನ್ನ ಗಂಡ—ಬಿಂಬರೂಪಿಯಾದ ಪರಮಾತ್ಮ.

ಅಡುವ ಮಡಕೆ—ಅಡುಗೆಮಾಡುವ ಮಡಕೆ ; ಕರ್ಮ.

ಉಡುವ ಸೀರೆ—ಭ್ರಮೆಯೆಂಬ ಬಂಧನ (ಸ್ವಾತಂತ್ರ್ಯಭ್ರಮ, ಕರ್ತೃತ್ವ ಭ್ರಮ, ಈಶಿತ್ವ ಭ್ರಮ)

ಗಿಡದ ತೊಪ್ಪಲ—ಭಕ್ತಿ

ತಿರುಗಿ ಬಾರದ್ಹಾಂಗೆ—ಮತ್ತೆ ಸಂಸಾರಕ್ಕೆ ಬರದಂತೆ ; ಎಂದರೆ ಮುಕ್ತಿಯನ್ನು ಕೊಟ್ಟು.



ಭೈರವಿ ಆದಿ

ಬ್ರಾಹ್ಮಣನೆಂದರೆ ಬ್ರಹ್ಮವ ತಿಳಿದವನವನೀಗ ಬ್ರಾಹ್ಮಣನೊ ಪ

ಬ್ರಹ್ಮಭೇದವೆಂದು ಜಗವನ್ನು ಕಂಡವನವನೀಗ ಬ್ರಾಹ್ಮಣನೊ ಅ

ಮೂಗಲ್ಲಿ ವಾಯು ತುಂಬಿ ತುಂಬಿ ಎಳೆಯೋವ ಅವನೀಗ ಬ್ರಾಹ್ಮಣನೊ
ನಾಗಸ್ವರದ ಧ್ವನಿ ಕಿವಿಯಲ್ಲಿ ಕೇಳೋವ ಅವನೀಗ ಬ್ರಾಹ್ಮಣನೊ
ಬೇಗನೆ ನೆಲೆನೆಲೆ ಆರನ್ನು ಅಡರೋವ ಅವನೀಗ ಬ್ರಾಹ್ಮಣನೊ ೧
ವೇಗದಿಂದಲಿ ಚಂದ್ರಮಂಡಲದಮೃತವನುಂಡವ ಬ್ರಾಹ್ಮಣನೊ

ಮುತ್ತಿನಂದದಿ ಮಳೆಹನಿ ಉದುರುವಾಗ ತೊಲಗದವ ಬ್ರಾಹ್ಮಣನೊ
ಮತ್ತೆ ದ್ವಿದಳದ ಸಿಂಹಾಸನದಲ್ಲಿ ಕುಳಿತವ ಬ್ರಾಹ್ಮಣನೊ
ಎತ್ತೆತ್ತ ನೋಡಲು ಸೂಸು ಬೆಳದಿಂಗಳು ಕಾಣೋವ ಬ್ರಾಹ್ಮಣನೊ
ಉತ್ತಮ ಸಹಸ್ರಕಮಲ ಗರಿಕೆಯಲ್ಲಿ ಸೇರೋವ ಬ್ರಾಹ್ಮಣನೊ ೨

ಥಳಥಳಿಸುವ ಬ್ರಹ್ಮರಂಧ್ರವೆ ಸುಖವೆಂದು ಮಲಗುವ ಬ್ರಾಹ್ಮಣನೊ
ಬಲು ರವಿ ಶತಕೋಟಿ ಶಿಂಶುಮಾರದಲ್ಲಿ ಸೇರೋವ ಬ್ರಾಹ್ಮಣನೊ
ಕಲಿಯುಗದಲಿ ಹರಿನಾಮದ ಅಮೃತವನುಂಡವ ಬ್ರಾಹ್ಮಣನೊ
ಸುಲಭದಿ ಪುರಂದರವಿಟ್ಠಲರಾಯನ ಸೇರೋವ ಬ್ರಾಹ್ಮಣನೊ ೩

ಬ್ರಾಹ್ಮಣ—ಬ್ರಹ್ಮವಸ್ತುವನ್ನು ಹುಡುಕುವವನು, ಬೆನ್ನಟ್ಟುವವನು, ತಿಳಿಯುವವನು (ಅಣತಿ) ; 'ಕರೋತಿ ಬ್ರಹ್ಮಭಾವನಾಂ ಸ್ವಧರ್ಮನಿರತಃ ಶುದ್ಧಸ್ತಸ್ಮಾದ್ ಬ್ರಾಹ್ಮಣ ಉಚ್ಯತೆ'.

ಬ್ರಹ್ಮಭೇದವೆಂದು—ಜಗತ್ತು ಬ್ರಹ್ಮನಿಂದ ಬೇರೆಯಾದುದು, ಬ್ರಹ್ಮನಿಂದಲೇ ಉಂಟಾದುದು, ಬ್ರಹ್ಮನಿಗೆ ಅಧೀನವಾದುದು, ಬ್ರಹ್ಮವೊಂದೇ ಸ್ವತಂತ್ರವಾದ ತತ್ತ್ವ ಎಂದು.

ಮೂಗಲ್ಲಿ ವಾಯು ತುಂಬಿ—ಪ್ರಾಣಾಯಾಮದ ವಿಧಾನ.

ನಾಗಸ್ವರದ ಧ್ವನಿ—ನಾಗವೆಂದರೆ ಕುಂಡಲಿನಿ ; ಅದರ ಸ್ವರವೆಂದರೆ ಅನಾಹತಚಕ್ರದಲ್ಲಿ ಒದಗುವ ನಾದ.

ನೆಲೆ ನೆಲೆ ಆರನ್ನು—ಮೂಲಾಧಾರ ಮೊದಲಾದ ಆರು ಚಕ್ರಗಳನ್ನು ; ಅಡರುವ, ಏರುವ.

ಚಂದ್ರಮಂಡಲದಮೃತ—ಮೂಲಾಧಾರವು ಅಗ್ನಿಮಂಡಲವೆಂದೂ, ಅನಾಹತವು ಸೂರ್ಯಮಂಡಲವೆಂದೂ, ಸಹಸ್ರಾರವು ಚಂದ್ರಮಂಡಲವೆಂದೂ ತಂತ್ರ ಶಾಸ್ತ್ರದ ನಿರ್ದೇಶನ. ಚಂದ್ರಮಂಡಲವನ್ನು ಸಾಧಕನು ಮುಟ್ಟಿದಾಗ ಶೀತಳ ವಾದ ಸುಧಾಸ್ರವಣದ ಅನುಭವವೆಂದು ಹೇಳುತ್ತಾರೆ.

ದ್ವಿದಳದ ಸಿಂಹಾಸನ—ಆಜ್ಞಾಚಕ್ರ ; ಭ್ರೂಮಧ್ಯದಲ್ಲಿರುವುದು. ಇದನ್ನು ಶಕ್ತಿಕೂಟ ವೆಂದೂ ಕರೆಯುವರು. ಆರು ಚಕ್ರಗಳಲ್ಲಿ ಇದೇ ಮೇಲಿನದು ; ಜೀವನ ಸ್ಥಾನವೂ ಹೌದು. ಆದ್ದರಿಂದ ಸಿಂಹಾಸನವೆಂದು ಬಣ್ಣಿಸಿದ್ದಾರೆ.

ಉತ್ತಮ ಸಹಸ್ರಕಮಲ ಗರಿಕೆಯನ್ನು—ಆರು ಚಕ್ರಗಳ ಮೇಲ್ಭಾಗದಲ್ಲಿ, ಸುಷುಮ್ನಾ ನಾಳದ ತುತ್ತತುದಿಯಲ್ಲಿ ಬ್ರಹ್ಮರಂಧ್ರಕ್ಕೆ ಸೇರಿಕೊಂಡಿರುವ ಸಹಸ್ರಾರವೆಂಬ ಚಕ್ರ. ಇದು ಪರಮಾತ್ಮನ ನೆಲೆ ; ಅದರ ಕರ್ಣಿಕೆಗಳಲ್ಲಿ ವಿಹರಿಸುವುದು ಜೀವನ್ಮುಕ್ತನ ಭಾಗ್ಯ.

ಥಳಥಳಿಸುವ ಬ್ರಹ್ಮರಂಧ್ರ—ಮೂಲಾಧಾರದಿಂದ ಹೊರಟ ನೇರವಾದ ಸುಷುಮ್ನಾ ನಾಡಿ ಶಿರಃಕಪಾಲದ ಮೇಲ್ಭಾಗದಲ್ಲಿ ಮುಗಿಯುತ್ತದೆ. ಇದರಾಚೆ ಇರುವುದು ಸಹಸ್ರಾರ. ಸಹಸ್ರಾರಕ್ಕೆ ಕುಂಡಲಿನಿಯು ಹೋಗಲು ಅನುಕೂಲವಾಗಿರುವ ರಂಧ್ರವನ್ನು ಬ್ರಹ್ಮರಂಧ್ರವೆನ್ನುತ್ತಾರೆ. ಮೂಲಾಧಾರದಿಂದ ಬ್ರಹ್ಮರಂಧ್ರದ ವರೆಗೆ ಬ್ರಹ್ಮವಿದ್ಯಾಭಾವನೆಯ ವ್ಯಾಪ್ತಿ.

ಶಿಂಶುಮಾರ—ವಿಷ್ಣುಪುರಾಣ, ಭಾಗವತಪುರಾಣಗಳಲ್ಲಿ ಮೂರೂ ಲೋಕಗಳಿಗೆ ಆಸರೆ ಯಾಗಿ, ಎಲ್ಲ ತತ್ತ್ವಗಳನ್ನೂ ಎಲ್ಲ ದೇವತೆಗಳನ್ನೂ ಒಳಗೊಂಡಂತೆ ('ವಿಷ್ಣೋಃ ಸರ್ವದೇವತಾಮಯಂ ರೂಪಂ'), ದೇಶ-ಕಾಲಗಳ ಯುಗನದ್ಧಸಂಕೇತವಾಗಿ ರುವ ಮೂರ್ತಿಕಲ್ಪನೆ

ಮುಖಾರಿ ಝಂಪೆ

ಎಲೊ ಎಲೋ ಜೀವಾತ್ಮ ನೀ
ಸುಲಲಿತಾತ್ಮನ ನೆನೆದು ಸುಖಿಯಾಗೊ ಮನವೆ ಪ

ಇಕ್ಷುದಂಡ ಕೈಯೊಳಿರೆ ಇಂಧನವ ಮೆಲಲ್ಯಾಕೆ
ಅಕ್ಷಯ ಪಾತ್ರೆಯಿರಲು ಹಸಿದು ಇರಲ್ಯಾಕೆ
ನಿಕ್ಷೇಪ ನಿಧಿಯಿರಲು ನಿತ್ಯ ದಾರಿದ್ರ್ಯವ್ಯಾಕೆ
ಪಕ್ಷಿವಾಹನನಿರಲು ಪರದೈವವ್ಯಾಕೆ ೧

ಸುರಧೇನು ಕೈಸೇರಿ ಸುಖವಿಲ್ಲದಿರಲ್ಯಾಕೆ
ಗರುಡ ಮಂತ್ರವ ಜಪಿಸೆ ಗರಳ ಭಯವ್ಯಾಕೆ
ತರಣಿ ಮೊದಲುದಯಿಸಲು ಹಲವು ಜ್ಯೋತಿಗಳ್ಯಾಕೆ
ಮುರಹರನ ಪೂಜಿಸದೆ ಮುಂದುಗೆಡಲ್ಯಾಕೆ ೨

ಭಾವಶುದ್ಧಿಯಿಲ್ಲದಿಹ ಬಯಲ ಡಂಭಕವ್ಯಾಕೆ
ದೇವತಾಂಕಿತವಿರದ ದೇಹ ತಾನ್ಯಾಕೆ
ಆವಾಗ ಹರಿಯಿರಲು ಅನ್ಯಚಿಂತೆಗಳ್ಯಾಕೆ
ಕಾವ ಪುರಂದರವಿಠಲನ ಭಜಿಸದೆ ಕೆಡಲ್ಯಾಕೆ ೩

[ಜೀವಾತ್ಮನು ತನ್ನೊಳಗೆ ನಿಯಾಮಕನಾಗಿರುವ ಬಿಂಬರೂಪೀ ಪರಮಾತ್ಮನೇ ಬ್ರಹ್ಮಾಂಡದ ಅಷ್ಟಮಹಾಕಾರ್ಯಗಳನ್ನೂ ನಡೆಸುತ್ತಿರುವನೆಂಬುದನ್ನು ಅರಿತು ಬಿಂಬೋಪಾಸನೆಯಲ್ಲಿ. ತೊಡಗಬೇಕು. ನೇರವಾಗಿ ಹೃದಯ ಗುಹೆಯಲ್ಲೇ ದೊರೆಯುವನಾದ್ದರಿಂದ ಅವನು 'ಸುಲಲಿತಾತ್ಮ' ಮಾನಸಪೂಜೆಯ ಸೌಲಭ್ಯವೇ ಇರುವಾಗ ಬಹು ಪರಿಕರಗಳುಳ್ಳ ಬಾಹ್ಯಪೂಜೆಯ ಕ್ಲೇಶವೇತಕ್ಕೆ ? ತೀರ್ಥಯಾತ್ರೆ, ದಾನ, ತಪಸ್ಸು, ವ್ರತ ಮೊದಲಾದವೂ ಅನಗತ್ಯ ಎಂದು ಭಾವ.]

ಇಕ್ಷುದಂಡ—ಕಬ್ಬಿನ ಜಲ್ಲೆ.
ಇಂಧನ—ಇದ್ದಲು.
ಸುರಧೇನು—ಕಾಮಧೇನು.
ಗರಳ—ವಿಷ.
ತರಣಿ—ಸೂರ್ಯ.

೧೫೧

ನಾದನಾಮಕ್ರಿಯೆ — ಅಟ್ಟ

ನಳಿನನಾಭನ ನೀನು ಪಾಡೊ ಬೇಗ
ಒಳಕಣ್ಣಿಂದ ಅವನ ನಲಿದಾಡೊ ಪ

ಹೃದಯ ಆಕಾಶದಲ್ಲಿರುವ ಅಲ್ಲಿ
ಪದುಮಾಕ್ಷ ಪುರುಷೋತ್ತಮನೆಂಬಾತ
ಆತನು ಬಹು ರೂಪದಿಂದ ಕಾವ
ಆಧಾರವಾಗಿಪ್ಪ ಸೂಕ್ಷ್ಮಪ್ರದೇಶ ೧

ಎಂಟೊಂದು ಕದಗಳ ಮುಚ್ಚೊ ಮೇಲೆ
ತಂಟೆಯಿಲ್ಲದ ಮನವ ಅವನಲಿ ಇರಿಸೊ
ಕುಂಡಲಿ ಮಧ್ಯದಿ ನೋಡೊ ದಿವ್ಯ
ಮಂಟಪದಲಿ ಜ್ಯೋತಿ ಥಳಥಳಿಸುವುದೊ ೨

ಥಳಥಳಿಸುವ ಬಾಲಕೃಷ್ಣ ಅಲ್ಲಿ
ಬಲು ಕ್ರೀಡೆಗಳನೆಲ್ಲ ಮಾಡಿಸುವನಯ್ಯ
ಒಳಗೆ ಹೊರಗೆ ಪರಿಪೂರ್ಣ ನಮ್ಮ
ಫುಲ್ಲಲೋಚನ ತಂದೆ ಪುರಂದರವಿಠಲ ೩

ಒಳಗಣ್ಣಿಂದ—ಅಂತರ್ಮುಖಪ್ರವೃತ್ತಿಯಿಂದ ; ಯೋಗಸಾಧನೆಯಿಂದ ಬರುವ ಅರಿವಿನಿಂದ.

ಹೃದಯ ಆಕಾಶ—ಹೃದಯದೊಳಗೆ ಇರುವ ದಹರಾಕಾಶ ; ಪರಮಾತ್ಮನ ಸ್ಥಾನ.

ಎಂಟೊಂದು ಕದ—ನವದ್ವಾರಗಳು, ದೇಹದ ಒಂಬತ್ತು ಛಿದ್ರಗಳು. ವಿವರಣೆ ಆಗಲೆ ಬಂದಿದೆ.

ತಂಟೆಯಿಲ್ಲದ ಮನ—ಶುದ್ಧವಾದ ಅಂತಃಕರಣ ; ವಾಸನೆಗಳೆಲ್ಲ ಹರಿದು, ಕ್ಲೇಶಗಳನ್ನು ಕಳೆದುಕೊಂಡು ಹರಿಪ್ರಾವಣ್ಯವನ್ನು ಪಡೆದುಕೊಂಡು ಮನಸ್ಸು.

ಕುಂಡಲಿಮಧ್ಯದಿ—ಕುಂಡಲಿನಿಯೋಗದ ಪ್ರಕಾರ ಸಹಸ್ರಾರದಲ್ಲಿ ಪರಮಾತ್ಮನ ನೆಲೆ.

ಬಲುಕ್ರೀಡೆಗಳನೆಲ್ಲ—ಯೋಗಸಾಧನೆಯಿಂದ ದೊರಕುವ ವಿಭೂತಿಗಳು.

ಒಳಗೆ ಹೊರಗೆ ಪರಿಪೂರ್ಣ—'ಅಂತರ್ಬಹಿಶ್ಚ ತತ್ಸರ್ವಂ' ಎಂಬ ಮಾತಿನ ಛಾಯೆ.

ನಾದನಾಮಕ್ರಿಯೆ ಚಾಪು

ಮನವ ಶೋಧಿಸಬೇಕು ನಿಚ್ಚ, ದಿನ
ದಿನ ಮಾಡುವ ಪಾಪ ಪುಣ್ಯದ ವೆಚ್ಚ ಪ

ಧರ್ಮ ಅಧರ್ಮ ವಿಂಗಡಿಸಿ ಆ
ಧರ್ಮದ ನರಗಳ ಬೇರ ಕತ್ತರಿಸಿ
ನಿರ್ಮಲಾಚಾರದಿ ಚರಿಸಿ ಪರ
ಬೊಮ್ಮ ಮೂರುತಿ ಪಾದಕಮಲವ ಭಜಿಸಿ ೧

ತನುವ ಖಂಡಿಸಿ ಒಮ್ಮೆ ಮಾಣೋ ನಿನ್ನ
ಮನವ ದಂಡಿಸಿ ಪರಮಾತ್ಮನ್ನ ಕಾಣೋ
ಕೊನೆಗೆ ನಿನ್ನೊಳು ನೀ ಜಾಣೊ ಮುಕ್ತಿ
ನಿನಗೆ ದೂರಿಲ್ಲವು ಒಂದೇ ಗೇಣೊ ೨

ಆತನ ಭಕುತರಿಗೆ ಕೇಡಿಲ್ಲ ಅವ
ಪಾತಕ ಪತಿತ ಸಂಗವ ಮಾಡುವನಲ್ಲ
ನೀತಿವಂತರು ಕೇಳಿರೆಲ್ಲ ನಮ
ಗಾತನೆ ಗತಿ ಈವ ಪುರಂದರವಿಠಲ ೩

[ಆಧ್ಯಾತ್ಮಯೋಗದ ಪ್ರಕಾರವನ್ನು ಈ ಪದವು ಬಿತ್ತರಿಸುತ್ತದೆ ]

ಮನವ ಶೋಧಿಸಬೇಕು ನಿಚ್ಚ—ಅಂತರಂಗಶೋಧನೆಯೆಂಬ ವಿವರ. ಅಷ್ಟಾಂಗ ಯೋಗದಲ್ಲಿ ಪ್ರಾಣಾಯಾಮದನಂತರ ವಿಹಿತವಾದ ಪ್ರತ್ಯಾಹಾರ. ಮನಸ್ಸನ್ನು ಇಂದ್ರಿಯಗಳಿಂದ ಸೆಳೆದುಕೊಂಡು ತನ್ನಲ್ಲೇ ಗಮನವನ್ನು ಹರಿಸಿ ಅನುಕೂಲ ಪ್ರತಿಕೂಲ ಪ್ರವೃತ್ತಿಗಳನ್ನು ವಿಂಗಡಿಸಿಕೊಂಡು ಹೇಯ—ಹಾನ—ಹಾನೋಪಾಯಗಳೆಂಬ ವಿಧಿಯಿಂದ ಮನಸ್ಸನ್ನು ಸಮಾಧಿಗೆ ಉಪಯುಕ್ತವನ್ನಾಗಿ ಮಾರ್ಪಡಿಸಿಕೊಳ್ಳುವುದು.

ಬೊಮ್ಮಮೂರುತಿ—ಪರಬ್ರಹ್ಮ, ಬಿಂಬರೂಪ.

ತನುವ ಖಂಡಿಸಿ—ದೇಹದ ನೆನಪನ್ನು ಅಳಿಸಿ (ಸಮಾಧಿಯಲ್ಲಿ).

ಮಾಣೊ—ದೇಹವ್ಯಾಪಾರವನ್ನು ನಿಲ್ಲಿಸು.

ಮನವ ದಂಡಿಸಿ—ಮನಸ್ಸಿನ ವಿಷಯಪ್ರಾವಣ್ಯವನ್ನು ತಪ್ಪಿಸಿ, ಬಿಗಿಹಿಡಿದು.

ಜಾಣೊ—ತಿಳಿದುಕೋ (ಜಾಣ್).

ಮುಕ್ತಿ ಒಂದೇ ಗೇಣೊ—ಬಿಂಬನ ಸ್ಥಾನವು ಹೃದಯಕಮಲವಾಗಿದ್ದು, ಪ್ರತಿಬಿಂಬನಾದ ಜೀವನ ಸ್ಥಾನವು ಆಜ್ಞಾಚಕ್ರವಾದುದರಿಂದ ಎರಡಕ್ಕೂ ನಡುವೆ ಇರುವ ದೂರ ಒಂದು ಗೇಣು ಅಷ್ಟೆ. ಜೀವನು ಹೃದಯದಲ್ಲಿ ಬಿಂಬಾಪರೋಕ್ಷವನ್ನು ಪಡೆದುಕೊಳ್ಳುವುದೇ ಮುಕ್ತಿ.

ಗತಿ ಈವ—ಮುಕ್ತಿಯನ್ನು ನೀಡುವವ.



## ೧೫೩

ಬಿಲಹರಿ ಆದಿ

ಸಕಲವೆಲ್ಲವು ಹರಿಸೇವೆಯೆನ್ನಿ ಪ

ರುಕುಮಿಣಿಯರಸ ವಿಠ್ಠಲನಲ್ಲದಿಲ್ಲವೆನ್ನಿ ಅ

ನುಡಿವುದೆಲ್ಲವು ನಾರಾಯಣನ ಕೀರ್ತನೆಯೆನ್ನಿ
ನಡೆವುದೆಲ್ಲವು ದೇವರ ಯಾತ್ರೆಯೆನ್ನಿ
ಕೊಡುವ ದಾನವು ಕಾಮಜನಕಗರ್ಪಿತವೆನ್ನಿ
ಎಡೆಯ ಅನ್ನವು ಹರಿಯ ಪ್ರಸಾದವೆನ್ನಿ ೧

ಹೊಸ ವಸ್ತ್ರ ಉಡುವಲ್ಲಿ ಹರಿಯ ಬೆಳ್ಳುಡೆಯೆನ್ನಿ
ಕುಸುಮ ಪರಿಮಳವು ಶ್ರೀಕೃಷ್ಣಗೆನ್ನಿ
ಎಸೆವ ಆಭರಣ ಯಶೋದೆನಂದನಗೆನ್ನಿ
ಶಶಿಮುಖಿಯರ ಕೂಟ ಸೊಬಗು ಗೋವಳಗೆನ್ನಿ ೨

ಆಟಪಾಟಗಳೆಲ್ಲ ಅಂತರ್ಯಾಮಿಗೆ ಎನ್ನಿ
ಊಟ ಸತ್ಕಾರ ಕಂಜನಾಭನಿಗೆನ್ನಿ
ನೀಟಾದ ವಸ್ತುಗಳು ಕೈಟಭಾಂತಕಗೆನ್ನಿ
ಕೋಟಲೆ ಸಂಸಾರ ನಾಟಕಧರಗೆನ್ನಿ ೩

ನಿದ್ರೆ ಜಾಗರವು ಸಮುದ್ರಶಯನಗೆನ್ನಿ
ಭದ್ರನಿಧಿ ಗಜವರದಗೆನ್ನಿ
ರೌದ್ರ ದಾರಿದ್ರ್ಯ ರಾಘವನ ಮಾಯವೆನ್ನಿ ಶ್ರೀ
ಮುದ್ರೆಗಳ ಧರಿಸಿ ಹರಿದಾಸನೆನ್ನಿ ೪

ಅಣುರೇಣು ತೃಣಕಾಷ್ಠ ಪರಿಪೂರ್ಣನಹುದೆನ್ನಿ
ಎಣಿಸಲಾಗದ ಅನಂತಮಹಿಮನೆನ್ನಿ
ಸೆಣಸುವ ರಕ್ಕಸರ ಶಿರವ ಚೆಂಡಾಡುವ
ಪ್ರಣವ ಗೋಚರ ಪುರಂದರವಿಠಲನೆನ್ನಿ ೫

[ಬಿಂಬೋಪಾಸನೆಗೆ ಮುಖ್ಯವಾದ ಸರ್ವಸಮರ್ಪಣಭಾವ ಇಲ್ಲಿ ನಿರೂಪಿಸಲ್ಪಟ್ಟಿದೆ.]

ಎಡೆಯಃ—ಊಟಮಾಡುವ.

ಬೆಳ್ಪುಡೆ—ಬಿಳಿಯ ವಸ್ತ್ರ.

ಎಸೆವ—ಹೊಳೆಯುವ.

ಗೋವಳ—ಗೋಪಾಲ.

ನೀಟಾದ—ನೇರವಾದ ; ದೊರಕುವ.

ಭದ್ರನಿಧಿ—ಜಾಗರೂಕತೆಯಿಂದ ಕಾಯ್ದುಕೊಂಡ ಐಶ್ವರ್ಯ.

ಪ್ರಣವಗೋಚರ—ಓಂಕಾರಸಾಧನೆಗೆ ಸಿಗುವ ('ಪ್ರಣವೋ ಹಿ ಧನುಃ' ಇತ್ಯಾದಿಯಾದ ಮಂತ್ರ).



ನಾದನಾಮಕ್ರಿಯೆ ಚಾಪು

ಅನುಭವದಡುಗೆಯ ಮಾಡಿ, ಆದ
ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ ಪ

ತನುವೆಂಬ ಭಾಂಡವ ತೊಳೆದು ಕಟ್ಟಿ
ಮನದ ಚಂಚಲವೆಂಬ ಮುಸುರೆಯ ಕಳೆದು
ಘನವಾಗಿ ಮನೆಯನ್ನು ಬಳಿದು ಅಲ್ಲಿ
ಮಿನುಗುವ ತ್ರಿಗುಣದ ಒಲೆಗುಂಡನೆಡೆದು ೧

ವಿರಕ್ತಿಯೆಂಬುವ ಮಡಿಯನುಟ್ಟು ಪೂರ್ಣ
ಹರಿಭಕ್ತಿಯೆಂಬ ನೀರನ್ನೆಸರಿಟ್ಟು
ಅರಿವೆಂಬ ಬೆಂಕಿಯ ಕೊಟ್ಟು ಮಾಯಾ
ಮರೆವೆಂಬ ಕಾಷ್ಠವ ಮುದದಿಂದ ಸುಟ್ಟು ೨

ಶರಣೆಂಬೊ ಸಾಮಗ್ರಿ ಹೂಡಿ ಮೋಕ್ಷ
ಪರಿಕರವಾದಂಥ ಪಾಕವ ಮಾಡಿ
ಗುರು ಶರಣರು ಸವಿದಾಡಿ ನಮ್ಮ ಪುರಂ
ದರವಿಠಲನ ಬಿಡದೆ ಕೊಂಡಾಡಿ ೩

[ಅಧ್ಯಾತ್ಮಸಾಧನೆಯ ವಿವರಗಳು ಇಲ್ಲಿ ಬಂದಿವೆ.]

ಅನುಭವದಡುಗೆ—ತನ್ನ ಹೃದಯಕಮಲದಲ್ಲಿ ಸಾಧಕನು ಮಾಡುವ ಮಾನಸ ಪೂಜೆಯಿಂದ ಸಿದ್ಧವಾದ ಬಿಂಬಾಪರೋಕ್ಷದ ಅನುಭವ ; ಇದನ್ನು ಅಡುಗೆ ಯೆಂದು ಕರೆದಿದ್ದಾರೆ.

ಭಾಂಡ—ಗಡಿಗೆ, ಪಾತ್ರೆ.

ತ್ರಿಗುಣದ ಒಲೆಗುಂಡನೆಡೆದು—ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣ ಗಳೇ ಒಲೆಯ ಮೂರು ಕಲ್ಲುಗಳು.

ಅರಿವು—ಹರಿಮಾಹಾತ್ಮ್ಯದ ಜ್ಞಾನ.

ಮಾಯಾ ಮರೆವೆಂಬ ಕಾಷ್ಠವ—ಸ್ವಾತಂತ್ರ್ಯಭ್ರಮ, ಕರ್ತೃತ್ವಭ್ರಮ, ಭೋಕ್ತೃತ್ವ ಭ್ರಮ ಇವು ಮಾಯೆ ; ಅನ್ಯಥಾಜ್ಞಾನದಿಂದ ಒದಗುವ ಹರಿವಿಸ್ಮರಣೆ ಮರೆವು. ಇವನ್ನು ಕಟ್ಟಿಗೆಯಂತೆ ಸುಡಬೇಕೆಂದು ಭಾವ.

ಶರಣೆಂಬೊ—ಬಿಂಬನೇ ಪ್ರೇರಕ, ನೇಮಕ, ಮುಖ್ಯ ಕರ್ತೃ, ಮುಖ್ಯ ಭೋಕ್ತೃ ಎಂದು ಪ್ರತಿಬಿಂಬನಾದ ಜೀವನು ಬಿಂಬನಲ್ಲಿ ಮೊರೆಹೋಗುವುದು.

ಪಾಕ—ತೀವ್ರವಾದ ಮನಃಪ್ರಾವಣ್ಯ (ಹರಿಯಲ್ಲಿ).

ಹೂರಣ ಕಡುಬನು ಮಾಡಿದೆ ನಾ
ಕರಿದಾ ಹೂರಣ ಕಡುಬನು ಮಾಡಿದೆ ನಾ ಪ

ಸಾಧನವೆಂಬೊ ಚತುಷ್ಟಯದ ಕಲ್ಲಲಿ
ಸಂಶಯ ಜೀವನ ಗೋಧಿಯ ಬೀಸಿ
ನಾಭಿಯ ಅಷ್ಟಾಂಗದ ಹಸಿಕಲ್ಲಲಿ
ನಾಲ್ಕು ಶ್ರುತದ ಗುಂಡಿಲಿ ಕುಟ್ಟೀ ೧

ರೋಮದ ಮಧ್ಯದಿ ಒಲೆಗಳ ಹೂಡಿ
ಈಡಿಲ್ಲದೆ ಅಗ್ನಿಯ ತುಂಬಿ
ಮದ ಅಷ್ಟವೆಂಬೊ ಕಾಷ್ಠವ ಹಚ್ಚಿ
ಇಡಾಪಿಂಗಳೆ ಕೊಳವೆಯ ಊದಿ ೨

ಕಾರಣವೆಂಬೋ ಮಡಕೆಯೊಳಗೆ
ಕರುಣ ಕಡಲೇಬೇಳೆಯ ಹಾಕಿ
ಪೂರ್ವದಿ ಒಳಿತಾಗಿ ಕುದಿಸಿ
ಪ್ರೇಮಂ ಹೇಮದ ಸೌಟಿಲಿ ತೊಳಸಿ ೩

ಗುರು ಕರುಣವೆಂಬೋ ಬೆಲ್ಲವ ಹಾಕಿ
ಗುರುವ ನೆನೆಸುತ ಕಣಕವ ನೆಗಚಿ
ಪರಿಪರಿ ತೇಜದ ಹೂರಣ ತುಂಬಿ
ಪರಿಪರಿ ಪ್ರಣವದ ಪದವ ಪಾಡುತಲಿ ೪

ವರದನೆಂಬೆಣ್ಣೆ ಬಾಂಡ್ಲೆಯೊಳಗೆ
ಕರಹಾಮೃತದ ತುಪ್ಪವ ಹಾಕಿ
ತಿರಿ ಹೊರಗೆ ಮುರಿಗೆಯ ಕರಿದು
ಪುರಂದರವಿಠಲಗೆ ಎಡೆಯ ಮಾಡಿದೆನು ೫

[ಬಿಂಬೋಪಾಸನೆಯ ಪದ್ಧತಿಯಲ್ಲಿ ಮಾನಸಪೂಜೆಯಾದ ಮೇಲೆ ದೇವರಿಗೆ ಹೂರಣ ಕಡುಬನ್ನು ನೈವೇದ್ಯವಾಗಿ ಸಮರ್ಪಿಸುವ ವಿವರ ಇಲ್ಲಿ ಬಂದಿದೆ ಸಾಂಕೇತಿಕವಾದ ತಾತ್ಪರ್ಯ ಸ್ವಾರಸ್ಯವಾಗಿದೆ. ಕಡುಬಿನಲ್ಲಿ ಹೂರಣವೇ ಸಾರವತ್ತಾದ ಭಾಗ. ಈ ಭಾಗದಲ್ಲಿ ಅಧ್ಯಾತ್ಮದ ಪ್ರಕ್ರಿಯೆಯನ್ನು ಅಳವಡಿಸಿದ್ದಾರೆ. ಕಡುಬು ಜೀವಾತ್ಮನಾದರೆ ಅದರೊಳಗಿರುವ ಹೂರಣ ಪರಮಾತ್ಮ ]

ಸಾಧನವೆಂಬೋ ಚತುಷ್ಟಯ—(೧) ಶ್ರವಣ, ಮನನ, ನಿದಿಧ್ಯಾಸನ, ಭಕ್ತಿ ; (೨) ಜ್ಞಾನ, ವಿರಕ್ತಿ, ಭಕ್ತಿ, ಕರ್ಮ.

ಸಂಶಯ ಜೀವನ—ಸಂಶಯವೆಂಬ ಕಲಂಕವನ್ನು ಬಿಟ್ಟು ಶ್ರದ್ಧಾಮಯವಾದ ಜೀವನವನ್ನು ಪಡೆದು.

ನಾಭಿಯ ಅಷ್ಟಾಂಗ—'ನಾಭಿಚಕ್ರೇ ಕಾಯವ್ಯೂಹಜ್ಞಾನಂ' (ಪಾತಂಜಲ ಯೋಗಸೂತ್ರ) ; ಶರೀರದ ನಡುವೆ ಇರುವ ನಾಭಿಯು ಎಲ್ಲ ನಾಡಿಗಳಿಗೂ ಮೂಲಭೂತವಾದುದು, ಅಲ್ಲಿ ಅವಧಾನವನ್ನಿಡುವ ಅಷ್ಟಾಂಗಯೋಗ, ಯಮನಿಯಮಾದಿಗಳು.

ನಾಲ್ಕು ಶ್ರುತ—ನಾಲ್ಕು ಪ್ರಕಾರವಾದ ಶ್ರುತಿ ; ನಾಲ್ಕು ವೇದಗಳು.

ಮದ ಅಷ್ಟ—ಧನಮದ, ರೂಪಮದ, ವಿದ್ಯಾಮದ, ಯೌವನಮದ, ಕುಲಮದ, ಬಲಮದ, ರಾಜ್ಯಮದ, ತಪಮದ.

ಇಡಾ ಪಿಂಗಳ—ಮುಖ್ಯವಾದ ಎರಡು ನಾಡಿಗಳು ; ಸಂಸಾರ ಸ್ಥಿತಿಗೆ ಅಗತ್ಯವಾದುವು.

ಕಾರಣವೆಂಬೋ ಮಡಕೆ—ಕಾರಣಶರೀರ ; ಲಿಂಗಶರೀರ.

ಕರುಣ—ಭಗವದನುಗ್ರಹ.

ಪ್ರೇಮ—ಸುದೃಢವಾದ ಸ್ನೇಹ (ಪರಮಾತ್ಮನಲ್ಲಿ).

ಕಣಕ—ಹಿಟ್ಟು.

ನೆಗಚಿ—ಹದಮಾಡಿ (ನೆಗಳ್ಚಿ).

ಪ್ರಣವದ ಪದ—ಉದ್ಗೀಥಮಂತ್ರಗಳನ್ನು.

ಕರಹಾಮೃತ—ಅಭಿಮಂತ್ರಣ , ದೇವರನ್ನು ಬಿಜಯಮಾಡಿಸುವ ವಿಧಿ (ಆಕರಣ).

ತಿರಿ ಹೊರಗೆ—ತಿರುಗಿಸಿ ಹೊರಗೆ.

ಮುರಿಗೆ—ಹೊಸೆ, ಸುತ್ತುಹಾಕು.

## ೧೫೬

ಶ್ರೀರಾಗ | ಅಟ್ಟ

ನೀನಿರುಳಿಲ್ಲಿದ್ದಿ ಹೇಳಯ್ಯ
ಶ್ರೀನಿವಾಸಮೂರುತಿ ಗೋವಳರಾಯ ಪ

ಪಾಲಸಾಗರದಿ ಹಾವಿನ ಮೇಲೆ ತಳಿ
ರಾಲದೆಲೆಯ ಮೇಲೆರೋದೆಯ
ತೋಳಿನ ಮೇಲೆ ಗೋಪಿಯರಲಿ ಕ್ರತು
ಶಾಲೆಯೊಳರಸಿ ನೋಡಿದರಿಲ್ಲ ೧

ಕಡೆವಲ್ಲಿ ತುರುವಿಂಡುಗಳಲ್ಲಿ ಸತ್ಯ
ನುಡಿವಲ್ಲಿ ಎಡೆಗಾಣಿಸದಲ್ಲಿ
ಮಡದಿ ರುಕ್ಮಿಣಿ ಜಾಂಬವತಿಯರಲ್ಲಿ ನಿ
ನ್ನಡಿಗಳರಸಿ ನೋಡಿದರಿಲ್ಲ ೨

ಏಕಾದಶಿಯ ಜಾಗರದಲ್ಲಿ ಪುಣ್ಯ
ಲೋಕಪಾವನ ಭಾಗವತರಲ್ಲಿ
ವ್ಯಾಖ್ಯಾನ ತೆಗೆದು ನೋಡಿದರಿಲ್ಲ ಜಗ
ದೇಕ ಪುರಂದರವಿಠ್ಠಲ ೩

[ಅಧ್ಯಾತ್ಮ ಸಾಧನೆಯಿಂದ ಪರಮಾತ್ಮನು ಸಾಧಕನ ಹೃದಯಕಮಲದಲ್ಲೇ ಬಿಂಬನಾಗಿ ಅಡಗಿದ್ದಾನೆ ಎಂಬುದು ಮನದಟ್ಟಾದ ಮೇಲೆ, ಬೆಳಕು ಹರಿದು, ಸಾಧಕನು ಅವರೆಗೆ ಭಗವದಪರೋಕ್ಷಕ್ಕಾಗಿ ಪಟ್ಟ ಪಾಡೆಲ್ಲವೂ ಇರುಳಿನಂತೆ ತೋರುತ್ತದೆ. 'ಈಗ ಬೆಳಕಾದ ಮೇಲೆ ನಿನ್ನನ್ನು ಕಂಡೆ, ಇರುಳಲ್ಲಿ ಎಲ್ಲಿದ್ದೆ ?' ಎಂದು ಸಾಧಕನ ಕುತೂಹಲ. ಈಗಿರುವಲ್ಲಿಯೇ ಆಗಲೂ ಇದ್ದ ; ಆದರೆ ಇರುಳ ಕತ್ತಲೆಯಲ್ಲಿ ಕಾಣಲಿಲ್ಲ. ಮಧ್ಯಮ ವರ್ಗದ ಭಕ್ತರು ಭಗವಂತನನ್ನು ಕ್ಷೀರಸಾಗರ ಶಯನನಾಗಿ, ವಟಪತ್ರಶಾಯಿಯಾಗಿ, ಕೃಷ್ಣಾವತಾರವಿಶೇಷದಲ್ಲಿ, ಅರ್ಚಾಮೂರ್ತಿಯಾಗಿ ಹುಡುಕುತ್ತಾರೆ ; ಉತ್ತಮ ಭಕ್ತರಿಗೆ ಅವನು ಅಂತರ್ಯಾಮಿ.]

೧೫೭

ಸಾವೇರಿ ಆದಿ

ಏನು ಕೌತುಕವೊ ಕೃಷ್ಣ, ತಾನೆ ಕನಸಿನೊಳು
ಮಾನವರ ತೆರನಂತೆ ಮರುಳಾಡಿಸಿದನೆನ್ನ ಪ

ಹಿಂದೆ ಮಾಡಿದ ಪದವ ಒಂದು ಹೇಳೆಂದೆನುತ
ಮುಂದೆ ಅದರಂದವೆಲ್ಲವನು ತಾ ಪೇಳ್ದ
ಒಂದು ದೋಸೆಯು ತನಗೆ ತಂದುಕೊಡು ಎಂದೆನಲು
ತಿಂದ ಮಾಸಲು ಕೊಡೆನು ಎಂದು ಹೇಳಿದನು ೧

ಮೋಸಹೋದೆನು ನಾನು ದೋಸೆಯನು ಹರಿಗೆ ಆ
ಪೋಶನವನಿಕ್ಕದೆ ದೂಷಿಸಿದೆನು
ಮಾಸಲಾದರು ಆಹುದು ದೋಷವಿಲ್ಲೆಂದೆನುತ
ಆಸುರದ ಮಾತುಗಳ ವಾಸಿ ತೋರಿದನು ೨

ಎಳೆಯ ಪ್ರಾಯದೊಳಿರುವ ಚೆಲುವೆಯೋರ್ವಳು ಬಂದು
ಹೊಳೆಯೊಳಗೆ ಈಸಾಡಿ ನಲಿವುದನು ನೋಡಿ
ನಳಿನಮುಖಿಯನು ಮೇಲೆ ಕರೆಸಲಾ ಮೈಲಿಗೆಯ
ತೊಳಕೊಂಡು ಒಳಯಿಂಕೆ ಬಂದುದನು ಕಂಡೆ ೩

ಈ ರೀತಿ ಸಿರಿ ಸಹಿತ ವಾರಿಜಾಕ್ಷನು ಕೃಷ್ಣ
ತೋರಿದನು ಸ್ವಪ್ನ ಕಣ್ಣಾರೆ ನೋಡಿದೆನು
ಹಾರಿಹೋಯಿತು ಕಷ್ಟ ಸೂರೆಗೊಂಡೆನು ಸಿರಿಯ
ಏರಿಬಂದುದು ಸಿರಿಯ ವಾರಿಧಿಯು ಮುಂದೆ ೪

ಈ ಮಹಾ ಮೂರುತಿಯು ಧಾಮ ಪರಿಯಂತರದಿ
ಕಾಮಿಸಿ ನೋಡಿದೆನು ಸೌಮನಸ್ಯದಲಿ
ಆ ಮಹಾ ಹರಿಯು ಪರಂಧಾಮವನು ಕೈಕೊಂಡು
ಭೂಮಿಪತಿಯೆಹಾಗಿರ್ದ ಪುರಂದರವಿಠಲ ೫

[ಇದೊಂದು ಸ್ವಪ್ನಪದ. ಕನಸಿನಲ್ಲಿ ಕೃಷ್ಣನು ಕಾಣಿಸಿಕೊಂಡು ದಾಸರಿಂದ ಸೇವೆಯನ್ನು ಕೈಗೊಂಡದ್ದನ್ನು ತಿಳಿಸುತ್ತದೆ. ಸ್ವಪ್ನದೃಷ್ಟವಾದರೂ ಬಿಂಬಾಪರೋಕ್ಷವೇ ; ಆದರಿಂದ ಕಷ್ಟಗಳು ನೀಗಿದುವು, ಸೌಭಾಗ್ಯವು ಸಂದಿತು. ಜ್ಞಾನಿಗಳಿಗೆ ಅವಸ್ಥಾತ್ರಯವೂ ಏಕರೂಪವಾದುವು.]

ಶ್ರೀರಾಗ ಅಟ್ಟ

ಎರಡೂ ಒಂದಾಗದು, ರಂಗ ಪ

ಎರೆಡು ಒಂದಾಗದು ಎಂದೆಂದಿಗು ರಂಗ ಅ

ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳು
ಒಂದೆ ಗೂಡಿನಲ್ಲಿ ಇರುತಿಹವು
ಒಂದು ಪಕ್ಷಿ ಫಲಗಳನುಂಬುದು, ಮ
ತ್ತೊಂದು ಫಲಂಗಳನುಣ್ಣದು ರಂಗ ೧

ಹಲವು ಕೊಂಬೆಗೆ ಒಂದು ಹಾರಿತು ಒಂದು
ಹಲವು ಕೊಂಬೆಗೆ ಹಾರಲರಿಯದು
ಹಲವನೆಲ್ಲ ಒಂದು ಬಲ್ಲುದು ಒಂದು
ಹಲವನೆಲ್ಲವ ಅರಿಯದು ರಂಗ ೨

ನೂರೆಂಟು ಕೊಂಬೆಗೆ ಹಾರಿತು ಅದು
ಹಾರಿ ಮೇಲಕ್ಕೇರಿ ವಿಹಾರಿತು
ವಿಹಾರಿ ಪುರಂದರವಿಠಲ ನಿಮ್ಮನು
ಸೇರಿ ಸುಖಿಯಾಗಿ ನಿಂತಿತು ರಂಗ ೩

[ಬಿಂಬೋಪಾಸನೆಯಲ್ಲಿ ಬಿಂಬನಾದ ಪರಮಾತ್ಮ, ಪ್ರತಿಬಿಂಬನಾದ ಜೀವಾತ್ಮ ಎಂಬೆರಡು ತತ್ತ್ವಗಳು ಉಪಾಸ್ಯ–ಉಪಾಸಕ ಸಂಬಂಧದಲ್ಲಿ ಸೇರುತ್ತವೆ. ಅವೆರಡೂ ಒಂದೇ ಆಗಿಬಿಡುವುದು ಸಾಧ್ಯವಿಲ್ಲ. ಸಂಸಾರದಲ್ಲಾಗಲಿ ಮುಕ್ತಿಯಲ್ಲಾಗಲಿ ಬಿಂಬವು ಸ್ವತಂತ್ರವಾದುದು, ಪ್ರತಿಬಿಂಬವು ಪರತಂತ್ರವಾದುದು.]

ಒಂದು ವೃಕ್ಷದಲ್ಲಿ...—'ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನೇ ವೃಕ್ಷೇ' ಎಂಬ ಶ್ರುತಿವಚನದ ಕನ್ನಡರೂಪ ; ಆದರೆ 'ಒಂದೇ ಗೂಡಿನಲ್ಲಿ' ಎಂಬ ವಿವರ ಮೂಲದಲ್ಲಿಲ್ಲ. ಇಲ್ಲಿ ಬಹುಶಃ 'ಯತ್ರ ವಿಶ್ವಂ ಭವತ್ಯೇಕನೀಡಂ' ಎನ್ನುವ ಬೇರೆ ಶ್ರುತಿಯನ್ನು ಅಳವಡಿಸಿಕೊಂಡಿದ್ದಾರೆ.

ಒಂದು ಪಕ್ಷಿ ..—'ತಯೋರನ್ಯಃ ಸ್ವಾದ್ವತ್ತಿ, ಅನಶ್ನನ್ ಅನ್ಯಃ' ; ಪರಮಾತ್ಮನು ಸಾಕ್ಷಿಕ ಎನ್ನುವ ಭಾವ ಆದರೆ 'ಅಭಿಚಾಕಶೀತಿ' ಎನ್ನುವ ಮೂಲದ ಮಾತನ್ನು ಇಲ್ಲಿ ಬಿಡಲಾಗಿದೆ.

ಹಲವು ಕೊಂಬೆಗೆ...—ಇದು ಶ್ರುತಿಯಲ್ಲಿಲ್ಲದ ಒಕ್ಕಣೆ. ಒಂದು ಪಕ್ಷಿಯು (ಜೀವಾತ್ಮನು) ಹಲವು ಕೊಂಬೆಗಳಿಗೆ ಹಾರಿತೆಂದರೆ ಹಲವು ಜನ್ಮಗಳನ್ನೆತ್ತಿತು, ಕರ್ಮಫಲಭೋಗಕ್ಕಾಗಿ. ಮತ್ತೊಂದು (ಪರಮಾತ್ಮನು) ಜನ್ಮಗಳನ್ನು ಪಡೆಯುವುದಿಲ್ಲ.

ಹಲವನೆಲ್ಲ ಒಂದು ಬಲ್ಲುದು...—ಪರಮಾತ್ಮನು ಸರ್ವಜ್ಞ, ಜೀವಾತ್ಮನು ಅಲ್ಪಜ್ಞ ಎಂದು ತಾತ್ಪರ್ಯ.

ನೂರೆಂಟು ಕೊಂಬೆಗೆ ಹಾರಿತು ..—ಯೋಗಸಾಧನೆಯಿಂದ ನೂರೆಂಟು ನಾಡಿಗಳಲ್ಲಿ ಸಂಚರಿಸಿ ಜೀವವು ಊರ್ಧ್ವಗಾಮಿಯಾಗಿ ಸಹಸ್ರಾರದಲ್ಲಿ ಹೊಕ್ಕಿತು (ಮೇಲಕ್ಕೇರಿ ಹಾರಿತು) ಅಲ್ಲಿ ಪರಮಾತ್ಮನನ್ನು ಬಿಂಬರೂಪಿಯಾಗಿ ಅನುಭವಿಸಿ ಆನಂದವನ್ನು ಪಡೆಯಿತು.



ನಾದನಾಮಕ್ರಿಯೆ ಚಾಪು

ಸುಲಭವಲ್ಲವೊ ಮಹದಾನಂದ, ತನ್ನೊಳಗೆ ತಾ
ತಿಳಿಯೋತನಕ ಗುರುದಯೆದಿಂದ ಅ

ಬೆಕ್ಕನು ಇಲಿ ನುಂಗೋತನಕ ಕಡು
ರಕ್ಕಸಿಯು ಕಂಡು ಗಿಣಿ ನುಂಗೂತನಕ
ಮಕ್ಕಳ ಭಕ್ಷಿಸೋತನಕ ಮದ
ಸೊಕ್ಕಿದ ಕರಿಯನು ನರಿ ನುಂಗೋತನಕ ೧

ಇಬ್ಬರೊಡನೆ ಕೂಡೋತನಕ ಮುವ್ವ
ರ್ಹಬ್ಬಿದ ಬೆಟ್ಟವ ನೊಣ ನುಂಗೋತನಕ
ಒಬ್ಬಳೊಡನೆ ಸೇರೋತನಕ ಕೆಟ್ಟ
ಗುಬ್ಬಿಯ ರಾಜಹಂಸನ ಮಾಡೋತನಕ ೨

ಒಳಹೊರಗೊಂದಾಗೋತನಕ ತಾನು
ತಿಳಿದೆನೆಂಬ ಭಾವ ಬಯಲಾಗೋತನಕ
ಬೆಳಕಿನೊಳಗೆ ಕಾಣೋತನಕ ನಮ್ಮ
ಪುರಂದರವಿಠಲನ ದಯವಾಗೋತನಕ ೩

['ಸಂಧಾಯ' ಭಾಷೆಯಲ್ಲಿ ರಚಿಸಿದ ಪದ. ತಟ್ಟನೆ ಅರ್ಥವಾಗದೆ, ಒಗಟಿನಂತೆ ತೋರುವ ಮಾತುಗಳು ಗಮನವಿಟ್ಟು ನೋಡಿದರೆ ಅಧ್ಯಾತ್ಮದ ತಾತ್ಪರ್ಯ ಸ್ಫುರಿಸುತ್ತದೆ ಸಾಧನೆಯ ವಿವರಗಳನ್ನು ಹೇಳುವ ಪದ ಇದು ]

ಮಹದಾನಂದ—ಮುಕ್ತಿಯಲ್ಲಿ ಜೀವನಿಗೆ ದೊರಕುವ ಸ್ವರೂಪದ ಆನಂದ.

ತನ್ನೊಳಗೆ ತಾ . —ಬಿಂಬೋಪಾಸನೆಯ ಕ್ರಮದಿಂದ.

ಬೆಕ್ಕನು ಇಲಿ ನುಂಗೋತನಕ—ಕಾದಿದ್ದು ವಿಷಯಗಳ ಮೇಲೆ ಎರಗುವ ಇಂದ್ರಿಯಗಳನ್ನು (ಬೆಕ್ಕು) ಎಲ್ಲೆಡೆಯೂ ದಾರಿಮಾಡಿಕೊಂಡು ಹೋಗುವ ಮನಸ್ಸು (ಇಲಿ) ಪ್ರತ್ಯಾಹಾರವಿಧಾನದಿಂದ ನಿಗ್ರಹಿಸುವವರೆಗೆ.

ಕಡು ರಕ್ಕಸಿಯುನು ಕಂಡು ಗಿಣಿ ನುಂಗೋತನಕ—ಮಿಥ್ಯಾಜ್ಞಾನ, ಅನ್ಯಥಾಜ್ಞಾನ ಗಳಿಂದ ಜೀವನನ್ನು ಸಂಸಾರದಲ್ಲಿ ಸಿಲುಕಿಸುವ ಮಾಯೆಯನ್ನು (ಕಡು ರಕ್ಕಸಿ) ಭಗವದನುಗ್ರಹವೆಂಬ ಗಿಣಿಯು (ಲೀಲಾಶುಕ) ನಿಗ್ರಹಿಸುವವರೆಗೆ.

ಮಕ್ಕಳ ಭಕ್ಷಿಸೋತನಕ—ಮಾಯೆಯ ಮಕ್ಕಳಾದ ಹರಿವಿಸ್ಮರಣೆ, ಸ್ವಾತಂತ್ರ್ಯಭ್ರಾಂತಿ ಮೊದಲಾದುವನ್ನು ಭಗವದನುಗ್ರಹವೇ ಮರೆಮಾಡುವವರೆಗೆ.

ಮದ ಸೊಕ್ಕಿದ ಕರಿಯುನು ನರಿ ನುಂಗೋತನಕ—ಅಜ್ಞಾನದಿಂದ ಬಲಗೊಂಡ ಕಾಮ ವನ್ನು (ಆನೆ), ಉಪಾಯರೂಪವಾದ ಯೋಗದಿಂದ (ನರಿ) ನಿಗ್ರಹಿಸುವವರೆಗೆ.

ಇಬ್ಬರೊಡನೆ ಕೂಡೋತನಕ—ಬಿಂಬ ಪ್ರತಿಬಿಂಬಗಳು (ಜೀವಾತ್ಮ ಪರಮಾತ್ಮರು) ಏಕತ್ರ (ಹೃದಯಕಮಲದಲ್ಲಿ) ಪರಸ್ಪರ ನಿರೀಕ್ಷಣೆ ಮಾಡುವವರೆಗೆ.

ಮುವ್ವೊರ್ಹಬ್ಬಿದ ಬೆಟ್ಟವ ನೊಣ ನುಂಗೋತನಕ—ಸತ್ವ, ರಜಸ್ಸು, ತಮಸ್ಸುಗಳೆಂಬ ತ್ರಿಗುಣಗಳಿಂದ ಉಂಟಾದ ಕರ್ಮರಾಶಿಯನ್ನು (ಬೆಟ್ಟ), ಭಕ್ತಿಯೆಂಬ ಭ್ರಮರವು (ನೊಣ) ನಾಶಮಾಡುವವರೆಗೆ.

ಒಬ್ಬಳೊಡನೆ ಸೇರೋತನಕ—ಜೀವರಾಶಿಯಲ್ಲಿ ಸೇರದೆ ಜೀವರಾಶಿಗೂ ಜಡಕ್ಕೂ ನಿಯಾಮಕಳಾದ, ಈಶಕೋಟಿ ಪ್ರವಿಷ್ಟಳಾದ ಪರಮಾತ್ಮನ ಅನುಗ್ರಹಕ್ಕೆ ಕಾರಣಳಾದ ಲಕ್ಷ್ಮಿಯ ಒಲುಮೆಯನ್ನು ಪಡೆದುಕೊಳ್ಳುವವರೆಗೆ.

ಕೆಟ್ಟಗುಬ್ಬಿಯ ರಾಜಹಂಸನ ಮಾಡೋತನಕ—ಕೆಟ್ಟಗುಬ್ಬಿಯೆಂದರೆ ಸಂಸಾರಾವಸ್ಥೆ ಯಲ್ಲಿರುವ ಜೀವಾತ್ಮ; ರಾಜಹಂಸನೆಂದರೆ ಮುಕ್ತಿಯೋಗ್ಯನಾದ ಜೀವಾತ್ಮ.

ಒಳಹೊರಗೊಂದಾಗೋತನಕ—ಬ್ರಹ್ಮಾಂಡಕ್ಕೆ ನಿಯಾಮಕನಾದ ಭಗವಂತನೇ ತನ್ನ ಅಂತರ್ಯಾಮಿ, ಸರ್ವೋತ್ತಮನಾದ ಹರಿಯೇ ತನ್ನ ಬಿಂಬರೂಪೀ ಪರಮಾತ್ಮ ಎಂದು ಸಾಧಕನು ತಿಳಿಯುವವರೆಗೆ.

ತಾನು ತಿಳಿದೆನೆಂಬ ಭಾವ ಬಯಲಾಗೋತನಕ—ಜೀವನಿಗೆ ಸ್ವತಂತ್ರಕರ್ತೃತ್ವಭ್ರಮೆ ಹೋಗಿ ತಾನು ಬಿಂಬಕ್ರಿಯಾಧೀನ ಎಂಬ ಅರಿವು ಮೂಡುವವರೆಗೆ.

ಬೆಳಕಿನೊಳಗೆ ಕಾಣೋತನಕ—ಜ್ಞಾನ ಪರಿಪಕ್ವವಾಗಿ ಬಿಂಬಾಪರೋಕ್ಷವೆಂಬ ಮುಕ್ತಿಗೆ ಕಾರಣವಾಗುವವರೆಗೆ.

# ವಿರಕ್ತಿ

'ಪರಮಾತ್ಮನಲ್ಲಿ ಆಸಕ್ತಿಯಿದ್ದವರಿಗೆ ಸಂಸಾರದಲ್ಲಿ ವಿರಕ್ತಿ; ಸಂಸಾರದಲ್ಲಿ ಆಸಕ್ತಿಯಿದ್ದವರಿಗೆ ಪರಮಾತ್ಮನಲ್ಲಿ ವಿರಕ್ತಿ' ಎಂಬ ಮಾತಿದೆ. ಪರಮಾತ್ಮನ ಸಾಕ್ಷಾತ್ಕಾರಕ್ಕೆ ಮೊದಲ ಹೆಜ್ಜೆಯೇ ವಿರಕ್ತಿ. ಸಾತ್ತ್ವಿಕ ವರ್ಗಕ್ಕೆ ಸೇರಿದ ಜೀವರುಗಳಿಗೆ ಸಂಸಾರದ ದುಃಖದ ಅರಿವಿನಿಂದ (ದೋಷದರ್ಶನ) ಸಂಸಾರ ದಲ್ಲಿ ಹೇಯಬುದ್ಧಿ ಒದಗುತ್ತದೆ ; ಅದರಲ್ಲಿ ತೊಡಗಿರಬೇಕೆಂಬ ತವಕ ತಪ್ಪು ತ್ತದೆ. ವಿಷಯಗಳಿಗೆ ವಿಮುಖವಾಗಿರುವುದೇ (ವಿ-ರಕ್ತಿ) ವಿರಕ್ತಿಯ ಮುಖ್ಯ ಲಕ್ಷಣವಾದರೂ, ವಿಷಯವಾಸನೆ ಮನಸ್ಸಿನಿಂದ ತೊಲಗಿ ಹೋಗುವವರೆಗೆ ವಿಷಯವೈಮುಖ್ಯ ದೃಢವಾಗುವುದಿಲ್ಲ ; ವಿರಕ್ತಿ ಫಲಕಾರಿಯಾಗುವುದಿಲ್ಲ. ಸ್ವಾನುಭವ (ತಮ್ಮ ಅನುಭವದಲ್ಲೇ ಬಂದ ಸಂಸಾರದ ಅಸಾರತೆ, ದುಃಖ ಸ್ವರೂಪ) ಆರಂಭಕವಾದುದು ; ಆದರೆ ಮನಸ್ಸನ್ನು ಹಿಡಿತದಲ್ಲಿ ತರುವುದು ತುಂಬ ಕಷ್ಟ. ಅದಕ್ಕೆ ಮುಂದಿನ ಸಂಸ್ಕಾರಗಳು ಅಗತ್ಯ. ಗುರೂಪದೇಶ ವನ್ನು ಪಡೆದು, ಸಚ್ಛಾಸ್ತ್ರಶ್ರವಣ ಮಾಡಿ, ಯುಕ್ತ್ಯನುಸಂಧಾನದಿಂದ ಪರಮಾತ್ಮನ ಮಾಹಾತ್ಮ್ಯೆಯನ್ನು ಅರಿತುಕೊಂಡು ಹರಿಯ ಕೃಪಗಾಗಿ ಕಾತರಪಡುವುದು ವಿರಕ್ತಿಯಲ್ಲಿ ಸೇರಿಬರುತ್ತದೆ.

ಸಚ್ಛಾಸ್ತ್ರಶ್ರವಣವು ಮನನಶಕ್ತಿ ಒದಗುವವರೆಗೆ ಮುಂದುವರಿಯ ಬೇಕು. ಶಾಸ್ತ್ರದಲ್ಲಿ ನಿರ್ಣೀತವಾದುದನ್ನು ಅನುಚಿಂತನಮಾಡುವುದು ಮನನ (ಖಂಡಸ್ಮೃತಿ), ಯುಕ್ತ್ಯನುಸಂಧಾನ. ಶ್ರವಣದಿಂದಲೂ ಮನನ ದಿಂದಲೂ ನಿರ್ಣೀತವಾದುದನ್ನು ಬೇರೂರಿಸಿಕೊಳ್ಳಬೇಕಾದರೆ ಧ್ಯಾನದ ಅಗತ್ಯವಿದೆ. ಧ್ಯಾನಶಕ್ತಿ ಒದಗುವವರೆಗೆ ಮನನ ಮುಂದುವರಿಯ ಬೇಕು, ಧ್ಯಾನವೆಂದರೆ ನಿರಂತರವಾದ ಅನುಚಿಂತನ (ಅಖಂಡಸ್ಮೃತಿ), ನಿದಿಧ್ಯಾಸನ. ಹೀಗೆ ಶ್ರವಣ, ಮನನ, ನಿದಿಧ್ಯಾಸನಗಳೆಂಬ ಮೂರು ಹೆಜ್ಜೆಗಳಲ್ಲೂ ವಿರಕ್ತಿ ಸೇರಿಕೊಂಡು ಬರಬೇಕು. ವಿರಕ್ತಿಯಿಲ್ಲವಾದರೆ ಭಕ್ತಿ ಯಿಲ್ಲ. ಭಕ್ತಿಯಿಲ್ಲದೆ ಹರಿಪ್ರಸಾದವಿಲ್ಲ ಹರಿಪ್ರಸಾದವಿರದೆ ಶ್ರವಣ ಮನನ, ನಿದಿಧ್ಯಾಸನಗಳಿಗೆ ಫಲವಿಲ್ಲ. ಆದ್ದರಿಂದ ವಿರಕ್ತಿ, ಪರಮಾತ್ಮರತಿ ಎರಡನ್ನೂ ಕೂಡಿಸಿಕೊಂಡೇ ಸಾಧನೆ ಸಾಗಬೇಕು.

ಭಕ್ತಿಯು ವಿರಕ್ತಿಯಿಂದ ದೃಢವಾಗಿ ಮಾಹಾತ್ಮ್ಯಜ್ಞಾನದಿಂದ ತೊಳ ಗುವುದೆಂದು ವ್ಯಾಸರಾಯಸ್ವಾಮಿಗಳ ನಿರೂಪಣ. 'ಗಾಳಿಗಿಕ್ಕಿದ ದೀವಿಗೆ ಯಂತೆ ದೇಹ' ಎಂದು ಮನದಟ್ಟಾಗುವುದು ವಿರಕ್ತಿ. ಅವರ ಗುರುಗಳಾದ ಶ್ರೀಪಾದರಾಜರೂ

'ಭಕ್ತಿಬೇಕು ವಿರಕ್ತಿಬೇಕು
ಶಕ್ತಿಬೇಕು ಮುಂದೆ
ಮುಕ್ತಿಯ ಬಯಸುವಗೆ'

ಎಂದು ಉಪದೇಶಿಸಿದರು. ವಿರಕ್ತಿಯು ಬಲಿತವನು ಇರುವ ಪರಿಯನ್ನು ಅವರು ಸರಳವಾಗಿ "ಇಟ್ಟ್ಯಾಂಗೆ ಇರುವೆನೊ ಹರಿಯೆ ಎನ್ನ ಧೊರೆಯೆ"

ಎಂದು ನಿರ್ದೇಶಿಸಿದರು. ಇದು 'ಅಲಂಬುದ್ಧಿ'ಯೆನಿಸಿಕೊಳ್ಳುತ್ತದೆ. ಇದ್ದದ್ದು ಸಾಕು, ಬಂದದ್ದು ಬರಲಿ; ಇಲ್ಲವೆನ್ನುವುದಿಲ್ಲ, ಬೇಕೆಂದು ಬಯಸುವುದಿಲ್ಲ. ಕೊಡುವವನು ಹರಿ, ಉಳಿಸುವವನೂ ಅವನೇ, ಕೆಡಿಸುವವನು ಅವನೇ. ಅವನೇ ಎಲ್ಲವನ್ನೂ ಬಲ್ಲ.

'ನಾ ನಿನಗೇನು ಬೇಡುವುದಿಲ್ಲ ಎನ್ನ
ಹೃದಯಮಂಟಪದಲ್ಲಿ ನಿಂದಿರೊ ಕೃಷ್ಣ'

ಶ್ರೀಪಾದರಾಜರ ಈ ಧೋರಣೆಯನ್ನು ವ್ಯಾಸರಾಯಸ್ವಾಮಿಗಳೂ ಎತ್ತಿ ಹಿಡಿದರು, ಪುರಂದರದಾಸರೂ ಹಾಡಿಹೊಗಳಿದರು.

ಆದರೆ ವಿರಕ್ತಿಯೆಂದಮಾತ್ರಕ್ಕೆ ಸಂಸಾರವನ್ನು ಕಡೆಗಣ್ಣಿಂದ ಕಾಣುವುದು ಹರಿದಾಸರ ತಾತ್ಪರ್ಯವಲ್ಲ. "ಸಂಸಾರವೆಂಬಂಥ ಭಾಗ್ಯವಿರಲಿ" ಎಂದು ಪುರಂದರದಾಸರೇ ಹೇಳಿದರಷ್ಟೆ. ಅವರ ಗುರುಗಳಾದ ವ್ಯಾಸರಾಯಸ್ವಾಮಿಗಳು "ಸಂಸಾರವೆಂಬ ಮಾರಿಗೆ ಸಿಲುಕಿದೆ"ನೆಂದುಕೊಂಡರೂ "ಕಂಸಾರಿಯೆಂದು ಸಂಸಾರ ದಾಟುವೆ"ನೆಂಬ ದಿಟ್ಟತನವನ್ನು ತೋರಿದರು. ದಿಟವಾಗಿ ಸಂಸಾರವೆನ್ನುವುದು ಹರಿಯ ಸಂಕಲ್ಪದಿಂದಲೇ ಒದಗಿರುವ ವಿವರ. ಜೀವರುಗಳ ಸ್ವರೂಪ, ಯೋಗ್ಯತೆಗಳನುಸಾರವಾಗಿ ತ್ರಿಗುಣಾತ್ಮಕವಾದ ಲಿಂಗದೇಹ ಸಂಬಂಧವನ್ನು ಉಂಟುಮಾಡಿಸುವವನು ಹರಿಯೇ. ಇದರಿಂದ ಬಂಧಕವಾದ ಸುಖದುಃಖಾನುಭವದ ಸಂಸಾರ. ಆದರೆ ಜೀವನಿಗೆ ಬಂಧಕವಾಗಿಯೇ ಸಂಸಾರವೆಂದಲ್ಲ; ಸಂಸಾರದ ಅಸಾರತೆಯನ್ನು ಅರಿತುಕೊಂಡು ಸ್ವಾತಂತ್ರ್ಯಭ್ರಮವನ್ನು ಜೀವನು ನೀಗಿಕೊಳ್ಳಲೆಂದೂ ಸಂಸಾರ ಏರ್ಪಟ್ಟಿದೆ. ಸಂಸಾರವೇ ಮುಕ್ತಿಗೆ ನೆರವಾಗಬಲ್ಲುದು. ಆದ್ದರಿಂದ ಮನುಷ್ಯನಿಗೆ ದೊರೆತಿರುವ ಶರೀರ 'ಸಾಧನ ಶರೀರ'; ಇದಿಲ್ಲದೆ ಜೀವನು ತನ್ನ ಸ್ವರೂಪ ಸಾಕ್ಷಾತ್ಕಾರದಿಂದ ಬಿಂಬಾಪರೋಕ್ಷವನ್ನು ಮಾಡಿಕೊಳ್ಳುವುದು ಸಾಧ್ಯವಿಲ್ಲ.

ಈ ದೃಷ್ಟಿಯಿರುವುದರಿಂದ ಹರಿದಾಸರು ವಿರಕ್ತರಾದರೂ ಸಂನ್ಯಾಸಿಗಳಾಗುವುದಿಲ್ಲ; ಗೃಹಸ್ಥರಾಗಿಯೇ ಉಳಿದು, ವಿಧಿವಿಹಿತವಾದ ಕರ್ಮಗಳನ್ನು ಮಾಡುತ್ತ ಬಾಳನ್ನು ಕಳೆಯುತ್ತಾರೆ. ಸಂಸಾರದ ದೋಷವನ್ನು ಎತ್ತಿ ಆಡಿದರೂ, ಸಂಸಾರದ ಗುಣವನ್ನೂ ಹಾಡಿ ಹೊಗಳುತ್ತಾರೆ. ಸಂಸಾರದಲ್ಲಿಯೇ ಇದ್ದುಕೊಂಡು ಸಾಧನೆ ಮಾಡಬೇಕಾದ ಅಗತ್ಯವಿರುವುದರಿಂದ ಸಂಸಾರದ ಎಲ್ಲ ವಿವರಗಳನ್ನೂ ಸಾಧನೆಯ ಅಂಗಗಳಾಗಿ ಮಾರ್ಪಡಿಸಿಕೊಳ್ಳುವುದು ಅವರ ನಿಲುವು. ಆದರೆ ಇಂದ್ರಿಯಜಯ, ಅರಿಷಡ್ವರ್ಗಗಳ ನಿಗ್ರಹ, ಅಹಂಕಾರ ಮಮಕಾರ ತ್ಯಾಗ, ಸಂಸಾರದ ಅಸಾರತೆಯ ಅರಿವು ಇವು ವಿರಕ್ತಿಯ ಮುಖಗಳಾಗಿ ಸಂಸಾರ ಪ್ರಸಂಗದಲ್ಲಿ ಸೇರಿಕೊಳ್ಳಬೇಕು. ಸಂಸಾರದಲ್ಲಿ ವಿರಕ್ತಿ ಹೆಚ್ಚಿದುದಕ್ಕೆ ಹರಿಯಲ್ಲಿ ಭಕ್ತಿ ಬೇರೂರುವುದೇ ಫಲವಾಗಬೇಕು. ವಿರಕ್ತಿಗೆ ಸ್ವತಂತ್ರವಾದ ಪ್ರಯೋಜನವಿರದು; ಭಕ್ತಿಗೆ ಉಪಕಾರಕವಾಗಿ ಅದರ ಬೆಲೆ. ಭಕ್ತಿಯ ಕಡೆ ಗಮನವಿರದ ವಿರಕ್ತಿಯನ್ನು ಹರಿದಾಸರು ಒಪ್ಪುವುದಿಲ್ಲ, ನೆಚ್ಚುವುದಿಲ್ಲ, ಮೆಚ್ಚುವುದಿಲ್ಲ.

ಮಧ್ಯಮಾವತಿ ಆದಿ

ತಾಸು ಬಾರಿಸುತಿದೆ ಕೇಳಿ, ಹರಿದಾಸರೆಲ್ಲ ಪ

ಶ್ರೀಶನ ಭಜನೆಯ ಮಾಡದ ಮನುಜನ
ಆಯುಷ್ಯ ವೃಥಾ ಹೋಯಿತು ಎಂದು ಅ

ಹಾಸು ಮಂಚ ಸುಪ್ಪತ್ತಿಗೆಯಲ್ಲಿ ಹಗಲು ಇರುಳು
ಹೇಸರ ಕತ್ತೆಯಂತೆ ಹೊರಳಿ ಸ್ತ್ರೀಯರ ಕೂಡಿ
ಬೇಸರದೆ ನಿತ್ಯ ಉರುಳಿ ಈ ಪರಿಯಿಂದಲಿ ಮಾನುಷ ಆಯುವು
ವೃಥಾ ಹೋಯಿತು ಹೋಯಿತು ಎಂದು ೧

ವಾರ್ಧಕ್ಯ ಬಾಲ್ಯ ಕೆಲವು ಕಾಲ ವಿವೇಕವಿಲ್ಲದ
ಬುದ್ಧಿಮಾಂದ್ಯ ಕೆಲವು ಕಾಲ ಅಜ್ಞಾನದಿಂದ
ನಿದ್ರೆಯಿಂದಲಿ ಅತಿಲೋಲ ಈ ಪರಿಯಿಂದಲಿ ಕಾಲನ ಮನೆಯು
ಸಮೀಪವಾಯಿತು ಆಯಿತು ಎಂದು ೨

ಕಂಡ ಕಂಡ ವಿಷಯವ ಕಾಮಿಸಿ ಕಷ್ಟವ ಪಡದೆಲೆ
ತಾಂಡವ ಶ್ರೀಕೃಷ್ಣನ ಭಜಿಸಿ
ಪುಂಡರೀಕಾಕ್ಷನ ಪುರಾಣಪುರುಷನ
ಪುರಂದರವಿಠಲನ ಭಜಿಸಿ ಬದುಕು ಎಂದು ಢಂಢಣಾ ಢಣರೆಂದು ೩

[ಪರಮಾತ್ಮನ ಸ್ಮರಣೆಯನ್ನು, ಭಜನೆಯನ್ನು ಮಾಡುವುದೇ ಸಾಧನಶರೀರ ಒದಗಿ ಬಂದುದರ ಪ್ರಯೋಜನ. ಅವನ ಅನುಗ್ರಹವನ್ನು ಸಂಪಾದಿಸಿ ಸಂಸಾರದ ಕಷ್ಟ ಕೋಟಲೆಗಳಿಂದ ಪಾರಾಗಿ, ಜೀವನು ತನ್ನ ಸ್ವರೂಪಸಾಕ್ಷಾತ್ಕಾರವನ್ನು ಪಡೆದುಕೊಳ್ಳ ಬೇಕು. ಇದನ್ನರಿಯದೆ ವಿಷಯಭೋಗಗಳಲ್ಲೇ ತೊಡಗಿ ಜೀವನವನ್ನು ಹಾಳು ಮಾಡಿಕೊಂಡರೆ ಜನ್ಮ ವ್ಯರ್ಥವಾಯಿತು. ಒಂದು ಗಂಟೆ ಕಳೆದೊಡನೆ ಗಂಟೆ ಬಾರಿಸು ತ್ತದೆ ; ಒಂದು ಗಂಟೆ ಕಳೆದುಹೋಯಿತೆಂದು. ನಮ್ಮ ಆಯುಸ್ಸಿನಲ್ಲೇ ಒಂದು ಗಂಟೆ ಕಳೆದುಹೋಗುವುದು!]

ಬೇಗಡೆ　　　　　　　　　　　　　　　　　　　　　　　　　　　　　　ಅಟ್ಟ

ಜತನ ಮಾಡೊ ಜೀವನವ ಮುಂದೆ
ಮತಿಭ್ರಷ್ಟನಾಗಿ ನೀ ಕೆಡಬೇಡ ಮನುಜ　　　　ಪ

ಅಸ್ಥಿ ಮಲ ಮಾಂಸಾದಿಮೂತ್ರ ಅದರ
ಸುತ್ತಿಕೊಂಡಿರುವೋದು ಆ ಮರದ ಬಳ್ಳಿ
ಇಟ್ಟೆಡೆಯಲಿ ಬಾಹೋ ರಭಸ ಅದರ
ಹುಟ್ಟು ನೋಡಿದರೆ ಕುಂಬಾರನ ತಿಮರಿ　　　　೧

ಹಿಂದೆ ತಗರು ಮುಂದೆ ಬಾವಿ ಅದರ
ಸಂದಣಿಸುವ ಎಡಬಲದಿ ಮದ್ದಾನೆ
ಒಂದಕ್ಕೆ ಒಂದು ಸಾಧನವು ಅದರ
ಮುಂದೆ ನೋಡಿದರೆ ತಾನದ ಸೋನೆ　　　　೨

ಹಮ್ಮು ಹಂಕಾರ ಈಡ್ಯಾಡು ಪರ
ಬೊಮ್ಮಾನಂದದಲ್ಲಿ ತೇಲಿ ಮುಣುಗಾಡು
ನಿನ್ನಲ್ಲಿ ನೀ ತಿಳಿದುನೋಡು ಪ್ರ
ಸನ್ನ ಶ್ರೀ ಪುರಂದರವಿಠಲನ್ನ ಕೂಡು　　　　೩

ಜತನ ಮಾಡೊ—ಜಾಗ್ರತೆಯಿಂದ ಕಾಪಾಡು.
ಮರದ ಬಳ್ಳಿ—ಜೀವನಸೂತ್ರ; ಪ್ರಾಣವೆಂಬ ನೂಲು.
ಇಟ್ಟೆಡೆ—ನೂಕುನುಗ್ಗಲು; ಕಿರಿದಾದ ಜಾಗದಲ್ಲಿ ಜನಸಂದಣಿ.
ತಿಮರಿ—ಚಕ್ರ.
ತಗರು—ಟಗರು; ಹಿಂದಿನಿಂದ ತಿವಿಯಲು ಬರುತ್ತಿದೆ; ಬಲವಾಗಿರುವ ಕರ್ಮ.
ಬಾವಿ—ಗತಿಯೇನೆಂದು ತಿಳಿಯದ ಹಳ್ಳ.
ಮದ್ದಾನೆ—ರಾಗದ್ವೇಷಗಳು.
ತಾನದ ಸೋನೆ—ಸಂಸಾರದ ಸುರಿಮಳೆ.
ಹಮ್ಮು ಹಂಕಾರ—ನಾನೇ ಮಿಗಿಲಾದವನೆಂಬ ಹೆಮ್ಮೆ, ನನಗಾಗಿ ಎಲ್ಲ ಎಂಬ ಅಹಂಕಾರ.
ಈಡ್ಯಾಡು—ಕಿತ್ತು ಬಿಸಾಡು.
ನಿನ್ನಲ್ಲಿ—ನಿನ್ನ ಹೃದಯಕಮಲದಲ್ಲಿ ಬಿಂಬರೂಪೀಪರಮಾತ್ಮನನ್ನು.

ಕಾಂಬೋದಿ ಝಂಪೆ

ಈ ಸಿರಿಯ ನಂಬಿ ಹಿಗ್ಗಲಿಬೇಡ ಮನವೇ ಪ

ವಾಸುದೇವನ ಭಜಿಸಿ ಸುಖಿಯಾಗು ಮನವೇ ಅ

ಮಡದಿ ಮಕ್ಕಳು ಎಂದು ಪಡವೆ ವಸ್ತುಗಳೆಂದು
ಸಡಗರದಿ ತಾ ಕೊಂಡು ಭ್ರಮಿಸಲೇಕೆ
ಬಿಡದೆ ಯಮನಾಳುಗಳು ಬಾ ಎಂದು ಎಳೆವಾಗ
ಮಡದಿ ಮಕ್ಕಳು ಕಡೆಗೆ ತೊಲಗುವರೊ ಮರುಳೆ ೧

ನೆಂಟರೊರಿಗೆ ಪೋಗಿ ನಾಲ್ಕು ದಿನವಿದ್ದರೆ
ಎಂಟು ದಿನದಾಯಾಸ ಪೋಗುವಂತೆ
ಉಂಟು ಸೌಭಾಗ್ಯವೆಂತೆಂಬ ಧೈರ್ಯವ ಬಿಟ್ಟು
ವೈಕುಂಠನ ಭಜಿಸು ನೀ ಭ್ರಷ್ಟಮನವೆ ೨

ಉಂಟು ಆಶ್ರಯವೆಂದು ಬಡವನ ಕರೆತಂದು
ಕೊಟ್ಟು ಮಾಡಿದ ಧರ್ಮಫಲ ತನ್ನದು
ಇಷ್ಟಮೂರುತಿ ನಮ್ಮ ಪುರಂದರವಿಠಲನ
ನಿಷ್ಠೆಯಿಂದಲಿ ಭಜಿಸು ದುಷ್ಟಮನವೆ ೩

ಸಿರಿಯ—ಪ್ರಾಪಂಚಿಕ ಸಂಪತ್ತನ್ನು.

ಉಂಟು ಸೌಭಾಗ್ಯವೆಂತೆಂಬ—ಪ್ರಪಂಚದ ವಿಷಯಭೋಗದಲ್ಲಿ ಸುಖವಿದೆಯೆಂದು.

ವೈಕುಂಠನ—ಪರಮಾತ್ಮನ (ಯಾವ ಕೊರತೆಯೂ ಇಲ್ಲದಿರುವುದು ವಿಕುಂಠ, ಅದರ ಭಾವ ವೈಕುಂಠ).

ಕಾಂಬೋದಿ ಆದಿ

ಬರಿದೆ ನೀ ಬಯಸದಿರಿಹಲೋಕ ಸುಖವೆಂಬೊ
ಅರಗಿನ ಪಾಯಸವ ಪ

ಕರಣಶುದ್ಧದಿ ಗಳಿಸು ಪರಲೋಕ ಸುಖವೆಂಬ
ಶ್ಯಾವಿಗೆ ಪಾಯಸವ ಹೇ ಮನವೆ ಅ

ಮುಂದುವರಿಯದೆ ಬಾಳ್ವ ಮೂಢ ನೃಪನ ಸೇವೆ
ಮುಗ್ಗು ರಾಗಿಯ ಹಿಟ್ಟು
ಮಂದಮತಿಗಳೊಳು ಸ್ನೇಹವ ಮಾಡಲು
ನೀ ಪೋಗುವೆ ಕೆಟ್ಟು
ಸಂದೇಹವಿಲ್ಲದೆ ದೊಡ್ಡ ಮಾರ್ಗದಲಿ ಮು
ಕುಂದನಂಘ್ರಿಯ ಕಟ್ಟು ಹೇ ಮನವೆ ೧

ಅಗ್ಗದಾಸೆಗೆ ಸಂಗ್ರಹಿಸಬೇಡಘವೆಂಬ
ಅಡಿಗಂಟು ದವಸವನು
ನುಗ್ಗಲೊತ್ತಿ ಕಾಮಾದಿಗಳನು ಸಂಪಾದಿಸು
ಸತ್ಕರ್ಮವೆಂಬುದನು
ಯೋಗ್ಯರಡಿಗೆ ಶುದ್ಧ ಮನದಿಂದ ಕಾರ್ಮುಕ
ದಂದದಲಿ ಶಿರವನು
ಬಗ್ಗಿ ನಡೆದು ಪರಿಹರಿಸಿ ಕಾಡುವ
ಸಂಸಾರ ಭಂಗವನು ಹೇ ಮನವೆ ೨

ಸಕ್ಕರೆ ಘೃತಪಾಲಿನಿಂದತಿಶಯ ರುಚಿಯೆಂ
ದೆಸೆವೀ ಹರಿಕಥೆಯ
ಚೊಕ್ಕ ಬುದ್ಧಿಯಿಂದ ಸಂಪಾದಿಸು ತೊರೆ
ಅಲ್ಪರ ಸಂಗತಿಯ
ಸೊಕ್ಕೊಳಿತಲ್ಲ ಕೇಳೆಲೊ ಮದಡಾತ್ಮನೆ
ಸ್ವಾಮಿ ಸೇವಕ ಸ್ಥಿತಿಯ
ಘಕ್ಕನರಿತು ಸೇರು ಪುರಂದರವಿಠಲನ್ನ
ಚರಣಕಮಲದ್ಯುತಿಯ ಹೇ ಮನವೆ ೩

ಅರಗಿನ ಪಾಯಸ—ನೋಡಲು ಪಾಯಸದಂತೆ ಕಂಡರೂ, ಪಾಯಸವಲ್ಲದೆ ಮಾರಕವಾದುದು.

ಕರಣಶುದ್ಧದಿ—ಅಂತಃಕರಣ ಶುದ್ಧಿಯಿಂದ.

ಮುಂದುವರಿಯದೆ—ಆಧ್ಯಾತ್ಮಿಕವಾಗಿ ಪ್ರಗತಿಹೊಂದದೆ.

ಅಘ—ಪಾಪ.

ಕಾರ್ಮುಕ—ಬಿಲ್ಲು.

ಮದಡಾತ್ಮ—ಮರುಳ.

ಚರಣಕಮಲದ್ಯುತಿ—ಅಡಿದಾವರೆಗಳ ಬೆಳಕು ; ಪರಮಾತ್ಮನ ಅನುಗ್ರಹವೆಂಬ ಅನುಕೂಲ್ಯ.



ಕಾಂಬೋದಿ ಝಂಪೆ

ಇಂದ್ರಿಯಂಗಳ ಸುಖವ ನೆಚ್ಚದಿರು ಕಂಡ್ಯ
ಇಂದ್ರಾದಿಲೋಕವೆಲ್ಲವು ಕಾಲ ಕಂಡ್ಯ
ಎಂದಿನಂತಲ್ಲ ಈ ದೇಹ ಕಳೆಕಂಡ್ಯ
ಹಿಂದು ಮುಂದಣ ಗತಿಯ ಅರಿತಿಹುದು ಕಂಡ್ಯ ೧

ಎಳೆ ತುಳಸಿ ವನಮಾಲೆ ಧರಿಸಿಕೊಳಬೇಕು
ಘಳಿಲನೇ ಹರಿಯ ಪೂಜಿಸುತಿರಲು ಬೇಕು
ಕಳಕಳನೆ ಏಕಮನ ಕರಗುತಿರಬೇಕು
ನಳಿನನಾಭನ ಪಾದ ಪೊಗಳುತಿರಬೇಕು ೨

ಹರಿಕೃಷ್ಣ ಶರಣೆನ್ನು ಅದು ನಿಮಗೆ ಲೇಸು
ಹರಿಕಥಾಮೃತವನ್ನೆ ಜಗದೊಳಗೆ ಸೂಸು
ಹರಿಭಕ್ತಿಯಿಲ್ಲದವರ ಸಂಗಕ್ಕೆ ಹೇಸು
ಹರಿಯ ಮರೆತರೆ ಮುಂದೆ ನರಕದೊಳಗ್ಹಾಸು ೩

ದುರ್ಜನರ ಮನೆಯೊಳಿಹ ಹಾಲ ಸವಿಗಿಂತ
ಸಜ್ಜನರ ಮನೆಯೊಳಿಹ ನೀರು ಲೇಸು
ದುರ್ಜನರ ಸಂಗದೆಡೆ ಕೂಡಿಯಾಟದಕಿಂತ
ಸಜ್ಜನರ ಕೂಡೆ ಕಾದಾಡುವುದೆ ಲೇಸು ೪

ಹರಿಯನೇ ಅನವರತ ನೆನೆಯುತಿರಬೇಕು
ಕರಗಳಲಿ ಹರಿಯ ಪೂಜಿಸುತಿರಲು ಬೇಕು
ಚರಣಂಗಳಲಿ ಪುಣ್ಯಸ್ಥಳವ ಮೆಟ್ಟಲು ಬೇಕು
ಪುರಂದರವಿಠಲನ್ನ ನೆನೆಯುತಿರಬೇಕು ೫

ಇಂದ್ರಾದಿಲೋಕವೆಲ್ಲವು ಕಾಲ—ಒಂದು ಕಾಲದಲ್ಲಿ ಇರುವುದು, ಇನ್ನೊಂದು ಕಾಲದಲ್ಲಿ ಹೋಗುವುದು, ಪುಣ್ಯವಿರುವಷ್ಟು ಕಾಲ ಸ್ವರ್ಗ, ಅದು ತೀರಿತೆಂದರೆ ಮತ್ತೆ ಭುವಿ
ಘಳಿಲನೆ—ಬೇಗನೆ.
ಸೂಸು—ಸಿಂಪಡಿಸು.
ಹಾಸು—'ಪಾಶ'ದ ತದ್ಭವ; ಕುತ್ತಿಗೆಗೆ ಬಿಗಿಯುವ ಹಗ್ಗ.

## ೧೬೫

ಆನಂದಭೈರವಿ ಆದಿ

ಸಾಕು ಸಂಸಾರ ನಮಗಿನ್ನೇತರ ಒಗೆತನ ಪ

ಲೋಕದೊಳಗೆ ಎನ್ನ ಬೇಕೆಂಬುವರಿಲ್ಲ ವಿ
ವೇಕಿ ಪುರುಷ ಪರವಶನಾದರೆ ಏತರ ಸಂಸಾರ ಅ

ಕಾಮವೆಂಬೊ ನೆಗೆಹೆಣ್ಣು ಎನ್ನ ಕಟ್ಟಿ ಆಳುತಾಳೆ
ಕ್ರೋಧವೆಂಬ ಸವತಿ ಕೊಲ್ಲುತಾಳೆ ಏತರ ಒಗೆತನ ೧

ಮದವೆಂಬ ಮೈದುನ ಎನ್ನ ಒಡನೆ ನಗುತಾನೆ
ಮತ್ಸರವೆಂಬ ಭಾವ ಎನ್ನ ತುಚ್ಛವು ಮಾಡುತಾನೆ ಏತರ ಒಗೆತನ ೨

ಮೋಹವೆಂಬ ಅತ್ತಿಗೆಯೆನ್ನ ಕೊಂಡು ಮುಣುಗುತಾಳೆ
ಲೋಭವೆಂಬೊ ನಾದಿನಿ ಒರಸುತಾಳೆ ಏತರ ಒಗೆತನ ೩

ಅಜ್ಞಾನವೆಂಬೊ ಅತ್ತೆ ಎನ್ನ ಅಟ್ಟಿ ಬಡಿತಾಳೆ
ಸುಜ್ಞಾನಿ ಮಾವ ಕುರುಡನಾದರೆ ಏತರ ಒಗೆತನ ೪

ತಾಪತ್ರಯದಲ್ಲಿ ನಾನು ತೇಲಿ ಮುಣುಗುತ್ತೇನೆ
ಆಪತ್ತು ಪರಿಹರಿಸುವ ಪುರಂದರವಿಠಲ ಏತರ ಒಗೆತನ ೫

ಒಗೆತನ—ಒಗತನ, ಗಂಡಹೆಂಡಿರು ಅನ್ಯೋನ್ಯವಾಗಿದ್ದುಕೊಂಡು ಬಾಳುವುದು.

ನೆಗೆಹೆಣ್ಣು—ಒಂದೆಡೆಯಿಂದ ಇನ್ನೊಂದೆಡೆಗೆ ನೆಗೆಯುವ ಹೆಣ್ಣು ; ಚಂಚಲೆ.

ಕಾಮವೆಂಬೊ...—ಸಂಸಾರಿಯಾದ ಜೀವನಿಗೆ ಬಯಕೆ ಅಥವಾ ಕಾಮವೆಂಬುದು ಹೆಂಡತಿ ; ಯಾವಾಗಲೂ ಜೊತೆಯಲ್ಲಿ ಇರುವುದು. ಕಾಮದೊಂದಿಗೆ ಕ್ರೋಧ, ಕಾಮವು ಕೈಗೂಡದಿದ್ದರೆ ; ಆದ್ದರಿಂದ ಸಿಟ್ಟು ಸವತಿಯಂತೆ. ಕಾಮದೊಂದಿಗೇ ಹುಟ್ಟಿಕೊಂಡು ಕಾಡುವುದು ಮದ ; ಮತ್ಸರವೂ (ಅಸೂಯೆ) ಕಾಮದ ಸೋದರನೇ. ಕಾಮಕ್ಕಿಂತ ಮೊದಲೇ ಹುಟ್ಟಿಕೊಂಡಿರುವುದು ಮೋಹ (ತತ್ತ್ವವನ್ನು ತಿಳಿಯದಂತೆ ಮಾಡುವ ಭ್ರಮೆ).

ಕಾಮದನಂತರ ತೋರಿಕೊಳ್ಳುವುದು ಲೋಭ (ಅತಿಯಾಸೆ). ಕಾಮದ ಉಗಮಸ್ಥಾನ 'ಆದ್ಯನ್ಯಥಾಜ್ಞಾನ' (ಅಜ್ಞಾನ). ಪರಮಾತ್ಮನ ಸಂಕಲ್ಪ ದಿಂದಲೇ ಅಜ್ಞಾನ ಒದಗುವುದು ; ಜೀವರ ಉದ್ಧಾರಕ್ಕಾಗಿಯೇ. ಆದರೆ ಈ ಅರಿವು ಇಲ್ಲದಿರುವುದು ಹರಿಯ ವಿಸ್ಮರಣೆಯಿಂದ ('ಸುಜ್ಞಾನಿ ಕುರುಡ).

ತಾಪತ್ರಯ—ಆಧ್ಯಾತ್ಮಿಕ (ಶಾರೀರ, ಮಾನಸ), ಆಧಿಭೌತಿಕ (ಇತರರಿಂದ, ಕಳ್ಳ ಕಾಕರಿಂದ, ಹಾವು-ಚೇಳುಗಳಿಂದ ಇತ್ಯಾದಿ), ಆಧಿದೈವಿಕ (ಆಕಸ್ಮಿಕ, ಅತಿಯಾದ ಮಳೆ, ಬಿಸಿಲು, ಬಿರುಗಾಳಿ, ಸಿಡಿಲು ಮೊದಲಾದುವುಗಳಿಂದ) ಒದಗುವ ತೊಂದರೆಗಳು (ತಾಪ).



ಮಧ್ಯಮಾವತಿ ಆದಿ

ಈ ತನುವ ನಂಬಲು ಬೇಡೊ ಜೀವವೆ ಪ

ಅನುವಾಗಿ ನಿನ್ನಂಗಕೆ ಕೆಲಕಾಲ ತೋರುವುದೊ
ಅನುವಿಲ್ಲದಾಗ ಈ ತನುವೆ ನಿನಗೆ ವೈರಿ ಅ

ಜರೆಯು ಮರಣದಿಂದ ಭರಿತವಾದುದೀ ಕಾಯ
ಸ್ಥಿರವೆಂದು ನಂಬಿ ನೀ ಮರುಳಾಗಬೇಡ ೧

ಧನಧಾನ್ಯ ಪಶುಪತ್ನಿ ಸ್ಥಿರವೆಂದು ತಿಳಿದು
ಮನುಮಥನಯ್ಯನ ಮರೆಯದೆ ಮನವೆ ೨

ಶರಣೆಂದವರ ಕಾವ ಗರುಡಕೇತನ ನಮ್ಮ
ಪುರಂದರವಿಠಲನ್ನ ಮರೆಯದೆ ಮನವೆ ೩

ಅನುವಾಗಿ—ಪೂರ್ವಕರ್ಮಕ್ಕೆ ಅನುಸಾರವಾಗಿ ಹಿಂಬಾಲಿಸಿಕೊಂಡು ಬಂದು ನಿನಗೆ ಅನುಕೂಲವಾಗಿ, ಹಿತವಾಗಿ.

ನಿನ್ನಂಗಕೆ—ನಿನ್ನ ಲಿಂಗದೇಹಕ್ಕೆ (ಅನಾದಿಸಿದ್ಧವಾದ ದೇಹ).

ಗರುಡಕೇತನ—ಗರುಡಧ್ವಜ, ವಿಷ್ಣು.

ಹಿಂದುಸ್ಥಾನದೇಶಿ　　　　　　　　　　　　　　　　　　ರೂಪಕ

ನಾಕು ಸಂಸಾರ ತೆರೆಯ ನೂಕಲಾರೆನು
ಬೇಕು ನಿನ್ನ ಚರಣಕಮಲ ಬೇರೆ ಅನ್ಯತ್ರ
ಗತಿಯ ಕಾಣೆ　　ಪ

ಹುಟ್ಟಿದಂದಿನಿಂದ ಕಷ್ಟ
ಪಟ್ಟು ಕಂಗೆಟ್ಟು ಮನದಿ
ಗುಟ್ಟು ವೇಳ್ವೆನಯ್ಯ ಒಂ
ದಿಷ್ಟು ಲಾಲಿಸೊ
ಕೆಟ್ಟ ಕಳಿತ ಹಣ್ಣು ನೆಲಕೆ
ತಟ್ಟದಲ್ಲದೆ ಬಿಡದು ಮೊರೆ
ಯಿಟ್ಟೆ ಕಾಯದಿರೆ ದೂರು ಮುಟ್ಟುವುದು
ಶ್ರೀ ಲಕ್ಷ್ಮೀರಮಣ　　೧

ತಂದೆತಾಯಿ ಬಂಧುಬಳಗ
ವೆಂದು ಪಾಶಕ್ಕೆ ಸಿಕ್ಕು
ಒಂದು ದಿನದ ಸುಖವನು ಇಂದು ಕಾಣೆನೋ
ಕಂದರ್ಪಜನಕ ನೀನು
ಕರುಣವಿಟ್ಟು ಕಾಯದಿರೆ
ಕುಂದು ನಿಂದೆ ಬಂದರೆ ದೂರು ತಂದು
ಕೊಡುವರು ಲಕ್ಷ್ಮೀರಮಣ　　೨

ತುಂಡು ತುತ್ತು ಕೂಳಿಗಾಗಿ ಕಂಡವರ ಕಾಡಿ
ಹಿಂಡಿ ಹಿಪ್ಪೆಮಾಡಿ ಮನವ
ಹೀನಗೊಳಿಸಿದೆ
ಉಣ್ಣಬಾರದ ಊಟವನ್ನು
ಕಾಣಬಾರದ ಕರ್ಮವನ್ನು
ಗುಂಡೆಗಾರರ ಕೇರಿಗೆ ಸಿಕ್ಕೆ
ಚೆಂಡಿಗಿಂತ ಹಗುರವಾದೆ　　೩

ವಾಸಿಪಂಧಕಾಗಿ ಎನ್ನ
ಭಾಷೆಯನ್ನು ಜನರು ನೋಡಿ
ಆಶೆಮಾಡಿ ಕೊಂಡರೆ ನಿ
ರಾಶೆಯಾಯಿತೊ
ಮೋಸದಿಂದ ಮಡುವ ಧುಮುಕಿ
ಈಸಲಾರೆ ಮುಳುಗಿ ಮುಳುಗಿ
ಘಾಸಿಯಾಗುತೇನೆ ಕೇಳು
ವಾಸುದೇವ ಸುಪ್ರಸನ್ನ ೪

ಇಷ್ಟು ದಿನದಿ ಜನರ ಕೈಯ
ನಿಷ್ಠುರದ ಮಾತು ಕೇಳಿ
ಕಷ್ಟಕಾಲ ಬಂತು ಘಳಿಗೆ
ಕಳೆಯಲಾರೆನು
ಇಷ್ಟರ ಮೇಲಿನ್ನು ಮನಸು
ಎರಕವಿಲ್ಲದೆ ಕೇಳು
ಇಷ್ಟ ನೀನಹುದು ಪುರಂದರ
ವಿಠಲ ನೀನಲ್ಲದಿಲ್ಲ ೫



ಯರುಕುಲ ಕಾಂಬೋದಿ ತ್ರಿವಿಡೆ

ಯಾರು ಬರುವರು ನಿನ್ನ ಹಿಂದೆ ಇತ್ತ ಪ

ಬಾರೆಂದು ಯಮಭಟರು ಸೆಳೆದೊಯ್ಯುವಾಗ ಅ

ಸತಿಸುತಾದಿಗಳು ಬರುವುದಿಲ್ಲ ನಿನ್ನ
ಹಿತವಾದ ಬಂಧು ಸ್ನೇಹಿತರು ಬರುವುದಿಲ್ಲ
ಕ್ಷಿತಿ ಮಾನ್ಯ ಕ್ಷೇತ್ರ ಬರುವುದಿಲ್ಲ ಲಕ್ಷ್ಮೀ
ಪತಿಯೊಬ್ಬನಲ್ಲದೆ ಗತಿಯೊಬ್ಬರಿಲ್ಲ ೧

ತುರಗ ಗಜಗಳು ಬರುವುದಿಲ್ಲ ನಿನ್ನ
ಮೆರವಣಿಗೆ ಮಾಡುವ ತನು ನಿನ್ನದಲ್ಲ
ನರಪತಿಯು ಸೇವೆ ಸ್ಥಿರವಲ್ಲ ನರ
ಹರಿಯೊಬ್ಬನಲ್ಲದೆ ಗತಿಯೊಬ್ಬರಿಲ್ಲ ೨

ಧನಧಾನ್ಯಗಳು ಬರುವುದಿಲ್ಲ ನಿನ್ನ
ಅನುವಾದ ಕನಕ ಸೌಧಗಳು ಬರುವುದಿಲ್ಲ
ಜನನಿ ಜನಕರು ಬರುವುದಿಲ್ಲ ನಮ್ಮ
ಜನಕಜಾಪತಿ ಹೊರತು ಗತಿಯೊಬ್ಬರಿಲ್ಲ ೩

ಈ ದೇಹ ನೀ ಬಿಟ್ಟ ಬಳಿಕ ನಿನ್ನವರು
ಬೀದಿಯಲಿ ನಿಂತು ಬೊಬ್ಬೆ ಹಾಕುವರು
ಬಾಧೆಗೋಸ್ಕರ ಬೆಂಕಿ ಹಾಕಿ ಸುಡುವರು ನಿಂತ
ಬೂದಿಯು ನೀರೊಳು ಬೆರಸಿ ಚೆಲ್ಲುವರು ೪

ಇನ್ನಾದರೂ ಕೂಗೊ ಗತಿ ನೀನೆಯೆಂದು ಮ
ತ್ತನ್ಯ ರಕ್ಷಕರು ಯಾರಿಲ್ಲವೆಂದು
ಎನ್ನೊಡೆಯ ತಂದೆ ನಿನ ಕಂದನೆಂದು
ಮನ್ನಿಸಿ ಪುರಂದರವಿಠಲ ಸಲಹೆಂದು ೫

೧೬೯

ಶಂಕರಾಭರಣ ಏಕ

ಹರಿನಾರಾಯಣ ಜಯ ಪುರುಷೋತ್ತಮ
ಹರಿನಾರಾಯಣ ಎನು ಮನವೆ ಪ

ದುರಿತ ಭಯವನುತ್ತರಿಸಬೇಕಾದರೆ
ಸಿರಿಯರಸನ ಸ್ಮರಿಸೆಲೆ ಮನವೆ

ಘೋರತರದ ಸಂಸಾರ ದುಃಖದ
ವಾರಿಧಿ ಇದರೊಳಗೇನುಂಟು
ಮೂರು ದಿವಸ ನೀ ಬಾಳುವ ಬಾಳಿಗೆ
ಹಾರೈಸುವುದೇತರ ನಂಟು
ತೋರುವ ಸಿರಿ ಸಂಪತ್ತಿನ ನೆಲೆಯ
ವಿಚಾರಿಸಲದು ಕನಸಿನ ಗಂಟು
ಮಾರಮಣನ ಮನಮುಟ್ಟಿ ಭಜಿಸಲು
ಕಾರುಣ್ಯದ ಮುಕುತಿಯು ಉಂಟು ೧

ಕೂಳಿನ ಬಲದಲಿ ಬೆಳೆದ ಕಾಯದ
ಬಾಳುವೆಯೆಂಬುದು ಸ್ಥಿರವಲ್ಲ
ಮಾಳಿಗೆ ಮನೆಯುಪ್ಪರಿಗೆಯು ಕೋಣೆಯು
ಪೌಳಿಗಳಲ್ಲಲ್ಲಿಹುದಲ್ಲ
ಜಾಳಿಗೆ ತುಂಬಿದ ಹೊನ್ನಾಭರಣವು
ನಾಳಿಗೆ ಸಂಗಡ ಬಹುದಲ್ಲ
ಕಾಲನ ಬಾಧೆಯ ಕಳೆಯಬೇಕಾದರೆ
ನಾಲಿಗೆಯಲಿ ನುಡಿ ಹರಿ ಸೊಲ್ಲ ೨

ಮಡದಿ ಮಕ್ಕಳ ಮಮಕಾರಕೆ ಮನ
ಒಡಂಬಡುತ ನಗುತ್ತಲಿರಬೇಡ
ಬಿಡಲಾರದೆ ಮಾಯಾಪಾಶಕೆ ಸಿಲುಕಿ
ಕಡೆಗಾಣದೆ ನೀ ಕೆಡಬೇಡ
ಹುಡುಕುತ ಬಂದ್ಯಮನವರುಹೊರಡೆನ್ನುತ
ತಡೆಯದೆ ಕೊಂಡೊಯ್ವರು ಗಾಢ
ಕಡಲ ಶಯನನ ಮನಮುಟ್ಟಿ ಭಜಿಸಲು
ಕಡೆಯಲಿ ಮುಕ್ತಿ ಬಹುದು ನೋಡ ೩

ಲೆತ್ತ ಪಗಡೆ ಚದುರಂಗಗಳಾಡುತ
ಹೊತ್ತು ಕಳೆವುದೇತಕೆ ನೀನು
ಸುತ್ತಿ ತೊಳಲಿ ಬಳಲುತ ಮಾಡುವ ಗೃಹ
ಕೃತ್ಯದಿ ನೀನಿದ್ದು ಫಲವೇನು
ಕತ್ತೆಯಂದದಿ ಕಾಲವ ಕಳೆದು
ನ್ಮತ್ತನಾಗಿ ಬಾಳುವೆ ನೀನು
ಮೃತ್ಯುಭಯವನುತ್ತರಿಸುವಡೆ ಪುರು
ಷೋತ್ತಮ ನರಹರಿ ಶರಣೆನ್ನು ೪

ಕುಮತಿಗಳಾದರಿಷಡ್ವರ್ಗ ಪರಾ
ಕ್ರಮಗತಿಗಳನೆಲ್ಲವ ನೀ ಜಯಿಸು
ಭ್ರಮೆಗೊಳಿಸುವ ಇಂದ್ರಿಯಗಳಿಚ್ಛೆಯ
ಶ್ರಮಗೊಳಿಸುವ ಕಾರ್ಯವ ತ್ಯಜಿಸು
ರಮೆಯ ರಮಣನ ಹರಿದಾಸರುಗಳ
ಮಮತೆಯಿಂದಲನುದಿನ ಭಜಿಸು
ಅಮಿತಮಹಿಮ ಶ್ರೀಪುರಂದರವಿಠಲನ
ಸುಮತಿಯಾಗಿ ಧ್ಯಾನದೊಳಿರಿಸು ೫

ಉತ್ತರಿಸಬೇಕಾದರೆ—ದಾಟಬೇಕಾದರೆ.

ಜಾಳಿಗೆ—ಚಾಳಿಗೆ ; ಹಣ ಇರಿಸುವ ಚೀಲ, ಥೈಲಿ.

ಹರಿ ಸೊಲ್ಲ—ಹರಿಯೆಂಬ ಮಾತನ್ನು.

ಕಡೆಗಾಣದೆ—ದಿಕ್ಕು ಕಾಣದೆ.

ಬಹುದು—ಬರುವುದು.

ಲೆತ್ತ—ಒಂದು ಆಟ ; ಸಂಸ್ಕೃತದಲ್ಲಿ ದೇವನ.

ಅರಿಷಡ್ವರ್ಗ—ಕಾಮ, ಕ್ರೋಧ, ಮದ, ಮಾತ್ಸರ್ಯ, ಲೋಭ, ಮೋಹ ಇವು ಆರು ಮನುಷ್ಯರಿಗೆ ಶತ್ರುಗಳು.

ಸುರಟಿ ಆದಿ

ಮೋಸ ಹೋದೆನಲ್ಲ ಸಕಲವು ವಾಸುದೇವ ಬಲ್ಲ ಪ

ಭಾಸುರಾಂಗ ಶ್ರೀ ವಾಸುಕಿಶಯನನ
ಸಾಸಿರ ನಾಮವ ಲೇಸಾಗಿ ಪಠಿಸದೆ ಅ

ದುಷ್ಟ ಜನರ ಕೂಡಿ ನಾನತಿ
ಭ್ರಷ್ಟನಾದೆ ನೋಡಿ
ದುಷ್ಟನು ಪಾಮರ ಮುಷ್ಟಿಕ ವೈರಿಯ
ಸೃಷ್ಟಿಯೊಳಗೆ ನಾ ದೃಷ್ಟಿಸಿ ನೋಡದೆ ೧

ಪ್ರಾಯ ಬಂದಿತಲ್ಲಾ ಮೈಯೊಳು
ಮಾಯ ತುಂಬಿತಲ್ಲಾ
ಪ್ರಾಯಮದದಿ ಪರಸ್ತ್ರೀಯರ ಕೂಡುತ
ಕಾಯಜಜನಕನ ಗಾಯನ ಮಾಡದೆ ೨

ಕಂಗಳಿಂದಲಿ ನೋಡೋ ದೇವ ಎ
ನ್ನಂಗ ಸಂಗವ ಮಾಡೊ
ಮಂಗಳಮೂರುತಿ ಪುರಂದರವಿಠಲನೆ
ಭಂಗಪಡಿಸದೆ ಕೃಪಾಂಗನೆ ದಯಮಾಡೊ ೩

ಮುಷ್ಟಿಕ—ಕಂಸನು ಕೃಷ್ಣನನ್ನು ಕೊಲ್ಲಲು ಬಿಟ್ಟಿದ್ದ ಇಬ್ಬರು ಮಲ್ಲರು, ಚಾಣೂರ ಮತ್ತು ಮುಷ್ಟಿಕ, ಇವರಿಬ್ಬರೂ ಕೃಷ್ಣನಿಂದ ಕೊಲ್ಲಲ್ಪಟ್ಟರು.

ಕಾಯಜ ಜನಕ—ಮನ್ಮಥನ ತಂದೆ, ವಿಷ್ಣು.

ಅಂಗಸಂಗ ಮಾಡು—ಲಿಂಗದೇಹದಲ್ಲಿ ಕಾರುಣ್ಯದಿಂದ ಕೂಡಿಕೋ.

ದೇಶಿ ಆದಿ

ಹಾ ಹಾ ಹಾ ಹಾ ಮಾನವ ಹೀಗೇಕೆ ಕೆಟ್ಟೆ ಪ

ಹರಿಭಜನೆಯ ಬಿಟ್ಟೆ ಅ

ಜನ್ಮಾಂತರದಲಿ ಮಾಡಿದ ಪುಣ್ಯದಿಂದಿಗೆ ಭೂಸುರಜನ್ಮವ ಕೊಟ್ಟ
ದೇವವರೇಣ್ಯ ಸನ್ಮಾನದಿ ಮಾನ್ಯ ಮನುಮಥನಯ್ಯನ ಧನ್ಯಚರಿತ್ರನ
ಒಮ್ಮೆಯಾದರು ನೀ ಮನ್ನಿಸಲಿಲ್ಲ ರೊಣ್ಯ ೧

ತನುವಿನ ಚಿಂತೆ ತನಯರ ಚಿಂತೆ ಧನಧಾನ್ಯದ ಚಿಂತೆ ವನಿತೆಯರ
ಚಿಂತೆ ಉದರದ ಚಿಂತೆ ಅನುದಿನದಲಿ ತನುವ ನೆನಸುತ ಕನಗಿನಂತೆ ೨

ಮಡದಿಮಕ್ಕಳಿಗೆ ಒಡವೆಯ ಗಳಿಸಬೇಕೆಂಬೊ
ಚಿಂತೆ ಮನೆ ಚಿಂತೆ ಮಾನ್ಯದ ಚಿಂತೆ ಮನುಜರಿಗೆ
ಅನುದಿನ ಪುರಂದರವಿಠಲನ ನೆನೆಯದೆ ಕನಗಿನಂತೆ ೩

ಭೂಸುರ ಜನ್ಮವ—ಭೂಮಿಯ ಮೇಲೆ ಸಾತ್ವಿಕ ಜನ್ಮವನ್ನು ; ದೇವತೆಗಳಲ್ಲಿ ಜ್ಞಾನ ಭಕ್ತಿವೈರಾಗ್ಯಗಳು ಪ್ರಚುರವಾಗಿರುವುದರಿಂದ, ಇವು ಯಾವ ಮನುಷ್ಯರಲ್ಲಿ ಇರುವುವೋ ಅವರು ಭೂಸುರರು.

ರೊಣ್ಯ:—ಟೊಣೆಯ, ಬೊಜ್ಜುಮೈ ಬೆಪ್ಪ.

ಕನಗಿನಂತೆ—ಕನಗು (ಕಗ್ಗು) ; ಒಂದು ಬಗೆಯ ಹುಲ್ಲು, ತೀರಕೆಟ್ಟವಾಸನೆಯಿದ್ದು ತೊಂದರೆಯನ್ನುಂಟುಮಾಡುವುದು.

ಕಾಂಬೋದಿ ರುಂಪೆ

ಎಷ್ಟಾದರು ಮುನ್ನ ಕೊಟ್ಟಿಲ್ಲದಿಲ್ಲ ಪಡೆ ಪ
ದಷ್ಟೆ ಅಲ್ಲದೆ ಬೇರೆ ಬಯಸಿದರಿಲ್ಲ ಅ

ಯಾರ್ಯಾರ ಮನೆಗಳಿಗೆ ಹೋಗಿ ಬಂದರು ಇಲ್ಲ
ಊರನಾಳುವ ಧೊರೆಯ ಸೇರಿದರಿಲ್ಲ
ನೀರೊಳಗೆ ತಾ ಮುಳುಗಿ ಜಪವ ಮಾಡಿದರಿಲ್ಲ
ಹೇರಳ ವಿದ್ಯಗಳ ಕಲಿತರಿಲ್ಲ ೧

ತನ್ನೊಡನೆ ಪುಟ್ಟಿಹರ ಭಾಗ್ಯವು ತನಗಿಲ್ಲ
ಹೆಣ್ಣಿನ ದೆಸೆಯಿಂದ ಬಾಹೋದಿಲ್ಲ
ಅನ್ಯರನು ನೋಡಿ ತಾ ಕೊರಗಿ ಸೊರಗಿದರಿಲ್ಲ
ತನ್ನ ಮಕ್ಕಳು ಪಡೆದ ಪುಣ್ಯ ತನಗಿಲ್ಲ ೨

ಬಿಟ್ಟಿ ದುಡಿದು ಬಾಯಬಿಟ್ಟು ಬೇಡಿದರಿಲ್ಲ
ಕಟ್ಟಾಳು ತಾನಾದರೇನು ಫಲವಿಲ್ಲ
ಸೃಷ್ಟಿಯೊಳಗೆ ನಮ್ಮ ಪುರಂದರವಿಠಲನ
ಮುಟ್ಟಿ ಪೂಜಿಸಿದರುಣಲುಂಟು ಉಡಲುಂಟು ೩



ಕಾಂಬೋದಿ ತ್ರಿವಿಡೆ

ಎಂದೆಂದು ನಿನ್ನ ಪಾದವೆ ಗತಿ ಎನಗೆ, ಗೋ
ವಿಂದ ಬಾರಯ್ಯ ಎನ್ನ ಹೃದಯಮಂದಿರಕೆ ಪ

ಮೊದಲಿಂದ ಬರಲಾರದೆ ನಾ ಬಂದೆ
ಇದರಿಂದ ಗೆದ್ದುಪೋಪುದು ಕಾಣೆ ಮುಂದೆ
ತುದಿ ಮೊದಲಿಲ್ಲದೆ ವರರಿಂದ ನೊಂದೆ
ಪದುಮನಾಭನೆ ತಪ್ಪು ಕ್ಷಮೆ ಮಾಡೊ ತಂದೆ ೧

ಹೆಣ್ಣು ಹೊನ್ನು ಮಣ್ಣಿನಾಸೆಗೆ ಬಿದ್ದು
ಪುಣ್ಯ ಪಾಪವನು ನಾ ತಿಳಿಯದೆ ಇದ್ದು
ಅನ್ಯಾಯವಾಯಿತು ಇದಕೇನು ಮದ್ದು
ನಿನ್ನ ಧ್ಯಾನ ಎನ್ನ ಹೃದಯದೊಳಿದ್ದು ೨

ಹಿಂದೆ ನಾ ಮಾಡಿದ ಪಾಪವ ಕಳೆಯೆ
ಮುಂದೆನ್ನ ಜನ್ಮ ಸಫಲ ಮಾಡಿ ಪೊರೆಯೆ
ತಂದೆ ಶ್ರೀ ಪುರಂದರವಿಠಲನ್ನ ನೆನೆಯೆ
ಎಂದೆಂದಿಗಾನಂದ ಸುಖವನ್ನೆ ಕರೆಯೆ ೩



ಆರಭಿ　　　　　　　　　　　　　　　　　　　　　　　　　　　　　ಅಟ್ಟ

ಯಾವಾಗಲೂ ಹೇಳಬಾರದೆ ವಾಸು
ದೇವನೆ ಕೈಬಿಡಬೇಡವೆಂದೆನುತಲಿ ಪ

ಇಕ್ಕಿ ಎರೆವರಿಲ್ಲ ಇಷ್ಟ ಬಂಧುಗಳಿಲ್ಲ
ಅಕ್ಕತಂಗಿಯರಣ್ಣತಮ್ಮಂದಿರಿಲ್ಲ
ಒಕ್ಕಟಿಯಾಗಿ ನಾ ಬಳಲುತ್ತಲಿ ಸದಾ
ದುಃಖಪಡುವೆನೆಂದು ರಕ್ಕಸಾಂತಕನೊಳು ೧

ಮಡದಿ ಮಕ್ಕಳು ಇಲ್ಲ ಒಡವೆ ವಸ್ತುಗಳಿಲ್ಲ
ಪಡೆದ ತಾಯಿತಂದೆಯೊಬ್ಬರಿಲ್ಲ
ಎಡಹಿ ಬೀಳುತಲಿರೆ ಎತ್ತಿಕೊಂಬುವರಿಲ್ಲ
ಒಡೆಯನೆ ಕೈಬಿಡಬೇಡವೆಂದೆನುತಲಿ ೨

ಮಾಡಿಟ್ಟ ಮನೆಯಿಲ್ಲ ಕೂಡಿಟ್ಟ ಧನವಿಲ್ಲ
ಆಡಿಸಿಕೊಳ್ಳಲು ಮಕ್ಕಳಿಲ್ಲ
ಪಾಡಿ ನಿನ್ನನು ಸ್ತುತಿ ಮಾಡುವೆನೆಂದರೆ
ಮೂಢರೊಳಗೆ ಬಲುಮೂಢನಾಗಿಹೆನೆಂದು ೩

ಇಷ್ಟರ ಮೇಲೆ ಕೈಬಿಟ್ಟೆಯಾದರೆ ಇನ್ನು
ಶಿಷ್ಟರು ನೋಡಿ ನಗದಿಹರೆ
ಇಷ್ಟಾರ್ಥ ಕೊಡುವಂಥ ದೇವನಲ್ಲವೆಂದು
ಸೃಷ್ಟಿಯೊಳಪಕೀರ್ತಿ ತಟ್ಟದೆ ಇರದೆಂದು ೪

ಮೋಕ್ಷದಾಯಕ ವಿಶ್ವರೂಪ ವಿಶ್ವಾತ್ಮಕ
ಸಾಕ್ಷಿಸ್ವರೂಪ ಸರ್ವೇಶ್ವರನೆ
ಸಾಕ್ಷಾತು ಶ್ರೀ ಸಿರಿ ಪುರಂದರವಿಠಲನೆ
ರಕ್ಷಿಸಬೇಕೆಂದು ಲಕ್ಷ್ಮಿವಲ್ಲಭನೊಳು ೫

ಧನಾಸರಿ ಅಟ

ಹರಿ ನಿನ್ನೊಲುಮೆಯು ಆಗುವತನಕ
ಅರಿತು ಸುಮ್ಮನಿರುವುದೆ ಲೇಸು ಪ

ಮರಳಿ ಮರಳಿ ತಾ ಪಡೆಯದ ಭಾಗ್ಯಕೆ
ಹೊರಳಿ ಹೊರಳಿ ಅತ್ತರೆ ಬಂದೀತೆ ಅ

ದೂರುಬರುವ ತೆರ ನಂಬಿಕೆ ಕೊಟ್ಟರೆ
ದುರ್ಜನ ಬರುವುದು ತಪ್ಪೀತೆ
ದೂರದಿ ನಿಂತು ಮೊರೆಯಿಟ್ಟು ಕೂಗಲು
ಚೋರರಿಗೆ ದಯ ಪುಟ್ಟೀತೆ ೧

ಬಾರಿ ಬಾರಿಗೆ ಪತಿವ್ರತತನ ಬೋಧಿಸೆ
ಜಾರೆಗದರ ನಿಜ ಸೊಗಸೀತೆ
ಊರು ಬಿಟ್ಟು ಪರವೂರಿಗೆ ಹೋದರೆ
ಪ್ರಾರಬ್ಧವು ಬೇರಾದೀತೆ ೨

ಪಟ್ಟೆಮಂಚ ತಿರುವಿಟ್ಟರೆ ಫಣಿಯೊಳು
ಹುಟ್ಟಿದ ಭ್ರಮೆಯು ಬಿಟ್ಟೀತೆ
ಹೊಟ್ಟೆಲಿ ಸುತರಿಲ್ಲೆಂದತ್ತು ಕರೆದರೆ
ಹುಟ್ಟುಬಂಜೆಗೆ ಮಕ್ಕಳಾದೀತೆ ೩

ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ
ಬೇಟೆಗಾರನಿಗೆ ದಯ ಪುಟ್ಟೀತೆ
ಕೆಟ್ಟ ಹಾವು ಕಚ್ಚಿದ ಘಾಯಕ್ಕೆ ಹಳೆ
ಬಟ್ಟೆಯೊರಸೆ ವಿಷ ಹೋದೀತೆ ೪

ಧನಿಕರ ಕಂಡು ದೈನ್ಯವಪಟ್ಟರೆ
ತನ ದಾರಿದ್ರ್ಯವು ಹಿಂಗೀತೆ
ಎಣಿಸಿಕೊಂಡೇಳುಹಂಜಿಯ ನೂತರೆ
ಮಣಿಯದ ಸಾಲವು ತೀರೀತೆ ೫

ಮುನಿಸಿಂದ ಬೈದಾಡುತಲಿದ್ದರೆ
ಮುರಹರ ಭಜನೆಯು ಆದೀತೆ
ಅನುದಿನ ನಮ್ಮ ಪುರಂದರವಿಠಲನ
ನೆನೆದಲ್ಲದೆ ಭವ ಹಿಂಗೀತೆ ೬

ಪೂರ್ವಿ ಆದಿ

ಇರಬೇಕು ಇರದಿರಬೇಕು ಸಂ
ಸಾರದಿ ಜನಕಾದಿ ಋಷಿಗಳಂತೆ ಪ

ಮಿಥಿಲಾ ಪಟ್ಟಣವು ದಹಿಸಿತೆಂಬುದ ಕೇಳಿ
ಮಿಥಿಲೇಶ 'ಮಮ ಕಿಂಚಿನ್ನ ದಹ್ಯತೇ' ಎಂಬಂತೆ ಇರಬೇಕು ೧

ದಧೀಚಿ ಋಷಿ ತನ್ನ ಅಸ್ಥಿ ಸುರರಿಗಿತ್ತು
ಮಧುವೈರಿ ವೈಕುಂಠಪುರವಿತ್ತ ತೆರದಂತೆ ಇರಬೇಕು ೨

ಪುರಂದರವಿಠಲನ್ನ ದಾಸರ ಸಂಗಡ
ಪುತ್ರ ಮಿತ್ರ ಕಳತ್ರ ಬಂಧುಗಳಂತೆ ಇರಬೇಕು ೩

ಜನಕಾದಿ...—ಮಿಥಿಲಾನಗರದ ದೊರೆಯಾಗಿದ್ದ ಜನಕ ಅಧ್ಯಾತ್ಮತತ್ತ್ವವನ್ನು ಬಲ್ಲವನು. ಅವನ ಆಸ್ಥಾನದಲ್ಲಿ ಯಾವಾಗಲೂ ತತ್ತ್ವಶಾಸ್ತ್ರವನ್ನು ಕುರಿತು ಜಿಜ್ಞಾಸೆ ನಡೆಯುತ್ತಲೇ ಇದ್ದಿತು. ಒಮ್ಮೆ ಹೀಗೆ ದಾರ್ಶನಿಕರೊಂದಿಗೆ ಸಂವಾದಮಾಡುತ್ತ ಕುಳಿದ್ದಾಗ ಅವನ ವಿರಕ್ತಿಯನ್ನೂ ಚಿತ್ತಸ್ಥೈರ್ಯವನ್ನೂ ಪರೀಕ್ಷಿಸಲು ಮಿಥಿಲಾನಗರದಲ್ಲಿ ಬೆಂಕಿ ಎದ್ದಂತೆ ಋಷಿಗಳು ತೋರಿಸಿ ಅವನಿಗೆ ಈ ಸುದ್ದಿ ಮುಟ್ಟಿಸಲು, ಜನಕನು ಒಂದಿಷ್ಟೂ ಉದ್ವೇಗಗೊಳ್ಳದೆ "ನನ್ನದೆಂಬುದೇನು ಸುಟ್ಟುಹೋಗಲಾರದು" ('ಮಮ ಕಿಂಚಿನ್ನ ದಹ್ಯತೇ') ಎಂದು ಹೇಳಿದನಂತೆ. ಇಲ್ಲಿ 'ನನ್ನದೆ'ಂದರೆ ಆತ್ಮಗುಣಗಳು ; ಅವಕ್ಕೆ ಹುಟ್ಟು—ಸಾವು ಮೊದಲಾದ ವಿಕಾರಗಳಿಲ್ಲವೆಂದು ಇಂಗಿತ.

ದಧೀಚಿ—ಸ್ವಾಯಂಭುವ ಮನ್ವಂತರದಲ್ಲಿದ್ದ ಒಬ್ಬ ಋಷಿ ; ಭೃಗುಮಹರ್ಷಿಯ ಮಗ. ಇಂದ್ರನಿಂದ ಮಧುವಿದ್ಯೆಯನ್ನು ಕಲಿತು ಅಶ್ವಿನಿದೇವತೆಗಳಿಗೆ ಹೇಳಿಕೊಟ್ಟ. ಇವನು ಸರಸ್ವತೀತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ದೇವತೆಗಳು ಬಂದು ತಮ್ಮ ಅಸ್ತ್ರಗಳನ್ನೆಲ್ಲ ಇವನಲ್ಲಿ ನ್ಯಾಸವಾಗಿ ಇಟ್ಟುಹೋದರು. ಬಹುಕಾಲದವರೆಗೂ ದೇವತೆಗಳು ಅಸ್ತ್ರಕ್ಕಾಗಿ ಬರದಿರಲು, ಅಸ್ತ್ರಗಳನ್ನು ದಧೀಚಿ ನೀರಿಗೆಸೆದುಬಿಟ್ಟ. ಅನಂತರ ದೇವತೆಗಳು ಬಂದು ತಮ್ಮ ಅಸ್ತ್ರಗಳನ್ನು ಕೇಳಿದಾಗ "ಅವೆಲ್ಲ ನನ್ನ ಮೂಳೆಗಳಲ್ಲಿ ಬೆರೆತುಹೋಗಿವೆ. ನನ್ನ ಮೂಳೆಗಳನ್ನೇ ತೆಗೆದುಕೊಂಡು ವಿಶ್ವಕರ್ಮನಿಂದ ನಿಮಗೆ ಬೇಕಾದ ಅಸ್ತ್ರಗಳನ್ನು ಮಾಡಿಸಿಕೊಳ್ಳಿರಿ" ಎಂದು ಹೇಳಿ ಯೋಗಬಲದಿಂದ ದೇಹತ್ಯಾಗಮಾಡಿದ. ದೇವತೆಗಳು ಹಾಗೆಯೇ ಮಾಡಿದರು.

## ೧೭೭

ಮೋಹನ — ಅಟ್ಟ

ಹರಿಕಥಾಮೃತ ಸೇವೆ ಹರಿದಾಸರಲ್ಲದಲೆ
ದುರುಳ ಮೂಢರು ಬಲ್ಲರೆ ಪ

ಸ್ತನ್ಯಪಾನದ ಸವಿಯ ಕೊನೆ ಚಿಣ್ಣರರಿಯುವಂತೆ
ಮಣ್ಣು ಗೊಂಬೆಯು ಬಲ್ಲುದೆ
ಅನ್ನಪಾನದ ಸವಿಯ ಕೊನೆ ನಾಲಿಗೆ ಅರಿವಂತೆ
ಅಣಿಮಾಡಿ ಕೊಡುವಂಥ ಕರ ಬಲ್ಲುದೆ ೧

ನವ ನೀರದಾರ್ಭಟಕೆ ನವಿಲುಗಳು ನಲಿವಂತೆ
ಕಾವು ಕಾವೆಂಬ ಕಾಕವು ನಲಿವುದೆ
ದಿವಸಾಧಿಪತಿಯು ಉದಿಸಲರಳುವಬ್ಜಗಳಂತೆ
ದಿವಸಾಂಧ ಪಕ್ಷಿಗಳು ಹರುಷಿಸುವುವೆ ೨

ಮೊಲ್ಲೆ ಮಲ್ಲಿಗೆ ಮುಡಿಯಬಲ್ಲ ಮಾನವರಂತೆ
ಭಲ್ಲೂಕಗಳು ಆದರ ಬಗೆ ಬಲ್ಲುವೆ
ಫುಲ್ಲಾಕ್ಷ ರಘುಪತಿ ಪುರಂದರವಿಠ್ಠಲನ
ಬಲ್ಲ ಸಜ್ಜನರಂತೆ ಖುಲ್ಲರರಿಯುವರೆ ೩

ಕೊನೆ ಚಿಣ್ಣ—ಕೊನೆದ ಚಿಣ್ಣ ; ತನ್ನ ಬಯಕೆ ಕೈಗೂಡಿದ ಸಣ್ಣ ಕೂಸು.

ನವ ನೀರದಾರ್ಭಟ—ಆಗತಾನೆ ಬಂದಡರಿದ ಮೋಡಗಳ ಶಬ್ದ.

ದಿವಸಾಧಿಪತಿಯು—ಸೂರ್ಯ ; ಅಬ್ಜವು—ತಾವರೆ ಅರಳುತ್ತಿದ್ದು ಸಂತೋಷ ಗೊಂಡಂತೆ.

ದಿವಸಾಂಧಪಕ್ಷಿಗಳು—ಗೂಬೆಗಳು (ಹಗಲು ಅವು ಕುರುಡೆಂದು ಪ್ರತೀತಿ).

ಭಲ್ಲೂಕಗಳು—ಕರಡಿಗಳು.

ಖುಲ್ಲರು—ನೀಚರು (ಕ್ಷುದ್ರ).

## ೧೭೮

ಭೂಪಾಳಿ ತ್ರಿವಿಡೆ

ಗೋವಿಂದ ನಮೋ ಗೋವಿಂದ ನಮೋ
ಗೋವಿಂದ ನಾರಾಯಣ ಪ

ಗೋವರ್ಧನ ಗಿರಿಯನೆತ್ತಿದ ಗೋವಿಂದ ನಮ್ಮ ರಕ್ಷಿಸೈ ಅ

ಮಂಚ ಬಾರದು ಮಡದಿ ಬಾರಳು
ಕಂಚು ಕನ್ನಡಿ ಬಾರವು
ಸಂಚಿತಾರ್ಥದ ದ್ರವ್ಯ ಬಾರದು
ಮುಂಚೆ ಮಾಡಿರೊ ಧರ್ಮವ ೧

ಅರ್ಥವ್ಯಾರಿಗೆ ಪುತ್ರರ್‍ಯಾರಿಗೆ
ಮಿತ್ರ ಬಾಂಧವರ್‍ಯಾರಿಗೆ
ಕರ್ತೃ ಯಮನವರೆಳೆದು ಒಯ್ವಾಗ
ಅರ್ಥಪುತ್ರರು ಕಾಯ್ವರೆ ೨

ತಂದು ಬಂದರೆ ತನ್ನ ಪುರುಷನ
ಬಂದಿರಾ ಬಳಲಿದಿರಾ ಎಂಬಳು
ಒಂದು ದಿವಸ ತಾರದಿದ್ದರೆ
ಹಂದಿ ನಾಯಂತೆ ಬೊಗಳ್ವಳು ೩

ಪ್ರಾಣವಲ್ಲಭೆ ತನ್ನ ಪುರುಷನ
ಕಾಣದೆ ನಿಲ್ಲಲಾರಳು
ಪ್ರಾಣಹೋಗುವ ಸಮಯದಲ್ಲಿ
ಜಾಣೆ ಕರೆದರೆ ಬಾರಳು ೪

ಉಂಟು ಕಾಲಕೆ ನಂಟರಿಷ್ಟರು
ಬಂಟರಾಗಿ ಕಾಯ್ದರು
ಕಂಟಕ ಯಮನವರು ಎಳೆವಾಗ
ನಂಟರಿಷ್ಟರು ಬಾರರು ೫

ಒಡವೆ ಅರಸಿಗೆ ಒಡಲು ಅಗ್ನಿಗೆ
ಮಡದಿ ಮತ್ತೊಬ್ಬ ಚೆಲುವಗೆ
ಬಡಿದು ಹೊಡೆದು ಯಮನವರೆಳೆವಾಗ
ಎಡವಿ ಬಿದ್ದಿತು ನಾಲಗೆ ೬

ದಿಟ್ಟತನದಲಿ ಪಟ್ಟವಾಳುವ
ಕೃಷ್ಣರಾಯನ ಚರಣವ
ಮುಟ್ಟಿ ಭಜಿಸಿರೊ ಸಿರಿ ಪುರಂದರ
ವಿಠ್ಠಲೇಶನ ಚರಣವ ೭



ಕಲ್ಯಾಣಿ ಝಂಪೆ

ಹಮ್ಮು ಮಾಡಲಿಬೇಡಿ ಹಮ್ಮು ಈಡ್ಯಾಡುವುದು
ಹಮ್ಮಿನಿಂದಲಿ ನೀವು ಕೆಡಬೇಡಿರಯ್ಯ ಪ

ಮುನ್ನೊಬ್ಬ ರಾವಣನು ಜನಕನ ಸಭೆಯಲ್ಲಿ
ತನ್ನಳವನರಿಯದೆ ಧನುವೆತ್ತಲು
ಉನ್ನತವಾದ ಧನುವು ಎದೆಮೇಲೆ ಬೀಳಲು
ಬನ್ನಬಟ್ಟದ್ದೆಲ್ಲ ಕೇಳಿ ಬಲ್ಲಿರಯ್ಯ ೧

ಕುರುಪನ ಸಭೆಯಲ್ಲಿ ಕೃಷ್ಣ ತಾ ಬರಲಾಗಿ
ಕರೆದು ಮನ್ನಣೆಯ ತಾ ಮಾಡದಿರೆ
ಧರೆಗೆ ಶ್ರೀ ಕೃಷ್ಣನುಂಗುಷ್ಟವನೊತ್ತಲು
ಅರಸು ಸಿಂಹಾಸನದಿಂದ ಬಿದ್ದುರುಳಾಡಿದ ೨

ಅತಿ ವೇಗದಲಿ ಕೃಷ್ಣ ಸತ್ಯಭಾಮೆಯ ಕರೆದು
ಸತಿ ಸೀತೆ ಆಗೆಂದು ನೇಮಿಸಲಾಗ
ಮತಿವಂತೆ ಬಗೆಬಗೆ ಶೃಂಗಾರವಾದರು
ಸೀತಾಸ್ವರೂಪವು ತಾನಾಗಲಿಲ್ಲ ೩

ಹನುಮನ ಕರೆಯೆಂದು ಗರುಡನ ಕಳುಹಲು
ಮನದಲ್ಲಿ ಕಡುಕೋಪದಿಂದ ನೊಂದು
ವನಚರ ಬಾಯೆಂದು ಗರುಡ ತಾ ಕರೆಯಲು
ಹನುಮಂತ ಗರುಡನ ತಿರುವಿ ಬಿಸಾಡಿದ ೪

ಇಂಥಿಂಥ ದೊಡ್ಡವರು ಈ ಪಾಡು ಪಡಲಾಗಿ
ಪಂಥಗಾರಿಕೆ ತರವೆ ಮನುಜರಿಗೆ
ಕಂತುಜನ ಚೆಲ್ವ ಪುರಂದರವಿಠಲನ
ಸಂತತ ಮನದಲಿ ಚಿಂತಿಸಿ ಸುಖಿಸಿರೊ ೫

ಹಮ್ಮು—ಪರ್ಬು, ಗರ್ವ, ಹೆಮ್ಮೆ.
ಈಡ್ಯಾಡುವುದು—ಚೆಲ್ಲಾಡುವುದು ; ಬಿಸಾಡುವುದು.

ಕಾಂಬೋದಿ ಆದಿ

ರಂಗ ಬಂದ ಮನೆಗೆ ಶೃಂಗಾರ ನೋಡಿರೊ
ಹಿಂಗದಂಥ ಬಡತನ ಭಂಗವಾಗಿ ಹೋಯಿತೊ ಪ

ಹೊತ್ತಾರೆದ್ದು ಹೋಗಿ ಪರರ ಭೃತ್ಯನಾಗಿ ದುಡಿದರೆ
ತುತ್ತು ಅನ್ನ ಕಾಣದೆ ನಾ ಹೊತ್ತು ಕಳೆದೆನೋ
ಇತ್ತಲಾಗಿ ರಂಗ ಬರಲು ಸುತ್ತಿಕೊಂಡ ಬಡತನ
ಎತ್ತ ಹೋಯಿತೊ ಏನಾಯಿತೊ ಕಾಣಬಾರದು ೧

ಮಾನಾಭಿಮಾನವ ಬಿಟ್ಟು ನಾನಾರಣ್ಯ ತಿರುಗಿದರೆ
ಗೇಣು ಅರಿವೆ ಉಟ್ಟೇನೆನಲು ಹುಟ್ಟು ದೊರೆಯದು
ದಾನವಾಂತಕ ರಂಗ ಬರಲು ನಾನಾಪರಿಯಿಂ ಪಟ್ಟೆವಾಳಿ
ತಾನೆ ಬಂದು ಮನೆಯೊಳು ನಿಧಾನವಾಯಿತೊ ೨

ಹುಟ್ಟಿದ್ದು ಮೊದಲು ನಾನು ಮೆಟ್ಟಿ ತುಳಿದೆ ದೇಶವೆಲ್ಲ
ಇಟ್ಟೇನೆಂದರೆ ಸೊಟ್ಟ ಕಿವಿಗೆ ಘಟ್ಟಿಮುರುವು ಕಾಣೆನೊ
ವಿಠ್ಠಲ ಮನೆಗೆ ಬರಲು ಸೃಷ್ಟಿಯೊಳಗಿಲ್ಲದಂಥ
ಅಷ್ಟ ಸೌಭಾಗ್ಯಗಳ ಮೆಟ್ಟಿ ತುಳಿದೆನೊ ೩

ಹಿಂದೆ ರಂಗನ ಭಜಿಸದೆ ಅನೇಕ ಭಂಗವ ಪಟ್ಟೆ
ಮುಂದೆ ರಂಗನ ಭಜಿಸಲು ಸುಕೃತ ಫಲವು
ತಂದೆ ಪುರಂದರವಿಠಲನ್ನ ಹೊಂದಿ ಭಜಿಸಲಾಗಿ
ಬಂದನು ಭಾಗ್ಯದ ಸಿರಿಲಕುಮಿಯನೊಡಗೂಡಿ ೪

ಪಟ್ಟೆವಾಳಿ—ರೇಷ್ಮೆ ಪಟ್ಟೆಯ ಸೀರೆ.

ಘಟ್ಟಿಮುರುವು—ಬಂಗಾರದ ಓಲೆ.

ಅಷ್ಟಸೌಭಾಗ್ಯ—ಗೃಹ, ಶಯ್ಯೆ, ವಸ್ತ್ರ, ಆಭರಣ, ಸ್ತ್ರೀ, ಪುಷ್ಪ, ಗಂಧ, ತಾಂಬೂಲ.

ಭಂಗವ—ಅಪಮಾನಗಳನ್ನು.

ಬಿಲಹರಿ ಚಾಪು

ರಾಮ ರಾಮ ರಾಮ ರಾಮ ರಾಮ ಎನ್ನಿರೋ ರಘು ಪ

ರಾಮನ ನಾಮವನುದಿನ ಪಾಡಿರೋ ಅ

ತುಂಬಿದ ಪಟ್ಟಣಕೆ ಒಂಭತ್ತು ಬಾಗಿಲು
ಸಂಭ್ರಮದರಸುಗಳೈದು ಮಂದಿ
ಡಂಭಕತನದಿಂದ ತಿರುಗು ಕಾಯದಿ
ನಂಬಿಕೆ ಇರಿಸಿ ನೀವು ಕೆಡಬೇಡಿರೋ ೧

ನೆಲೆಯಿಲ್ಲದೀ ಕಾಯ ಎಲುವಿನ ಹಂದರ
ಬಲಿದು ಹೊದ್ದಿಸಿದ ಚರ್ಮದ ಹೊದ್ದಿಕೆ
ಮಲಮೂತ್ರಗಳು ಮಾಂಸ ರಕ್ತದ ರಾಶಿಯು
ಹೊಲಸು ದೇಹವ ನೆಚ್ಚಿ ಕೆಡಬೇಡಿರೋ ೨

ತೊಗಲು ಬೊಂಬೆಯು ಮಾಡಿ ಜಗದೊಳು ನಿಲ್ಲಿಸಿ
ನೆಗೆದಾಡಿಸಿ ಹೊತ್ತು ಹೋಗವಂತೆ
ಒಗುಮಿಗೆಯಿಂದಲಿ ಉಬ್ಬುವ ಕಾಯವ
ಹಗಲು ಇರುಳು ನೆಚ್ಚಿ ಕೆಡಬೇಡಿರೋ ೩

ಮಡದಿಯು ಮಕ್ಕಳು ಒಡವೆಗಳುಂಟೆಂದು
ಕಡು ಕೊಬ್ಬುತನದಿಂದ ತಿರುಗಬೇಡಿರೋ
ಪಿಡಿದೆಳೆತಾರೆಂದು ಯಮನು ಪೀಡಿಸಲಾಗ
ಒಡನೆ ಆರೊಬ್ಬರು ಬಾಹೋರಿಲ್ಲವೋ ೪

ಹರಬ್ರಹ್ಮಸುರರಿಂದ ವಂದಿತನಾಗಿಪ್ಪ
ಹರಿ ಸರ್ವೋತ್ತಮನೊಬ್ಬನೆ ಕಾಣಿರೋ
ಪುರಂದರವಿಠಲನ ಸ್ಮರಣೆಯ ಮಾಡಲು
ದುರಿತ ಪರ್ವತವೆಲ್ಲ ಪರಿಹಾರವೋ ೫

ತುಂಬಿದ ಪಟ್ಟಣಕೆ ಒಂಭತ್ತು ಬಾಗಿಲು—ಪಂಚಭೂತಗಳಿಂದ ತುಂಬಿದ ಶರೀರವೇ ಪಟ್ಟಣ (ಪುರ, 'ತುಂಬಿದುದು') ; ಅದಕ್ಕೆ ಕಣ್ಣುಗಳೆರಡು, ಕಿವಿಗಳೆರಡು, ಮೂಗಿನ ಹೊಳ್ಳೆಗಳೆರಡು, ಬಾಯಿ, ಮೂತ್ರದ್ವಾರ, ಮಲದ್ವಾರ ಹೀಗೆ ಒಂಭತ್ತು ಬಾಗಿಲುಗಳು ('ನವದ್ವಾರೇ ಪುರೇ ದೇಹೀ'). ಹೊರಗಣ ವಿಷಯಗಳ ಅನುಭವಗಳು ಜೀವಕ್ಕೆ ಒದಗುವುದು ಈ ಬಾಗಿಲುಗಳಿಂದ ; ಒಳಗಿನ ಚೇತನ ಹೊರಗೆ ಹರಿಯುವುದೂ ಈ ಬಾಗಿಲುಗಳಿಂದ.

ಸಂಭ್ರಮದರಸುಗಳೈದು ಮಂದಿ—ಐದು ಜ್ಞಾನೇಂದ್ರಿಯಗಳು ; ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ.

ತಿರುಗು ಕಾಯದಿ—ಸಂಸಾರಚಕ್ರದಲ್ಲಿ ತಿರುಗಾಡುವ ದೇಹದಲ್ಲಿ.

ಬಲಿದು—ಬೆಳೆದು,

ನೆಗೆದಾಡಿಸಿ—ಕುಣಿಸಿ.

ಒಗುಮಿಗೆಯಿಂದಲಿ—ಸಂಭ್ರಮದ ಅತಿರೇಕದಿಂದ



ಕಾಂಬೋದಿ ಝಂಪೆ

ವಾಸುದೇವನ ನೆನೆದು ಸುಖಿಯಾಗು ಮನವೆ ಪ

ಈ ಶರೀರದ ಭ್ರಾಂತಿ ಇನ್ನೇಕೆ ಮನವೆ ಅ

ದಂತಗಳು ಸಡಲಿದವು ಧಾತುಗಳು ಕುಂದಿದವು
ಕಾಂತೆಯರು ಜರಿದು ಓಕರಿಸುತಿಹರು
ಚಿಂತೆ ಇನ್ನೇತಕೆ ಬಯಲಾದ ದೇಹಕ್ಕೆ
ಇಂತೆಂದು ತಿಳಿದು ಶ್ರೀಕಾಂತನ್ನ ನೆನೆ ಮನವೆ ೧

ಕಾಲು ಜವಗುಂದಿತು ಕಂಗಳ ದೃಷ್ಟಿ ಹಿಂಗಿತು
ಮೇಲೆ ಯೌವನ ಪೋಗಿ ಜರೆ ಬಂದಿತು
ಕಾಲ ಕರ್ಮಗಳು ಸಂಧಿಸಿದ ಸಮಯದಲಿ
ಬಾಲ ತನುವಿನ ಆಸೆಯೆಲ್ಲಿಹುದೊ ಮನವೆ ೨

ನೀರ ಬೊಬ್ಬುಳಿಯಂತೆ ನಿತ್ಯವಲ್ಲವೊ ದೇಹ
ಧಾರುಣಿ ಧನ ಸ್ತ್ರೀಗೆ ಮರುಳಾಗಬೇಡ
ನೀರಜನಾಭ ಶ್ರೀ ಪುರಂದರವಿಠ್ಠಲನ
ಬಾರಿ ಬಾರಿಗೆ ನೆನೆದು ಸುಖಿಯಾಗೊ ಮನುಜ ೩

ಧಾತುಗಳು—ಶರೀರದ ಸಪ್ತಧಾತುಗಳು : ರಸ, ರಕ್ತ, ಮೇದಸ್ಸು, ಮಾಂಸ, ಮಜ್ಜಾ, ಅಸ್ಥಿ, ಶುಕ್ರ.

ಜವಗುಂದಿತು—ಬಲಗುಂದಿತು.

ಬೊಬ್ಬುಳಿ—ಬುದ್ಬುದ, ಗುಳ್ಳೆ.

ಮುಖಾರಿ ಝಂಪೆ

ಆರೇನ ಮಾಡುವರು ಆರಿಂದಲೇನಹುದು ಪ

ಪೂರ್ವಜನ್ಮದ ಕರ್ಮ ವಿಧಿ ಬೆನ್ನಬಿಡದು ಅ

ಊರೆಲ್ಲ ನಂಟರು ಉಣಬಡಿಸುವವರಿಲ್ಲ
ಬಾಯಾರಿ ಹೋದರೆ ಕೆರೆ ಬತ್ತಿತು
ತಾಯಿ ಸೋದರರೆಂದು ಹಾರೈಸಿ ಹೋದರೆ
ದೂರದಲ್ಲಿ ನೋಡಿ ನಗುತಾರೆ ಕೃಷ್ಣ ೧

ಹಸಿದು ನಂಟರ ಮನೆಗೆ ಉಣಲಿಕ್ಕೆ ಹೋದರೆ
ಹಸಿವರಿತು ಎನ್ನ ಸಲಹುವರ ಕಾಣೆ
ರಸದಾಳಿಯು ಕಬ್ಬು ಮೆಲಲೆಂದು ಹೋದರೆ
ವಿಷವಾಗಿ ಬಾಯಿಗೆ ತೋರುತಿದೆ ಕೃಷ್ಣ ೨

ಮರದ ನೆರಳು ಎಂದು ಮರದಡಿಗೆ ಹೋದರೆ
ಉರಿದು ಧಗಧಗನೆ ಕೆಂಡಗಳಾದವು
ಹರಿವ ನೀರೆಂದು ನಾ ನೀರಕುಡಿಯ ಹೋದರೆ
ತೊರೆ ಬತ್ತಿ ಬಚ್ಚಲಾಯಿತು ಕೇಳೊ ಕೃಷ್ಣ ೩

ಮನಕೆ ಬಾರದ ಹೆಣ್ಣು ಮನೆಗೆ ಹಬ್ಬಿದ ಬಳ್ಳಿ
ಮನವರಿತು ನಡೆಯದ ಮನುಜ ಸಂಗ
ಎನಗೆ ನೀ ಗತಿಯೆಂದು ದೃಢವಾಗಿ ನಂಬಿರಲು
ಎನ್ನ ನಡುನೀರಿನೊಳು ಕೈಬಿಡುವರೆ ಕೃಷ್ಣ ೪

ನಡೆವುದಕೆ ಕಾಲಿಲ್ಲ ಕೊಡುವುದಕೆ ಧನವಿಲ್ಲ
ನುಡಿವ ನಾಲಿಗೆಯು ಹರಣವು ಗುಂದಿತು
ಬಡವರಾಧಾರಿ ಶ್ರೀ ಪುರಂದರವಿಠಲನ
ಚರಣವನು ನೆರೆನಂಬಿ ಸುಖಿಯಾಗು ಮನವೆ ೫

ಹರಣ—'ಪ್ರಾಣ'ದ ತದ್ಭವ, ಬಲ.

ಕಾಂಬೋದಿ ತ್ರಿವಿಡೆ

ನಿತ್ಯವಲ್ಲ ನಿತ್ಯವಲ್ಲ ಅನಿತ್ಯ ದೇಹವಿದಣ್ಣ ಪ

ಮತ್ತೆ ಮುರಾರಿ ಕೃಷ್ಣನ ನೆನೆಯಲು
ಮುಕ್ತಿಗೆ ಸಾಧನವಣ್ಣ ದೇಹ ಅ

ಮಾನಿನಿಯರ ಕುಚಕೆ ಮರಳಾಗದಿರು
ಮಾಂಸದ ಗಂಟುಗಳಲ್ಲಿ
ನಾನಾ ಪರಿಯಲಿ ಮೋಹಪಡದಿರು
ಹೀನ ಮೂತ್ರದ ಕುಳಿಯಲ್ಲಿ
ಜಾನಕಿರಮಣನ ಧ್ಯಾನವ ಮಾಡಲು
ಜಾಣನಾಗುವಿ ಅಲ್ಲಿ, ಪ್ರಾಣಿ ೧

ತಂದೆ ತಾಯಿ ಅಣ್ಣ ತಮ್ಮಂದಿರು
ಬಂಧುಬಳಗದವರೆಲ್ಲ
ಹೊಂದಿ ಹೊರೆಯುವ ನೆಂಟರಿಷ್ಟರು
ಹರಿದು ತಿಂಬುವರೆಲ್ಲ
ಬಂದು ಯಮದೂತರು ಸೆಳೆದೊಯ್ಯುವಾಗ
ಹಿಂದೆ ಬಾಹೋರಿಲ್ಲ ಪ್ರಾಣಿ ೨

ಕತ್ತಲಿ ಬೆಳದಿಂಗಳ ಸಂಸಾರ ಕಟ್ಟೋ
ಧರ್ಮದ ಮಟ್ಟಿ
ಚಿತ್ತ ಶುದ್ಧನಾಗಿ ನಡೆಯದಿದ್ದರೆ
ವ್ಯರ್ಥವಾಗಿ ನೀ ಕೆಟ್ಟಿ
ಚಿತ್ತಜನಯ್ಯ ಶ್ರೀ ಪುರಂದರವಿಠಲನ
ಭಜಿಸೊ ಬೇಗ ಮನಮುಟ್ಟಿ ೩

ಕೇದಾರಗೌಳ ಅಟ್ಟ

ನಂಬು ಕಂಡ್ಯ ಮನವೆ
ನಂಬು ಶ್ರೀಕೃಷ್ಣನ ಚರಣಕಮಲವ ಪ

ಒಂಭತ್ತು ಬಾಗಿಲ ಪಟ್ಟಣದೊಳಗೆ
ಸಂಭ್ರಮದಿಂದ ಬೈಲಾಗುವ ಮುನ್ನ ನೀ ೧

ಆರು ಮಂದಿ ಕಳ್ಳರು ಊರೊಳಗೆ
ಸೂರೆಮಾಡಿ ಗಾಸಿಮಾಡುವ ಮುನ್ನ ನೀ ೨

ಏಳುಸುತ್ತಿನ ಕೋಟೆ ಘನ ದುರ್ಗವನ್ನು
ಕಾಲನವರು ಬಂದು ಕರೆಯುವ ಮುನ್ನ ನೀ ೩

ದೇಹ ನಾಯಕ ದೇವರು ತಾವು
ದೇಹವ ಬಿಡದೆ ಬಿಡುವಾಗುವ ಮುನ್ನ ನೀ ೪

ಪುರವಿದು ಸ್ಥಿರವಲ್ಲ ಮೆಚ್ಚಿ ಕೆಡಲುಬೇಡ
ಪುರಂದರವಿಠಲನ್ನ ಆ ಪಾದಪದುಮವ ೫

ಒಂಭತ್ತು ಬಾಗಿಲ ಪಟ್ಟಣ—'ನವದ್ವಾರೇ ಪುರೇ', ವಿವರಣೆ ಆಗಲೆ ಬಂದಿದೆ.

ಬೈಲಾಗದ—ಬಯಲಾಗದ ; ನಿರಾಶನಾಗುವ ಮೊದಲು.

ಆರು ಮಂದಿ ಕಳ್ಳರು—ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ (ಅರಿಷಡ್ವರ್ಗ).

ಊರೊಳಗೆ—ಬದುಕಿನಲ್ಲಿ (ಕ್ಷೇತ್ರ).

ಏಳು ಸುತ್ತಿನ ಕೋಟೆ—ಶರೀರವನ್ನು ಕಾಪಾಡುವ ಸಪ್ತಧಾತುಗಳು, ವಿವರಣೆ ಆಗಲೆ ಬಂದಿದೆ.

ಕಾಲನವರು—ಯಮದೂತರು.

ದೇಹನಾಯಕದೇವರು—ಮುಖ್ಯಪ್ರಾಣ ; ಸೂತ್ರನಾಮಕ ವಾಯುದೇವರು.

ಶಂಕರಾಭರಣ ಆದಿ

ಮನುಜ ಶರೀರವಿದೇನು ಸುಖ ಏನು ಸುಖ ಇದು ಪ

ಏನು ಸುಖ ಇದ ನೆನೆದರೆ ಘೋರವಿದೇನು ಸುಖ ಅ

ಜನನ ಮರಣ ಮಲದಾ ಕೂಪದಲ್ಲಿದ್ದು
ಅನುಭವಿಸುವುದು ಇದೇನು ಸುಖ
ತನುವಿದ್ದಾಗಲೆ ಹೃದಯದಶೌಚದ
ಸ್ತನಗಳನುಂಬುವುದೇನು ಸುಖ ೧

ದಿನ ದಿನ ಹಸಿವು ತೃಷೆ ಘನ ಘನ ರೋಗದೊ
ಳನುಭವಿಸುವುದು ಅದೇನು ಸುಖ
ನೆನೆಯಲನಿತ್ಯ ನೀರ್ಗುಳ್ಳೆಯಂತಿರುತಿಪ್ಪ
ತನು ಮಲ ಭಾಂಡವಿದೇನು ಸುಖ ೨

ಪರಿ ಪರಿ ವಿಧದಲಿ ಪಾಪವ ಗಳಿಸುತ
ನರಕಕೆ ಬೀಳುವುದೇನು ಸುಖ
ಪುರಂದರವಿಠಲನ ಮನದಿ ನೆನೆದು ಸ
ದ್ಧರ್ಮದೊಳು ನಡೆದರೆ ಆಗ ಸುಖ ೩

ಘೋರ—ಭಯಂಕರ, ಭಯವನ್ನುಂಟುಮಾಡುವುದು.
ಕೂಪ—ಬಾವಿ.
ತೃಷೆ—ಬಾಯಾರಿಕೆ.
ತನು ಮಲಭಾಂಡ—ಶರೀರವೆನ್ನುವುದು ಕೊಳೆಗಳ ಮಡಕೆ.

# ಭಕ್ತಿ

ಭಕ್ತಿಯೆನ್ನುವ ಸಾಧನೆ ಭಾಗವತಪಂಥದಲ್ಲಿ ತುಂಬ ಮುಖ್ಯವಾದುದು ; ಅದನ್ನು ಸಾಧನೋತ್ತಮವೆಂದು ಬಣ್ಣಿಸುತ್ತಾರೆ. ಉಳಿದ ಸಾಧನೆಗಳಾದ ಜ್ಞಾನ, ವಿರಕ್ತಿ, ಕರ್ಮಗಳಿಗೆ ಭಕ್ತಿಯಿಂದಲೇ ಪರಿಪಾಕ ಒದಗುವುದು. ಭಕ್ತಿಯಿಂದಲೇ ಪರಮಾತ್ಮನು ಒಲಿಯುವನೆಂದೂ, ಬೇರೆ ಯಾವ ಉಪಾಯವೂ ಹೀಗೆ ಫಲಕಾರಿಯಾಗದೆಂದೂ ನಂಬಿಕೆಯಿದೆ. ಹರಿದಾಸರು ಭಕ್ತಿಯನ್ನು ಮಧ್ವಾಚಾರ್ಯರು ಒದಗಿಸಿದ ಚೌಕಟ್ಟಿನಲ್ಲಿ ಗ್ರಹಿಸಿದ್ದಾರೆ. ಪರಮಾತ್ಮನ ಮಾಹಾತ್ಮ್ಯೆಯನ್ನು ಅರಿತುಕೊಂಡು, ಅನಂತರ ಅವನೇ ಸ್ವತಂತ್ರ ತಾನು ಪರತಂತ್ರ, ಅವನು ಅಂಶಿ ತಾನು ಅಂಶ, ಅವನು ಬಿಂಬ ತಾನು ಪ್ರತಿಬಿಂಬ, ಅವನು ಈಶ ತಾನು ದಾಸ ಎಂಬ ತತ್ತ್ವನಿಶ್ಚಯದಿಂದ ಅವನಲ್ಲಿ ಅತ್ಯಂತ ಸ್ನೇಹವನ್ನು ಮಾಡುವುದು ಭಕ್ತಿಯೆಂದು ಮಧ್ವಾಚಾರ್ಯರ ನಿರೂಪಣೆ ('ಜ್ಞಾನಪೂರ್ವ ಪರಸ್ನೇಹಃ', 'ಸ್ನೇಹಾನುಬಂಧೋ ಯಸ್ತಸ್ಮಿನ್ ಬಹುಮಾನಪುರಃಸರಃ' ; 'ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ'). ಅದು ಪರಮಪ್ರೇಮರೂಪವಾದುದೆಂಬ ನಾರದ ಭಕ್ತಿಸೂತ್ರದ ಒಕ್ಕಣೆಯೂ, 'ಹರಿಮುದ್ದಿಶ್ಯ ಯಾ ಕ್ರಿಯಾ ಸೈವ ಭಕ್ತಿರಿತಿ ಪ್ರೋಕ್ತಾ' ಎಂಬ ನಾರದ ಪಾಂಚರಾತ್ರದ ಮಾತೂ ಸಮ್ಮತವಾದುವೇ. ಹರಿದಾಸರು ಭಕ್ತಿಯ ಪ್ರಕ್ರಿಯೆಯನ್ನು ಭಾಗವತಪುರಾಣದ ಆಧಾರದ ಮೇಲೆ ಅಳವಡಿಸಿಕೊಂಡಿದ್ದಾರೆ. ಅದರಲ್ಲೂ ವಿಜಯಧ್ವಜೀಯ ವ್ಯಾಖ್ಯಾನದ 'ಭಕ್ತಿಯುಳ್ಳ ಸಾಧಕನಿಗೆ ಬೇರೆ ಯಾವ ಸಾಧನದ ಆಗತ್ಯವೂ ಇರದು' ('ಭಕ್ತಿಂ ಲಬ್ಧವತಃ ಸಾಧೋಃ ಕಿಮನ್ಯದವಶಿಷ್ಯತೇ') ಎಂಬ ನಿಲುವು ಹರಿದಾಸರ ಆದರವನ್ನು ಸೂರೆಗೊಂಡಿದೆ.

ಭಾಗವತದಲ್ಲಿ ಕಪಿಲರು ದೇವಹೂತಿಗೆ ಭಕ್ತಿಯೋಗವು ಬಹುವಿಧವಾದುದೆಂದು ಹೇಳಿದ್ದಾರೆ. ಸಾತ್ತ್ವಿಕ, ರಾಜಸ, ತಾಮಸ ಎಂಬ ಸಗುಣಭಕ್ತಿವಿಧಗಳು , ಅವನ್ನು ಮೀರಿದ ನಿರ್ಗುಣವೆಂಬ ಆತ್ಯಂತಿಕ ಭಕ್ತಿ. ಅಹೇತುಕವಾದ (ಪ್ರಯೋಜನಾಪೇಕ್ಷೆಯಿಲ್ಲದೆ, ಕಾಮನೆಯಿಲ್ಲದೆ) ಅವ್ಯವಹಿತವಾದ (ನಿರಂತರವಾದ, ಎಡೆಬಿಡದ) ಪ್ರೇಮಪ್ರವಾಹವೇ ನಿರ್ಗುಣ ಭಕ್ತಿಯ ಸ್ವಾರಸ್ಯ ; ಇದೇ ಅಪರೋಕ್ಷಕ್ಕೆ ಕಾರಣವಾಗುವಂಥದು. ಸಾಲೋಕ್ಯ, ಸಾರಿಷ್ಟಿ, ಸಾಮೀಪ್ಯ, ಸಾಯುಜ್ಯಗಳೆಂಬ ಮುಕ್ತಿಗಳಲ್ಲಿ ಆಯಾ ಫಲವನ್ನು ನೀಡುವೆನೆಂದರೂ ಅದಕ್ಕೆ ಒಡಂಬಡದೆ 'ನಿನ್ನ ಸೇವೆಯನ್ನಷ್ಟೇ ಕೊಡು' ಎಂದು ಬೇಡಿಕೊಳ್ಳುವ ಭಾವ. ಈ ಬಗೆಯ ಭಕ್ತಿಯ ಮುಖ್ಯಸಾಧಕತ್ವವನ್ನೂ ಆಧಿಕ್ಯವನ್ನೂ ಶ್ರೀಪಾದರಾಜರೂ, ವ್ಯಾಸರಾಯಸ್ವಾಮಿಗಳೂ, ಪುರಂದರದಾಸರೂ ತಮ್ಮ ಕೃತಿಗಳಲ್ಲಿ ಎತ್ತಿ ತೋರಿಸಿದ್ದಾರೆ.

ಜೀವಾತ್ಮ ಪರಮಾತ್ಮರಿಗೆ ಇರುವ ನಿತ್ಯಸಂಬಂಧದಲ್ಲಿ ಭಕ್ತಿಯೇ ಮುಖ್ಯಪ್ರಕಾರ. 'ಭಜ್' ಎಂಬ ಧಾತುವಿನಿಂದಾದ ಈ ಪದಕ್ಕೆ "ಸೇರು", "ಆಶ್ರಯಿಸು", ಎಂದು ಅರ್ಥ. ಆಶ್ರಯವನ್ನು ಬಯಸುವವನು ಜೀವಾತ್ಮ;

ಆಶ್ರಯವನ್ನು ನೀಡುವವನು ಪರಮಾತ್ಮ; ಆಶ್ರಯವನ್ನು ಬಯಸಿ ಪಡೆದು ಕೊಳ್ಳುವುದೇ ಭಕ್ತಿ. ಭಕ್ತಿಯಲ್ಲಿ ಅರಿವಿನ ಅಂಶವಿದೆ (ಜ್ಞಾನ), ಪ್ರೀತಿಯ ಅಂಶವೂ ಇದೆ (ಸ್ನೇಹ). ವಸ್ತುವಿನ ಮೇಲೆ ಪ್ರೀತಿ ಒದಗಬೇಕಾದರೆ ಅದರ ಹಿರಿಮೆಯನ್ನು ಕುರಿತ ಅರಿವಿರಬೇಕು (ಮಾಹಾತ್ಮ್ಯಜ್ಞಾನ), ಅದನ್ನು ಪಡೆದುಕೊಳ್ಳುವ ಬಗೆಯ ಅರಿವೂ ಇರಬೇಕು (ಇಷ್ಟಸಾಧನತಾ ಜ್ಞಾನ). ಪ್ರೀತಿಯಲ್ಲಿ ಪ್ರಾಪಂಚಿಕ ವಿಷಯಗಳ ಬಯಕೆಯಿದ್ದರೆ ಅದು 'ಮಲಭಕ್ತಿ'; ಪ್ರಾಪಂಚಿಕ ವಿಷಯಗಳು ಅಸಾರವಾದುವು ಎಂಬ ವಿರಕ್ತಿ ಯಿದ್ದು, ಪರಮಾತ್ಮನ ಪ್ರಸಾದವೊಂದರಿಂದಲೇ ಮುಕ್ತಿಯೆನ್ನುವ ಕಾರಣ ದಿಂದ ಮುಕ್ತಿಗೆ ನೆರವಾಗುವ ಜ್ಞಾನವನ್ನು ಪಡೆದುಕೊಳ್ಳಬೇಕೆಂಬ ಕಾತರ ವಿದ್ದರೆ, ಅದಕ್ಕನುಗುಣವಾದ ಸ್ನೇಹವಿದ್ದರೆ ಅದು 'ಅಮಲಭಕ್ತಿ'. ವ್ಯಾಸ ರಾಯಸ್ವಾಮಿಗಳು ತಮ್ಮ ಪ್ರಮೇಯರತ್ನಮಾಲಿಕೆಯಲ್ಲಿ 'ಅಮಲಾಭಕ್ತಿಶ್ಚ ತತ್ಸಾಧನಂ' ಎಂದು ಹೇಳಿರುವುದರ ಅರ್ಥ ಇದು. ಮಂದ-ಮಧ್ಯಮಾಧಿ ಕಾರಿಗಳಿಗೆ ಮಲಭಕ್ತಿಯೆಂದೂ, ಉತ್ತಮಾಧಿಕಾರಿಗಳಿಗೆ ಅಮಲಭಕ್ತಿ ಯೆಂದೂ ವಿವರಣೆ. ಅಮಲಭಕ್ತಿಯಲ್ಲಿ ಸಂಸಾರ ಬಂಧನದಿಂದ ಪಾರಾಗು ವುದು (ಅನಿಷ್ಟ ನಿವೃತ್ತಿ) ಅಮುಖ್ಯ ಫಲ; ಮುಕ್ತಿಯು ದೊರಕುವುದು (ಇಷ್ಟಪ್ರಾಪ್ತಿ) ಮುಖ್ಯ ಫಲ. ನಿತ್ಯಜೀವನದ ಎಲ್ಲ ವಿವರಗಳಲ್ಲೂ ಭಕ್ತಿ ಸೇರಿದರೆ ಅದು ಮುಕ್ತಿಗೆ ಸಾಧನವಾಗುತ್ತದೆ.

ಜ್ಞಾನ, ಭಕ್ತಿಗಳೆರಡೂ ಜೀವನಿಗೆ ಸ್ವರೂಪಭೂತವಾದ ಗುಣಗಳು ಆದರೆ ಅವು ಅನಾದ್ಯಜ್ಞಾನ, ಹರಿವಿಸ್ಮರಣೆಗಳಿಂದಾಗಿ ಮರೆಮಾಚಿಕೋಗಿವೆ, ಅವು ಮತ್ತೆ ಪ್ರಕಾಶಕ್ಕೆ ಬರಲು ವಿರಕ್ತಿ, ಸತ್ಸಂಗ, ಸಚ್ಛಾಸ್ತ್ರಶ್ರವಣ, ವಿಹಿತಕರ್ಮಾನುಷ್ಠಾನ, ದಾನ, ತೀರ್ಥಯಾತ್ರೆ, ತಪಸ್ಸು ಮೊದಲಾದುವು ನೆರವಾಗುತ್ತವೆ ವಿಹಿತಕರ್ಮಾನುಷ್ಠಾನ, ಸಚ್ಛಾಸ್ತ್ರಶ್ರವಣಗಳಿಂದ ಮನಸ್ಸಿನ ಕೊಳೆ ಹರಿಯುವುದೆಂದೂ (ಮನೋಮಲನಾಶ), ಸತ್ಸಂಗ, ವಿರಕ್ತಿ, ಹರಿಕಥಾಶ್ರವಣ, ತೀರ್ಥಯಾತ್ರೆ ಮೊದಲಾದವುಗಳಿಂದ ಭಕ್ತಿಯು ದೃಢ ವಾಗುವುದೆಂದೂ ಕಲ್ಪನೆ. ಭಕ್ತಿಯ ಸ್ಪಷ್ಟತೆ ಮತ್ತು ದಾರ್ಢ್ಯಗಳು ಜೀವರುಗಳ ಸ್ವರೂಪ, ಯೋಗ್ಯತೆಗಳಲ್ಲಿರುವ ತಾರತಮ್ಯವನ್ನು ಅನುಸರಿ ಸುತ್ತವೆ.

ಭಕ್ತಿಯು ನವವಿಧವಾದುದೆಂದು ಭಾಗವತರ ಕಲ್ಪನೆ. ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮ ನಿವೇದನ ಈ ಒಂಬತ್ತರಲ್ಲಿ ಹಿಂದಿನದು ಮುಂದಿನದಕ್ಕೆ ಉಪಪಾದಕ ಮತ್ತು ಸಾಧಕ. ಹರಿಕಥಾಶ್ರವಣ ಮೊದಲ ಹೆಜ್ಜೆ; ಆತ್ಮ ನಿವೇದನ ಕಡೆಯ ಹೆಜ್ಜೆ. ಹರಿಯೇ ತನ್ನ ಅಂತರ್ಯಾಮಿಯಾಗಿ ತನಗೆ ನಿಯಾಮಕ, ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ತನಗೆ ಸ್ವಾಮಿ, ತಾನು ಮಾಡುವ ಸಕಲವೂ ಹರಿಸೇವೆ ಎಂಬ ಭಾವನೆಯೇ ಆತ್ಮನಿವೇದನವೆನಿಸಿಕೊಳ್ಳುತ್ತದೆ. ನಾರದರೂ ಭಕ್ತಿಯಲ್ಲಿ ಸರ್ವಸಮರ್ಪಣ ಭಾವವೇ ಮುಖ್ಯವೆಂದು ಹೇಳಿ ದ್ದಾರೆ ('ನಾರದಸ್ತು ತದರ್ಪಿತಾಖಿಲಾಚಾರಿತಾ'). ಮತ್ತು ಪರಮಾತ್ಮ ನನ್ನು ಮರೆತಾಗ ದುಗುಡವುಂಟಾಗುವುದು ('ತದ್ವಿಸ್ಮರಣೇ ವ್ಯಾಕುಲತಾ') ಭಕ್ತಿಯ ಲಕ್ಷಣ. ಇದು ಆರ್ತಭಾವವೆನಿಸಿಕೊಳ್ಳುತ್ತದೆ.

ಶಂಕರಾಭರಣ ತ್ರಿವಿಡೆ

ನಿನ್ನ ಭಕುತಿಯನ್ನು ಬೀರೋ ದೇವ ಪ

ಎನ್ನ ಮನ್ನಿಸಿ ಸಲಹುವರಾರೊ ಅ

ಪನ್ನಂಗಶಯನ ಲಕ್ಷ್ಮೀಶ ವೇದ
ಸನ್ನುತವಾದ ಸರ್ವೇಶ
ಇನ್ನು ಬಿಡಿಸೊ ಮೋಹಪಾಶ ಆ
ಪನ್ನ ರಕ್ಷಕ ಶ್ರೀನಿವಾಸ ೧

ನಾರದ ಗಾನವಿಲೋಲ ಸ್ವಾಮಿ
ಭೂರಿ ಭಕ್ತರ ಪರಿಪಾಲ
ಶ್ರೀ ರಮಣ ಕರುಣಾಲವಾಲ ದೇವ
ನೀರದ ಶ್ಯಾಮ ಗೋಪಾಲ ೨

ಕರಿರಾಜವರದ ಅಪ್ರಮೇಯ ಎನ್ನ
ಅರಿತು ಪಾಲಿಸೊ ಯೋಗಿ ಧ್ಯೇಯ
ಸುರಮುನಿ ಹೃದಯ ನಿಕಾಯ
ಗುರು ಪುರಂದರವಿಠ್ಠಲರೇಯ ೩

ಪನ್ನಂಗ—ಪನ್ನಗ, ಶೇಷ.
ವೇದ ಸನ್ನುತ ಪಾದ—'ಸರ್ವೇ ವೇದಾ ಯತ್ಪದಮಾಮನಂತಿ' ಎನ್ನುವ ಉಪನಿಷದ್ವಾಕ್ಯದ ಛಾಯೆ.
ಆಪನ್ನ ರಕ್ಷಕ—ತೊಂದರೆ (ಆಪತ್ತು)ಗಳಿಗೆ ಒಳಗಾದವರನ್ನು ಕಾಪಿಡುವವನು.
ಕರುಣಾಲವಾಲ—ಗಿಡಕ್ಕೆ ನೀರಿನ ಪಾತಿಯಿದ್ದಂತೆ, ಜೀವನಿಗೆ ಪರಮಾತ್ಮನ ದಯೆ.
ನೀರದ ಶ್ಯಾಮ—ಮೋಡ(ನೀರ-ದ)ದಂತೆ ನೀಲಿಗಪ್ಪಿನ ಮೈಯುಳ್ಳವನು.
ಯೋಗಿ ಧ್ಯೇಯ—ಯೋಗಿಗಳ ಧ್ಯಾನಕ್ಕೆ ವಿಷಯನಾದವನು.
ಸುರಮುನಿ ಹೃದಯ ನಿಕಾಯ—ದೇವತೆಗಳ ಮತ್ತು ಮುನಿಜನರ ಹೃದಯವೇ ತನ್ನ ಮೈಯಾಗಿ ಉಳ್ಳವನು.

ಪಂತುವರಾಳಿ ಚಾಪು

ನಂಬಿ ಭಜಿಸಿರೋ ಜನರು ನಂಬಿ ಭಜಿಸಿರೋ ಪ

ನಂಬಿ ಭಜಿಸಿ ಜನದ ಡಂಭಕತನವ ಬಿಟ್ಟು
ಅಂಬುಜಾಕ್ಷ ಚಾಣೂರ ಮಲ್ಲಾರಿಯು ಅ

ಚಲ್ಲಣವ ಉಟ್ಟು ತೊಟ್ಟು ಮಲ್ಲಗಟ್ಟಿ ಬಿಗಿದು ಕಟ್ಟಿ ಗೋವ
ಳಿಲ್ಲರೊಡನೆ ಕೂಡಿ ಪೊಕ್ಕು ಮಲ್ಲರಂಗವ ಬಲರಾಮ ಕೂಡಿ ಅಡಿ ಕು
ವಲಯಾಗಜವ ಪಿಡಿದು ಇಂಥಾ
ಬಿಲ್ಲನು ಲಘುಮಾಡಿದನೆಂಬ ಮಲ್ಲಾರಿಯು ೧

ಅಟ್ಟಿಗುಟ್ಟಿ ತೋಳು ತೊಡೆಯ ತಟ್ಟಿ ಬೊಬ್ಬೆ
ನಿಟ್ಟು ಬೆನ್ನಟ್ಟಿ ಗಗನಕ್ಕೆ ಪುಟ ನೆಗೆಯುತ
ಬಿಟ್ಟಿ ಮುಷ್ಟಿಕನ ಗೋಣು ಮೆಟ್ಟಿ ಅತುಳ ರಜಕ
ಜಟ್ಟಿ ಮೆರೆದ ಚಾಣೂರ ಮಲ್ಲಾರಿಯು ೨

ಕೊಂಬು ಕೊಳಲು ಜಕ್ಕೆ ಢಕ್ಕೆ ಬೊಬ್ಬುಳಿಯಲ್ಲಿ ಬಾರಿಸುತ್ತ
ಭೊಂ ಭೊಂ ಭೊಂ ಭೊಂ ಭೊಂ ಎಂಬ
ಶಂಬ ರನ್ನ ರಭಸದಿ ಮಾಯವಿಡಲು ಅಂಬುಧಿಯೊಳಗಲ್ಲಾಡಿ
ಅಂಬುಜಾಕ್ಷ ಚಾಣೂರ ಮಲ್ಲಾರಿಯು ೩

ಮಂಡೆ ಗಲ್ಲವ ಪಿಡಿದು ದೈತ್ಯ ಬಿಡದೆ ಬಲದ
ದೊಡ್ಡ ತಾಂಡವ ಚಾಣೂರ ಶಿರವ ಕಡಿಯುತ
ಖಂಡ ತುಂಡ ಮಾಡಿ ಅಸುರ
ಕಂಡು ಹಾ ಹಾ ಎನಲು ಜಗದಿ ಮೆರೆದ ಚಾಣೂರ ಮಲ್ಲಾರಿಯು ೪

ಮಾವನ ಶಿರವ ಕಡಿದು ದೇವಕಿಗೆ ಸಂತೋಷವಿತ್ತು
ದೇವ ಉಗ್ರಸೇನಗೊಲಿದು ಪಟ್ಟಗಟ್ಟಿದ
ದೇವತೆಯರು ಗಗನದಲ್ಲಿ ಪೂವಿನ ಮಳೆಗರೆಯಲಾಗಿ
ದೇವ ಪುರಂದರವಿಠಲರಾಯ ತಾನು ಮೆಚ್ಚಿದ ೫

ಮಲ್ಲಾರಿ—ಕಂಸನು ಬಲರಾಮ ಕೃಷ್ಣರನ್ನು ಕೊಲ್ಲಲು ಕಳುಹಿಸಿದ ಚಾಣೂರ ಮುಷ್ಟಿಕ ಎಂಬ ಮಲ್ಲರನ್ನು ಕೊಂದವನು. ಈ ಪದದಲ್ಲಿ ಕೃಷ್ಣನು ಮಲ್ಲರಿಬ್ಬರನ್ನೂ ಸೆಣಸಿ ಕೊಂದ ವರ್ಣನೆಯಿದೆ. ಕಡೆಯ ನುಡಿಯಲ್ಲಿ ಕೃಷ್ಣನು ತನ್ನ ಸೋದರಮಾವನಾದ ಕಂಸನನ್ನೂ ಕೊಂದ ವಿವರವಿದೆ. ಕಂಸನು ಸೆರೆಯಲ್ಲಿಟ್ಟ ತಂದೆ ಉಗ್ರಸೇನನನ್ನು ಕೃಷ್ಣನು ಸೆರೆಯಿಂದ ಬಿಡಿಸಿ ಮತ್ತೆ ಮಥುರೆಯ ಅರಸನೆಂದು ನೇಮಿಸಿದುದನ್ನೂ ಹೇಳಿದೆ.

ನಾದನಾಮಕ್ರಿಯೆ ಆದಿ

ದಾಸನ್ನ ಮಾಡಿಕೊ ಎನ್ನ, ಇಷ್ಟು ಪ

ಘಾಸಿ ಮಾಡುವರೇನೊ ಕರುಣಾಸಂಪನ್ನ ಅ

ದುರುಳ ಬುದ್ಧಿಗಳೆಲ್ಲ ಬಿಡಿಸೋ ನಿನ್ನ
ಕರುಣ ಕವಚವೆನ್ನ ಹರಣಕ್ಕೆ ತೊಡಿಸೊ
ಚರಣ ಸೇವೆ ಎನಗೆ ಕೊಡಿಸೊ
ಅಭಯಕರಪುಷ್ಪ ಎನ್ನಯ ಶಿರದೊಳು ಮುಡಿಸೊ ೧

ದೃಢಭಕ್ತಿ ನಿನ್ನಲ್ಲಿ ಬೇಡಿ ದೇವ
ಅಡಿಗೆರಗುವೆನಯ್ಯ ಅನುದಿನ ಪಾಡಿ
ಕಡೆಗಣ್ಣಲೇಕೆನ್ನ ನೋಡಿ ಬಿಡುವೆ
ಕೊಡು ನಿನ್ನ ಧ್ಯಾನವ ಮನ ಶುಚಿ ಮಾಡಿ ೨

ಮೊರೆ ಹೊಕ್ಕವರ ಕಾಯ್ವ ಬಿರುದು ನೀ
ಮರೆಯದೆ ರಕ್ಷಣೆ ಮಾಡೆನ್ನ ಪೊರೆದು
ದುರಿತ ರಾಶಿಗಳೆಲ್ಲ ತರಿದು ಸ್ವಾಮಿ
ಪುರಂದರವಿಠಲ ಕರುಣದಿ ಕರೆದು ೩

ಹರಣಕ್ಕೆ—ಪ್ರಾಣಕ್ಕೆ.
ಅಭಯಕರಪುಷ್ಪ—ಅಭಯವನ್ನುಂಟುಮಾಡುವ ಹೂವನ್ನು.

## ೧೯೦

ಧನ್ಯಾಸಿ ಆದಿ

ಕಡು ಭಕುತಿಂದಲಿ ಕೃಷ್ಣನ ನೆನೆವಗೆ ಸತ್ಯವಚನವೇ ಸಾಕ್ಷಿ ಪ

ದೃಢ ಭಕುತಿಂದಲಿ ಉಣಬಡಿಸಿದವಗೆ ಷಡುರಸಾನ್ನವೇ ಸಾಕ್ಷಿ ಅ

ಮಡದಿ ಮಕ್ಕಳನು ಮಿಡುಕಿಸಿದವಗೆ ಕಡುದಾರಿದ್ರ್ಯವೆ ಸಾಕ್ಷಿ
ಪಡೆದು ದಾನಧರ್ಮ ಮಾಡದವನು ಪರರಿಗೆ ಬಾಯ್ಬಿಡುವುದೆ ಸಾಕ್ಷಿ ೧

ತಾನೊಂದುಂಡು ಪರರಿಗೊಂದಿಕ್ಕುವಗೆ ಗುಲ್ಮರೋಗವೆ ಸಾಕ್ಷಿ
ಹೀನನಾಗಿ ಗುರುಹಿರಿಯರ ದೂಷಿಪಗೆ ಹೀನ ನರಕವೇ ಸಾಕ್ಷಿ ೨

ಕನ್ಯಾದಾನವ ಮಾಡಿದವಗೆ ದಿವ್ಯ ಹೆಣ್ಣಿನ ಭೋಗವೆ ಸಾಕ್ಷಿ
ಕನ್ಯಾದಾನವ ಮಾಡದವನು ಹೆಣ್ಣು ಹೆಣ್ಣೆಂದು ವರಲೋದೆ ಸಾಕ್ಷಿ ೩

ಅನ್ನದಾನವ ಮಾಡಿದ ಮನುಜ ಮೃಷ್ಟಾನ್ನ ಉಂಬುವುದೆ ಸಾಕ್ಷಿ
ಅನ್ನದಾನವ ಮಾಡದವನು ಕಡು ದೈನ್ಯ ಪಡುವುದೇ ಸಾಕ್ಷಿ ೪

ಕ್ಷೇತ್ರದಾನವ ಮಾಡಿದವಗೆ ಏಕಚ್ಛತ್ರಾಧಿಪತ್ಯವೆ ಸಾಕ್ಷಿ
ಪಾತ್ರವರಿತು ಧರ್ಮ ಮಾಡಿದವನು ಸತ್ಪುತ್ರರ ಪಡೆವುದೆ ಸಾಕ್ಷಿ ೫

ಕಂಡ ಪುರುಷನಿಗೆ ಕಣ್ಣಿಡುವವಳಿಗೆ ಗಂಡನ ಕಳೆವುದೆ ಸಾಕ್ಷಿ
ಪುಂಡತನದಿ ಪರರ ಹೆಂಡಿರ ಕೆಡಿಪಗೆ ಹೆಂಡಿರ ಕಳೆವುದೆ ಸಾಕ್ಷಿ ೬

ಭಕ್ತಿಯನರಿಯದ ಅಧಮನಿಗೆಂದೂ ಕತ್ತಲೆಮನೆಯೆ ಸಾಕ್ಷಿ
ಮುಕ್ತಿ ಪಡೆವುದಕೆ ಪುರಂದರವಿಠಲನ ಭಕ್ತನಾಗಿರುವುದೆ ಸಾಕ್ಷಿ ೭

[ಪಲ್ಲವಿಗೆ ಈ ಪಾಠಾಂತರವಿದೆ—ಕಡುಕೃಪೆಯಿಂದ ಹರಿ ಒಲಿದವನಿಗೆ ನಡೆನುಡಿ ಸತ್ಯವೆ ಸಾಕ್ಷಿ.]

ಸಾವೇರಿ | ಅಟ್ಟ

ನಿನ್ನನೇ ನಂಬಿದೆನು ನೀನೆನ್ನ ಸಲಹಯ್ಯ ಪ

ಎನ್ನ ಗುಣದೋಷಗಳನೆಣಿಸಬೇಡಯ್ಯ ಅ

ಬಾಲ್ಯದಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು
ಮೇಲೆ ಯೌವನ ಮದದಿ ಮುಂದರಿಯದಿದ್ದೆ
ಜಾಲ ಸಂಸಾರದಲಿ ಸಿಲುಕಿ ಬಳಲಿದೆನಯ್ಯ
ಪಾಲಿಸೋ ಪರಮಾತ್ಮ ಭಕ್ತಿಯ ಕೊಟ್ಟು ೧

ಆಸೆಯೆಂಬುದು ಅಜನ ಲೋಕವನು ಮುಟ್ಟುತಿದೆ
ಬೇಸರದು ಸ್ತ್ರೀಯರಲಿ ಬುದ್ಧಿಯೆನಗೆ
ವಾಸುದೇವನ ಸ್ಮರಣೆಯೊಮ್ಮೆಯಾದರು ಇಲ್ಲ
ಕ್ಲೇಶವನು ಬಿಡಿಸಿ ನಿನ್ನ ದಾಸನೆನಿಸಯ್ಯ ೨

ಈ ತೆರದಿ ಕಾಲವನು ಇಂದಿರೇಶನೆ ಕಳೆದೆ
ಭೀತಿಯಿಲ್ಲದೆ ಜ್ಞಾನರಹಿತನಾಗಿ
ಮಾತೆ ತನ್ನಯ ಶಿಶುವ ಮನ್ನಿಸುವ ತೆರನಂತೆ
ದಾತ ಪುರಂದರವಿಠಲ ದಯಮಾಡಿ ಸಲಹೊ ೩

ಅಜನ ಲೋಕವನು—ಬ್ರಹ್ಮಲೋಕವನ್ನು, ಎಂದರೆ ಮುಗಿಲುಮುಟ್ಟಿದೆ.

ಭೀತಿಯಿಲ್ಲದೆ—ಸಂಸಾರ ದುಃಖದ ಅಂಜಿಕೆಯಿಲ್ಲದೆ, ನರಕ ಒದಗೀತೆಂಬ ಕಳವಳ ವಿಲ್ಲದೆ.

೧೯೨

ಯರುಕುಲಕಾಂಬೋದಿ ಚಾಪು

ಒಂದೆ ಮನದಿ ನಾನಿಂದು ನಮಿಸುವೆ
ಸಿಂಧುಶಯನನೆ ಮಂದಹಾಸನೆ ಪ

ಬಂದ ದುರಿತಗಳೊಂದು ಕೂಡದೆ
ತಂದೆ ಸಲಹಬೇಕೋ ಅ

ನಿನ್ನ ಹೊರತು ನಾನನ್ಯರೊಬ್ಬರ
ಇನ್ನು ಕಾಣೆನೊ ಎನ್ನ ಸಾಕುವ
ಚೆನ್ನವಾಗಿ ಪ್ರಸನ್ನನಾಗೆಲೊ
ಘನ್ನ ಮಹಿಮ ನೀನು ೧

ಕೋರಿ ನಿನ್ನನು ಬಾರಿ ಬಾರಿಗೆ
ಸಾರಿದೆ ನಾ ವಾರಿಜಾಕ್ಷನೆ
ತೋರು ನಿನ್ನಯ ಚಾರುಚರಣವ ಅ
ಪಾರ ಕರುಣಾನಿಧಿಯೆ ೨

ತುಂಗ ನಿನ್ನ ಪಾದಾಬ್ಜಭೃಂಗ ನಾ
ಮಂಗಳಾಂಗನೆ ಭಂಗಮಾಡದೆ
ರಂಗ ನಿನ್ನಂತರಂಗ ಭಕ್ತರ
ಸಂಗ ನೀಡಬೇಕೋ ೩

ಕಾಮಜನಕ ಸುದಾಮಮಿತ್ರನೆ
ದಾಮವುದರನೆ ನೇಮದಿಂದಲಿ
ರಾಮ ನಿನ್ನಯ ನಾಮ ಭಜನೆಗಳ
ಪ್ರೇಮ ಮಾಡಬೇಕೊ ೪

ದೇವದೇವನೆ ಸಾರ್ವಭೌಮನೆ
ಯಾವ ಕಾಲದಿ ಯಾವ ದೇಶದಿ
ಜೀವರೆಲ್ಲರ ಕಾವ ದೇವನೆ
ಗೋವಿಂದ ಗೋಪತಿಯೆ ೫

ಈಶ ಎನುತೆಂಬೆ ಜಗದೀಶ ನಿನ್ನನು
ಶ್ರೀಶ ಮನ್ನಿಸೊ ಶೇಷಶಯನನೆ
ದಾಸ ಎನ್ನನು ಗಾಸಿ ಮಾಡದೆ
ಪೋಷಿಸಬೇಕೋ ನೀನು ೬

ಪರಾಕು ಎಂಬೆ ನಾ ಪರಾಕುಮಾಡದೆ
ಹರಾದಿ ವಂದ್ಯನೆ ಸುರರ ಪಕ್ಷನೆ
ಚರಾಚರದಲಿ ವಿರಾಜಿತ ತಂದೆ
ಪುರಂದರವಿಠಲರಾಯ ೭

ಪರಾಕು—ಈ ಮಾತಿಗೆ ಎರಡರ್ಥಗಳಿವೆ; ಎರಡನ್ನೂ ದಾಸರು ಬಳಸಿದ್ದಾರೆ. ಮೊದಲ ಅರ್ಥ, 'ಕೇಳು'. 'ಗಮನವಿಡು' ; ಎರಡನೆ ಅರ್ಥ 'ಉದಾಸೀನ ಮಾಡಿ', 'ಅಸಡ್ಡೆ ತೋರಿಸಿ' (ಪರಾಂಚ್, ಬೆನ್ನು ತಿರುಗಿಸಿ)



ಕಾಂಬೋದಿ ಝಂಪೆ

ಕೆಂಡಕೆ ಒರಳೆ ಮುತ್ತುವುದುಂಟೆ
ಪಾಂಡುರಂಗನ ದಾಸರಿಗೆ ಭಯವುಂಟೆ ಪ

ಆನೆ ಸಿಂಹನ ಕೂಡೆ ಸ್ನೇಹ ಬೆಳೆಸುವುದುಂಟೆ
ಶ್ವಾನಗೆ ಹೆಬ್ಬುಲಿ ಕೂಡೆ ಸರಸವುಂಟೆ
ಏನೆಂಬೆ ಮನದಲ್ಲಿ ಸರ್ವದಾ ನಿನ್ನಂಘ್ರಿ
ಧ್ಯಾನದೊಳಿದ್ದವಗೆ ದಾರಿದ್ರ್ಯವುಂಟೆ ೧

ಕತ್ತಲೆಯೊಳು ರವಿ ಕವಿದು ಮುಚ್ಚುವುದುಂಟೆ
ಹುತ್ತಸರ್ಪನ್ನ ಕಪ್ಪೆ ನುಂಗುವುದುಂಟೆ
ಅತ್ತಿತ್ತ ತೊಲಗದೆ ಚಿತ್ತಜನಯ್ಯನ
ಚಿತ್ತದೊಳಿಟ್ಟವರಿಗೆ ಚಿಂತೆಯುಂಟೆ ೨

ಆ ಮಾರುತನ ಗುದ್ದಿ ಅಂಗ ನೋಯಿವುದುಂಟೆ
ಹೇಮಗಿರಿಯು ವಜ್ರ ಸೀಳುವುದುಂಟೆ
ಸ್ವಾಮಿ ಶ್ರೀಪುರಂದರವಿಠಲರಾಯನ
ನಾಮಧಾರಿಗಳಿಗೆ ನರಕವುಂಟೆ ೩

ಒರಳೆ— ವರಟೆ, ಕಣಜಿಗಹುಳು.

ಶ್ವಾನಗೆ—ನಾಯಿಗೆ.

ಮಾರುತನ—ಗಾಳಿಯನ್ನು.

ಹೇಮಗಿರಿ—ಮೇರುಪರ್ವತ.

ನಾಮಧಾರಿಗಳಿಗೆ—ನಾಮಸ್ಮರಣೆಯನ್ನು ಮಾಡುತ್ತಿರುವವರಿಗೆ.

ಕಾಂಬೋದಿ ಝಂಪೆ

ನಿನ್ನ ಒಲುಮೆಗೆ ನಾನು ಈಡೇನೋ ರಂಗ ಪ

ಸಣ್ಣವನು ನಾನಯ್ಯ ಪನ್ನಗಾಚಲವಾಸ ಅ

ಅಜಿತನಾಮಕ ನೀನು ಅಲ್ಪಶಕ್ತನು ನಾನು
ಕುಜನದೂಷಕ ನೀನು ಅವರ ಮಿತ್ರನು ನಾನು
ವ್ರಜದ ಸ್ತ್ರೀಯರ ಮನವ ಸೂರೆಗೊಂಡ ಸ್ವಾಮಿ
ಅಜನ ಪೆತ್ತ ನಿನಗೆ ಸರಿ ಯಾರು ಪೇಳಯ್ಯ ೧

ಅನೇಕ ಅದ್ಭುತ ಚರಿತ್ರ ಪಿಡಿದೆ ಹೇಸಿಗೆ ಮಾರ್ಗ
ಅನೇಕ ಭಕ್ತರ ಪೋಷಕ ನಾನವರ ದೂಷಕ
ಅನೇಕ ಬಾಹುಗಳು ಮತ್ತನೇಕ ಪಾದಗಳಯ್ಯ
ಅನೇಕ ದಿವ್ಯಾಭರಣ ವಿಶ್ವರೂಪ ನಿನಗೆ ೨

ಪರಮಪಾವನ ನೀನು ದುಷ್ಟ ತರಳನು ನಾನು
ಕರುಣಾಬ್ಧಿಯು ನೀನು ಕಠಿಣ ಚಿತ್ತ ನಾನು
ಶರಣೆಂಬೆ ಗಿರಿರಾಯ ನಿನ್ನ ಪೋಲುವರುಂಟೆ
ಮರಳಿ ಪುಟ್ಟದೆ ಮಾಡು ತಂದೆ ಪುರಂದರವಿಠಲ ೩

ಈಡೇನೋ—ಸರಿಯೇ ? ಸಮಾನನೇ ?
ಪನ್ನಗಾಚಲ—ಶೇಷಾಚಲ (ತಿರುಮಲೆಯ ಬೆಟ್ಟಗಳಲ್ಲೊಂದು).
ಅಜಿತ—ಸರ್ವಶಕ್ತ.
ಕುಜನದೂಷಕ—ಕೆಟ್ಟವರನ್ನು ಭಂಗಪಡಿಸುವವ.
ವ್ರಜ—ಗೋಕುಲ.
ಅಜನ ಪೆತ್ತ—ಬ್ರಹ್ಮನನ್ನು ತನ್ನ ನಾಭಿಕಮಲದಿಂದ ಹೊರಹೊಮ್ಮಿಸಿದ.

ಆನಂದಭೈರವಿ ಆದಿ

ಯಾರು ಒಲಿದರೇನು ನಮಗಿ
ನ್ನಾರು ಮುನಿದರೇನು ಪ

ಕ್ಷೀರಸಾಗರಶಾಯಿಯಾದವನ
ಸೇರಿದಂಥ ಹರಿದಾಸರಿಗೆ ಅ

ಊರನಾಳುವ ದೊರೆಗಳು ನಮ್ಮನ್ನು ದೂರ ಅಟ್ಟಿದರೇನು
ಘೋರಾರಣ್ಯದಿ ತಿರುಗುವ ಮೃಗಗಳು ಅಡ್ಡಗಟ್ಟಿದರೇನು
ಮಾರಿಹಿಂಡು ಮತ್ತೆ ಮುಸುಕಿನ ದಂಡು ಮೈಗೆ ಮುತ್ತಿದರೇನು
ವಾರಿಜನಾಭನ ವಸುದೇವಸುತನ ಸಾರುವಂಥ ಹರಿದಾಸರಿಗೆ ೧

ಪಡೆದ ತಾಯಿ ತಂದೆ ನಮ್ಮೊಳು ಅಹಿತ ಮಾಡಿದರೇನು
ಮಡದಿ ಮಕ್ಕಳು ಮನೆಯ ನೆಂಟರು ಮುನಿಸುಗುಟ್ಟಿದರೇನು
ಒಡನಾಡುವ ಗೆಳೆಯರು ನಮ್ಮೊಳು ವೈರವ ಬೆಳೆಸಿದರೇನು
ಕಡಲಶಯನ ಕರುಣಾನಿಧಿ ನಾಮವು ಒಡಲೊಳಗಿಹ ಹರಿದಾಸರಿಗೆ ೨

ಕಾನನದೊಳ್ಹರಿದಾಡುವ ಸರ್ಪವು ಕಾಲಿಗೆ ಸುತ್ತಿದರೇನು
ಜೇನಿನಂದದಿ ಕೀಟ ಕ್ರಿಮಿಗಳು ಚರ್ಮಕೆ ಮುತ್ತಿದರೇನು
ಭಾನುನಂದನ ಬುಧ ಮಂಗಳರಾ ಬಲವು ತಪ್ಪಿದರೇನು
ದೀನನಾಥ ಶ್ರೀ ಪುರಂದರವಿಠಲನ ಧ್ಯಾನವುಳ್ಳ ಹರಿದಾಸರಿಗೆ ೩

ಮಾರಿಹಿಂಡು—ಕ್ಷುದ್ರದೇವತೆಗಳು, ಉಪದ್ರವವನ್ನು ರೋಗಗಳನ್ನು ಒದಗಿಸುವಂಥವು.

ಮುಸುಕಿನ ದಂಡು—ಕರಿಮೋರೆಯ, ಆ ಕ ಳ ಬಾ ಲ ದ ಕಪಿಗಳ ಗುಂಪು (ಗೋಲಾಂಗೂಲ) ; ಮುಸುಕೆಂದರೆ ಮೋಹ, ಅಜ್ಞಾನ, ಭ್ರಮೆ ಎಂದೂ ಆಗುತ್ತದೆ.

ಭಾನುನಂದನ—ಶನಿ, ಶನೈಶ್ಚರ.

ಪೂರ್ವಿ ಅಟ್ಟ

ಭಕುತರ ಸೇವೆಯ ಕೊಡುಕಂಡ್ಯ ನಿನ್ನ
ಭಕುತರ ಸಂಗವ ಕೊಡುಕಂಡ್ಯ ಹರಿಯೆ ಪ

ಶ್ರೀತುಲಸಿ ಪದುಮಾಕ್ಷದ ಸರವಿಟ್ಟು
ಪ್ರೀತಿಯಿಂದ ಏಕಾದಶಿಯ ಮಾಡಿ
ಚಾತುರ್ಜಾವದ ಹೊತ್ತು ಜಾಗರಗಳ ಮಾಡಿ
ಪೂತರೊಳಾಡುತಲಿಪ್ಪ ಶ್ರೀಹರಿಯ ೧

ಶಂಖಚಕ್ರಂಗಳನೊತ್ತಿಕೊಂಡು
ಶಂಖಚಕ್ರಧರನೆಂಜಲವನುಂಡು
ಕಿಂಕರತರ ದೇಹ ಪರವಶವಾಗಲು
ಝೇಂಕರಿಸುತ ಜರೆದಾಡುತ ನಲಿವ ೨

ದ್ವಾದಶ ನಾಮಂಗಳನುಚ್ಚರಿಸುತ
ದ್ವಾದಶ ನಾಮಂಗಳಿಟ್ಟುಕೊಂಡು
ದ್ವಾದಶಿ ಸಾಧನಿ ಪಾರಣೆಗಳ ಮಾಡಿ
ದ್ವಾದಶಮೂರ್ತಿಯ ಮನದಲಿ ನೆನೆವ ೩

ಹರಿಗೆ ಸಿರಿ ರಾಣಿವಾಸಯೆಂದೆಂಬ ಶ್ರೀ
ಹರಿಗೆ ಬೊಮ್ಮ ಕುಮಾರನೆಂದೆಂಬ
ಹರಿಗೆ ಹರನು ಮೊಮ್ಮಗನೆಂದೆಂಬ ಶ್ರೀ
ಹರಿಗೆ ಸುರರಾಳುಗಳೆಂದೆಂಬ ೪

ಆಪತ್ತು ಬಂದರೆ ಸಂಪತ್ತು ಬಂದರೆ
ಲೇಪಿಸಿಕೊಂಡಿರದೆ ನಮ್ಮ
ಶ್ರೀಪುರಂದರವಿಠಲ ಚರಣವೆಂಬ
ಪಾದಪದುಮವ ಮನದಲ್ಲಿ ನೆನೆವರ ೫

ಪದುಮಾಕ್ಷದ ನರ—ಕಮಲದ ಬೀಜಗಳ ಮಾಲೆ ; ತುಳಸೀ ಮಣಿಯ ಮಾಲೆ ಯೊಂದಿಗೆ ಭಾಗವತರು ಕೊರಳಲ್ಲಿ ಧರಿಸುತ್ತಾರೆ ; ಹೆಂಗಸರು ಜಪಕ್ಕೂ ಬಳಸುತ್ತಾರೆ

ಚತುರ್ಜಾವ—ರಾತ್ರಿಯ ನಾಲ್ಕು ಝಾವಗಳು (ಯಾಮ, ಪ್ರಹರ) ; ಏಕಾದಶಿ ಯಂದು ಎಚ್ಚರವಾಗಿರುವುದು ಜಾಗರವೆನಿಸುತ್ತದೆ

ಪೂತರೊಳು—ಪವಿತ್ರರಾದವರಲ್ಲಿ

ಎಂಜಲವನು—ಪ್ರಸಾದವನ್ನು.

ದ್ವಾದಶ ನಾಮಂಗಳನ್ನುಚ್ಚರಿಸುತ—ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷೀಕೇಶ, ಪದ್ಮ ನಾಭ, ದಾಮೋದರ.

ದ್ವಾದಶನಾಮಂಗಳಿಟ್ಟುಕೊಂಡು—ಹಣೆ, ಹೊಟ್ಟೆ, ಎದೆ, ಕತ್ತು, ಎರಡು ಬಗಲು ಗಳು, ಎರಡು ತೋಳುಗಳು, ಕಿವಿಗಳ ಹಿಂದೆ, ಬೆನ್ನು ಈ ಪ್ರದೇಶಗಳಲ್ಲಿ ಗೋಪೀಚಂದನದ ನಾಮಗಳನ್ನು ಧರಿಸುವುದು.

ದ್ವಾದಶಮೂರ್ತಿಯ—ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನಾರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ, ಕೃಷ್ಣ.

ರಾಣಿವಾಸ—ಹೆಂಡತಿ

ಲೇಪಿಸಿಕೊಂಡಿರದೆ—ಕಷ್ಟಸುಖಗಳನ್ನು ಅಂಟಿಸಿಕೊಳ್ಳದೆ



ಸಾದನಾಮಕ್ರಿಯೆ ಆದಿ

ಯಾರು ಬಿಟ್ಟರು ಕೈಯ ನೀ ಬಿಡದಿರು ಕಂಡ್ಯ
ನಾರಾಯಣ, ಸ್ವಾಮಿ
ನೀ ಬಿಟ್ಟರೆ ಮುಂದಿನ್ನಾರು ಕಾಯ್ವರ ಕಾಣೆ
ನಾರಾಯಣ ೧

ಮುಂದೆ ನೋಡಿದರೆ ಹೆಬ್ಬಾವು ನುಂಗುತಲಿದೆ
ನಾರಾಯಣ, ಸ್ವಾಮಿ
ಹಿಂದೆ ನೋಡಿದರೆ ಹೆಬ್ಬುಲಿ ಬಾಯ್ಬಿಡುತಿದೆ
ನಾರಾಯಣ ೨

ನಂಬಿ ನಾ ಪಿಡಿದರೆ ಕೊಂಬೆಲ್ಲ ಮುರಿದಾವು
ನಾರಾಯಣ, ಸ್ವಾಮಿ
ತುಂಬಿದ ಹೊಳೆಯಲ್ಲಿ ಹರಿಗೋಲು ನೇರಿದೆ
ನಾರಾಯಣ ೩

ಶಿಶು ಅವತಾರದಿ ಪಶುಗಳ ನೀ ಕಾಯ್ದೆ
ನಾರಾಯಣ, ಸ್ವಾಮಿ
ದಶ ಅವತಾರದಿ ಭೂಚಕ್ರವ ಪೊರೆದೆ
ನಾರಾಯಣ ೪

ವಿಷದ ಕಾಳಿಂಗನ ಮಡುವ ಧುಮುಕಿ ಬಂದೆ
ನಾರಾಯಣ, ಸ್ವಾಮಿ
ವಸುಧೆಯೊಳಗಧಿಕ ಶ್ರೀ ಪುರಂದರವಿಠಲನೆ
ನಾರಾಯಣ ೫

## ೧೯೮

ಕಾಂಬೋದಿ ಝಂಪೆ

ಡಂಭಕ ಭಕ್ತಿಗೆ ಮೆಚ್ಚಿ ಕೊಡನು ಕೃಷ್ಣ ಪ

ಡೊಂಬಲಾಗವ ಹಾಕಿ ಡೊಂಡೊಂಡೆ ಹೊರಳಿದರಿಲ್ಲ ಅ

ಹೆಚ್ಚೆಚ್ಚು ಬಯಸಿದರಿಲ್ಲ ಹುಚ್ಚರಿಗೆ ತಪವಿಲ್ಲ
ಕಚ್ಚೆ ಕೈ ಶುದ್ಧವಿಲ್ಲದೆ ಕರ್ಮವಿಲ್ಲ
ಬಚ್ಚಿಟ್ಟರಿಲ್ಲ ನಿರ್ಭಾಗ್ಯರಿಗ ಇಂದೆನ್ನ
ಅಚ್ಯುತಾನಂತ ಶ್ರೀ ಹರಿಯ ನೆನೆಕಂಡ್ಯ ಮನವೆ ೧

ಕೆಟ್ಟೆನೆಂದರು ಇಲ್ಲ ಕ್ಲೇಶಬಟ್ಟರು ಇಲ್ಲ
ಅಟ್ಟಡಸಿ ನಿಷ್ಠೂರ ಆಡಿದರಿಲ್ಲ
ಪಟಪಟನೆ ಕಪ್ಪೆಯಂತೊದರಿಕೊಂಡರು ಇಲ್ಲ
ಬೆಟ್ಟದಿಂದ ತಲೆಕೆಳಗೆ ಬಿದ್ದರೂ ಇಲ್ಲ ೨

ಕನ್ನವಿಟ್ಟರು ಇಲ್ಲ ಕಡಿದಾಡಿದರು ಇಲ್ಲ
ಕುನ್ನಿಯಂತೆ ಯಾವಾಗ ಕೂಗಿದರು ಇಲ್ಲ
ತಾನೆ ಕೊಡದನ್ನಕ ಕೊಸರಿಕೊಂಡರು ಇಲ್ಲ
ಚೆನ್ನ ಪುರಂದರವಿಠಲನ್ನ ದೂರಿದರಿಲ್ಲ ೩



ಕಾಂಬೋದಿ ಅಟ್ಟ

ವರುಷ ಕಾರಣವಲ್ಲ ಹರಿಭಜನೆಗೆ ಪ

ಅರಿತು ತತ್ವಜ್ಞರು ಕೇಳಿ ಸನ್ಮುದದಿ ಅ

ತರಳತನದಲಿ ಕಂಡ ಹರಿಯು ಧ್ರುವರಾಯನು
ಹಿರಿಯು ತಾನವನಪ್ಪ ಕಂಡನೇನೋ
ತರಳ ಪ್ರಹ್ಲಾದನು ನರಹರಿಯು ತಾ ಕಂಡ
ಹಿರಿಯನವನಪ್ಪ ತಾ ಮರೆಯಲಿಲ್ಲೇನೋ ೧

ಹಿರಿದಾಗಿ ಬಹುಕಾಲ ಮರದ ಮೇಲ್ ಬಾಳುವ
ಇರುಳುಗಣ್ಣಿನ ಗೂಬೆ ತಾ ದೊಡ್ಡದೆ
ಮರಿಯಾದ ಅರಗಿಣಿಯು ಹರಿಕೃಷ್ಣ ಎಂದೊದರೆ
ಮರಿ ದೊಡ್ಡದೆಂತೆಂದು ಹೇಳುವರು ಜನರು ೨

ಸರುವದಾ ವದರುವರು ಅರಣ್ಯವಾಸಿಗಳು
ಮರದಡಿಗೆ ಬಿದ್ದ ಎಲೆಗಳ ತಿನ್ನುತ
ಪರಮಪಾತಕಿ ಅಜಾಮಿಳನು ನಾರಣಾ ಎನಲು
ಭರದಿಂದ ಸಲಹಿದನು ಪುರಂದರವಿಠಲ ೩



ಮೋಹನ　　　　　　　　　　　　　　　　　　　　　　　　　ಅಟ್ಟ

ನಿನ್ನ ದಯದೃಷ್ಟಿಗೆ ಚಿತ್ತವಿಲ್ಲದಿರೆ

ಮುನ್ನೇನು ಗತಿಯು ಎನಗೆ　ಪ

ಚೆನ್ನಾರ ಚೆಲುವ ಕೇಶವರಾಯ ನಂಬಿದೆನೊ
ಧನ್ಯನ ಮಾಡಿ ಸಲಹೋ ದೇವ　ಅ

ಅರಿಯೆನೋ ತಾರತಮ್ಯಾನುಸಾರಗಳಿಂದ ಗುರುಹಿರಿಯರನು ಭಜಿಸದೆ
ಗರುವ ಅಹಂಕಾರದಲಿ ಐಶ್ವರ್ಯ ಮದದಿಂದ ಪರರ ನಿಂದಿಸುತಲಿದ್ದೆ
ಅರುಣೋದಯದಲೆದ್ದು ಕ್ಷುದ್ಬಹಳವಹುದೆಂದು ಮೋರೆ ತೊಳೆಯದೆ ಮೆಲ್ಲುತ್ತಿದ್ದೆ
ಘೋರದಂತಗಳ ಎಣಿಸಿದರೆ ನೆಲೆಗಾಣೆ ಮೊರೆಹೊಕ್ಕೆ ಹರಿ ರಕ್ಷಿಸೊ　೧

ಸ್ನಾನಮಾಡಿದರೆನ್ನ ದೇಹ ತಾಳದು ಎಂದು ಕಳ್ಳನಾಮವ ತಿದ್ದುವೆ
ಘನ್ನ ಬ್ರಹ್ಮರು ಉಪನ್ಯಾಸ ಮಾಡಿದರೆ ಕಂಡು ಕೋಪದಿ ನೂಕುವೆ
ದೀನತ್ವದಿಂದ ಒಬ್ಬರಿಗೆ ರುಪ್ಪಿ ಕೊಡದಲೆ ಧನಗಳಿಸಿ ಕೂಡ್ಹಾಕುವೆ
ಏನು ಮಾಡಲಿ ಜನ್ಮ ವ್ಯರ್ಥವಲ್ಲದೆ ಕೆಟ್ಟೆ ನೀನೆ ರಕ್ಷಕನು ಕಾಯೊ ದೇವ　೨

ಸತಿಸುತರ ಮೆಚ್ಚಿ ತಾಯಿ ತಂದೆಯ ಕೂಡೆ ಅತಿ ದ್ವೇಷವನು ಮಾಡುವೆ
ಪ್ರತ್ಯೇಕ ಒಂಟಿಯಲಿ ಒಗೆತನದಿ ಮನೆಯೊಳಗೆ ನಿಗ್ರಹವ ಮಾಡುವೆ
ಕಥೆ ಪುರಾಣಶ್ರವಣ ಮಾಡುವರ ಬಳಿಗ್ಹೋಗಿ ಪ್ರತಿಭಂಡ ಮಾತಾಡುವೆ
ಚಿತ್ತಜನ ಪಡೆದಂಥ ಅಚ್ಯುತನ ಲಾಲಿಸೊ ಕುತ್ಸಿತ ಬುದ್ಧಿಗಳ ಬಿಡಿಸೋ ದೇವ　೩

ಇರುಳು ಹಗಲು ಮನಸಿನೊಳು ಕ್ಷುದ್ರಮಾತಿನ ಧ್ಯಾನ ಹರಿಯೆಂದು ಸ್ಮರಿಸಲಿಲ್ಲ
ಧರಧರಕ ಪರರಂಗನೆಯರ ಚೆಲುಪಿಕೆ ಕಂಡು ಬಿದ್ಹೊರಳಿ ಕೆಟ್ಟೆನಲ್ಲ
ಹೊರವರು ಎನ್ನ ಮುಪ್ಪತ್ತೆರಡು ಮಂದಿಗಳ ಗುರಿಗೆ ಬಲಿಯಾದೆನಲ್ಲ
ಶ್ರೀರಮಣ ಕ್ಷಮಿಸಯ್ಯ ಸರ್ವಾಪರಾಧಗಳ ನಿನ್ನ ಕಿಂಕರನೆನಿಸೊ　೪

ಕೆಟ್ಟ ಅಜಮಿಳಗೆ ನೀ ಕೊಟ್ಟೆ ಮುಕುತಿಯ ಬೇಗ ಕಾಯ್ದೆ ದ್ರೌಪದಿಮಾನವ
ಸೃಷ್ಟೀಶ ನೀನರಿಯ ಅವರ ಸರಿಯಾಗುವೆನೆ ದಾಸಾನುದಾಸ ನಾನು
ಇಟ್ಟು ನಿಮ್ಮ ಪಾದದಡಿಯಲ್ಲಿ ಹಲಕಾಲ ಮನವಿಡುವಂತೆ ಮಾಡಲೆನ್ನ
ಸಟೆಯನಾಡುವನಲ್ಲ ಪುರಂದರವಿಠಲ ಪಡ ಸೇರಿಸೊ ಎನ್ನನು ದೇವ　೫

ದಯದೃಷ್ಟಿಗೆ ಚಿತ್ತವಿಲ್ಲದಿರೆ—ನಿನ್ನ ಕರುಣೆಯೆಂಬ ನೋಟಕ್ಕೆ ನನ್ನಲ್ಲಿ ಅವಧಾನವಿಲ್ಲದಿದ್ದರೆ.

ಮುನ್ನೇನು—ಮುಂದೇನು.

ಕ್ಷುದ್ಭಹಳವಹುದೆಂದು—ತುಂಬ ಹಸಿವೆಯೆಂದು

ಬ್ರಹ್ಮರು—ಬ್ರಾಹ್ಮಣರು.

ರುವ್ವಿ—ಕಾಸು, ಆಣೆಯ ಹನ್ನೆರಡನೆ ಒಂದು ಭಾಗ.

ಚಿತ್ತಜನ ಪಡೆದಂಥ—ಮನ್ಮಥನನ್ನು ಮಗನಾಗಿ ಪಡೆದ.

ಧರಧರಕೆ—ಧರಧುರ , ಹೆಚ್ಚಾದ ; ಮಿಗಿಲಾದ.

ಹೊರವರು ಎನ್ನ ಮೂವತ್ತೆರಡು ಮಂದಿಗಳ ಗುರಿಗೆ . —ನಾನು ಸೇರಲಿರುವ ಮೂವತ್ತೆರಡು ನರಕಗಳು, ನರಕ, ಮಹಾನರಕ, ರಾಜನರಕ, ರಾಜರಾಜನರಕ ಎಂಬ ನಾಲ್ಕು ಭೇದಗಳಲ್ಲಿ ಒಂದೊಂದರಲ್ಲೂ ಎಂಟು ಪ್ರಭೇದಗಳು (ವಿವೇಕ ಚಿಂತಾಮಣಿಯಲ್ಲಿ ಹೆಸರುಗಳಿವೆ).



ಧನ್ಯಾಸಿ ಆದಿ

ಮನ್ಮಥಜನಕನ ಮರೆತ ಮನುಜರು
ಮರ ಮರ ಮರ ಮರಾ ಮರಾ
ಚಿನ್ಮಯರೂಪನ ಚಿಂತಿಸದವನು
ಛೀ ಛೀ ಛೀ ಛೀ ಛೀ ಮನುಜ ಪ

ಸುರರಿಂ ವಂದ್ಯನ ಸುತ್ತದ ಕಾಲು ಸೂಳೆಮನೆ ಮಂಚದ ಕಾಲು
ಉರಗಶಯನನ ನುಡಿಯದ ನಾಲಿಗೆ ಉಡುವಿನ ನಾಲಿಗೆಯು ೧

ನಾರಾಯಣನ ಕಥೆ ಕೇಳದ ಕಿವಿ ಸೋರುವ ಮಾಳಿಗೆ ನಾಳಗಳು
ಸರಸಿಜನಾಭನ ಎತ್ತದ ಹೆಗಲು ಸತ್ತ ಕುರಿಯ ಹೆಗಲು ೨

ಹರಿನೈವೇದ್ಯ ಉಣ್ಣದ ಬಾಯಿ ಹರಿದಾಡುವ ಹಾವಿನ ಹೋರು
ನರಹರಿರೂಪನ ನೋಡದ ಕಣ್ಣು ನವಿಲುಗರಿಯ ಕಣ್ಣು ೩

ಕರಿವರದನ ಪೂಜಿಸದ ಕರಗಳು ದಾರಿಯ ತೋರುವ ಮರದ ಕೈಗಳು
ಗರುಡಗಮನನ ನಮಿಸದ ಶಿರವು ಉರಗನ ವಿಷತಲೆಯು ೪

ಮಂಗಳ ಮೂರ್ತಿಯ ಪಾಡದ ಕಂಠ ಒಡೆದು ಹೋದ ಹರವಿನ ಕಂಠ
ರಂಗ ಪುರಂದರವಿಠಲನ ಮರೆತವ ರಜಕನ ಮನೆ ಕತ್ತೆಯೆ ನಿಜವು ೫

ಸುರರಿಂ ವಂದ್ಯನ ಸುತ್ತದ—ದೇವತೆಗಳಿಂದ ಪೂಜಿಸಲ್ಪಡುವ ನಾರಾಯಣನಿಗೆ ಪ್ರದಕ್ಷಿಣೆ ಮಾಡದ.
ಉಡು—ಉಡ ; ಒಂದು ಬಗೆಯ ಪ್ರಾಣಿ ; ಗೋಧೆ, ಮುಶಲಿಕೆ.
ಹಾವಿನ ಹೋರು—ಹಾವಿನ ಹುತ್ತ.
ಹರವಿನ ಕಂಠ—ಮಣ್ಣಿನ ಕೊಡದ (ಪರವಿ) ಕತ್ತು.
ರಜಕ—ಅಗಸ.

ಶಂಕರಾಭರಣ ಅಟ್ಟ

ಅಂಬಿಗ ನಾ ನಿನ್ನ ನಂಬಿದೆ ಜಗ
ದಂಬಾರಮಣ ನಿನ್ನ ನಂಬಿದೆ ಪ

ತುಂಬಿದ ಹರಿಗೋಲಂಬಿಗ ಅದ
ಕೊಂಬತ್ತು ಛಿದ್ರ ನೋಡಂಬಿಗ
ಸಂಭ್ರಮದಿಂದ ನೀನಂಬಿಗ ಅದ
ರಿಂಬು ನೋಡಿ ನಡೆಸಂಬಿಗ ೧

ಹೊಳೆಯು ಭರವ ನೋಡಂಬಿಗ ಅದಕೆ
ಸೆಳೆವು ಘನವಯ್ಯ ಅಂಬಿಗ
ಸುಳಿಯೊಳು ಮುಳುಗಿದೆ ಅಂಬಿಗ ಎನ್ನ
ಸೆಳೆದುಕೊಂಡೊಯ್ಯೊ ನೀನಂಬಿಗ ೨

ಆರು ತೆರೆಯು ನೋಡಂಬಿಗ, ಅದು
ಮೀರಿ ಬರುತಲಿದೆ ಅಂಬಿಗ
ಯಾರಿಂದಲಾಗದು ಅಂಬಿಗ ಅದ ನಿ
ವಾರಿಸಿ ದಾಟಿಸೊ ಅಂಬಿಗ ೩

ಹೊತ್ತು ಹೋಯಿತು ನೋಡಂಬಿಗ, ಅಲ್ಲಿ
ಮತ್ತೈವರೀರ್ವರು ಅಂಬಿಗ
ಒತ್ತಿನಡೆಸು ನೋಡಿ ಅಂಬಿಗ
ಎನ್ನ ಸತ್ಯಲೋಕಕೆ ಒಯ್ಯೊ ಅಂಬಿಗ ೪

ಸತ್ತ್ವಪಥದೊಳಗಂಬಿಗ ಪರಾ
ಭಕ್ತಿ ಹುಟ್ಟನು ಹಾಕಿ ಅಂಬಿಗ
ಮುಕ್ತಿದಾಯಕ ನಮ್ಮ ಪುರಂದರವಿಠಲನ
ಮುಕ್ತಿಮಂಟಪಕೊಯ್ಯೊ ಅಂಬಿಗ ೫

ಅಂಬಿಗ—ದೋಣಿ ನಡೆಸುವವ ; ಸಂಸಾರದಿಂದ ಕಡೆಹಾಯಿಸುವ ಪರಮಾತ್ಮ.

ಜಗದಂಬಾರಮಣ—ಜಗತ್ತಿಗೆ ಮೂಲಪ್ರಕೃತಿಯಾಗಿ ತಾಯಿಯಂತಿರುವ ಲಕ್ಷ್ಮಿಯ ಗಂಡ.

ಹರಿಗೋಲು—ಸಂಸಾರವೆಂಬ ನೀರಿನ ಮೇಲೆ ತೇಲುವ ದೇಹ.

ಒಂಬತ್ತು ಛಿದ್ರ—ಒಂಬತ್ತು ಬಾಗಿಲುಗಳು ('ನವದ್ವಾರ'). ವಿವರಣೆ ಆಗಲೆ ಬಂದಿದೆ.

ಇಂಬು—ನೆಲೆ.

ಹೊಳೆ—ಬದುಕೆಂಬುದು.

ಸೆಳೆವು—ಅದನ್ನು ನೂಕಿಕೊಂಡು ಹೋಗುವ ಕರ್ಮ ; ದಟ್ಟವಾಗಿದೆ.

ಸುಳಿ—ಚಕ್ರವೆಂಬುದರ ಛಾಯೆ; ಜನನ ಮರಣಗಳೆಂಬ ತಿರುಗಣಿ.

ಆರು ತೆರೆ—ಹಸಿವು, ಬಾಯಾರಿಕೆ, ಶೋಕ, ಮೋಹ, ಜರೆ, ಸಾವು ಇವು ಷಡೂರ್ಮಿಗಳೆಂದು ಪ್ರಸಿದ್ಧವಾಗಿವೆ : ಅವು ಎಲ್ಲ ಪ್ರಾಣಿಗಳನ್ನೂ ಕೊಚ್ಚಿಕೊಂಡು ಹೋಗುವುವು.

ಹೊತ್ತು ಹೋಯಿತು—ಬರಿದೆ ಆಯುಸ್ಸು ಸಾಗುತ್ತಿದೆ.

ಐವರೀರ್ವರು—ಐದು ಜ್ಞಾನೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಗೆ ಚರ್ಮ), ಐದು ಕರ್ಮೇಂದ್ರಿಯಗಳು (ಕೈ, ಕಾಲು, ಮಾತು, ಪಾಯು, ಉಪಸ್ಥ).

ಸತ್ಯಲೋಕಕೆ—ತತ್ತ್ವದರ್ಶನಕ್ಕೆ ; ಮಾಯೆಯ ಈ ಸಂಸಾರದಿಂದ ದಿಟವಾದ ಪರಮಾತ್ಮನೆಡೆಗೆ.

ಸತ್ತ್ವಪಥ—ಸತ್ತ್ವಗುಣದ ಉದ್ರೇಕವಿರುವಂಥ ದಾರಿ ; ಸದಾಚಾರ.

ಪರಾಭಕ್ತಿ—ಆತ್ಯಂತಿಕ ಭಕ್ತಿ ; ಯಾವ ಕಾಮನೆಯೂ ಇಲ್ಲದೆ ಹರಿಸರ್ವೋತ್ತಮತ್ವವನ್ನು ಅರಿತು, ಹರಿಸೇವೆಯೇ ಬದುಕಿನ ಗುರಿ ಎಂದು ಭಾವಿಸಿ, ಮುಕ್ತಿಗೆ ಕಾರಣವಾಗುವ ಜ್ಞಾನವನ್ನು ಪಡೆಯಲೆಂದೇ ಭಕ್ತಿಯನ್ನು ಮಾಡುವುದು ; ಇದನ್ನು ನಿರ್ಗುಣಭಕ್ತಿಯೆಂದೂ ಕರೆಯುತ್ತಾರೆ. ಸಂಸಾರಸಾಗರವನ್ನು ದಾಟಲು ಇದೇ ಮುಖ್ಯಸಾಧನೆಯಾದುದರಿಂದ ಅದನ್ನು ದೋಣಿಯ ಹುಟ್ಟುಹಾಕುವುದಕ್ಕೆ ಹೋಲಿಸಿದ್ದಾರೆ.

ಮುಕ್ತಿಮಂಟಪ—ವೈಕುಂಠ ; ಮುಕ್ತರು ಪರಮಾತ್ಮನ ನಿತ್ಯಓಲಗದಲ್ಲಿ ಆನಂದಿಸುವ ಎಡೆ.

೨೦೩

ತೋಡಿ　　　　　　　　　　　　　　　　　　　　　　　　　　　　　　　　　　　　　　　　　　ಅಟ್ಟ

ನೀನೆ ಅನಾಥಬಂಧು ಕಾರುಣ್ಯಸಿಂಧು　　　　ಪ

ಮದಗಜವೆಲ್ಲ ಕೂಡಿದರೇನು ಅಪರ ವ್ಯಾಳ್ಯಕೆ ಒದಗಲಿಲ್ಲ
ಮದನನಯ್ಯ ಮಧುಸೂದನ ಎನ್ನಲು
ಮುದದಿಂದಲಿ ಬಂದೊದಗಿದೆ ಕೃಷ್ಣಾ　　　　೧

ಪತಿಗಳೈವರಿದ್ದರೇನು ಸತಿಯ ಭಂಗ ಬಿಡಿಸಲಿಲ್ಲ
ಗತಿ ನೀನೇ ಮುಕುಂದ ಎನ್ನಲು
ಅತಿವೇಗದಿ ಅಕ್ಷಯವಿತ್ತೆ ಕೃಷ್ಣಾ　　　　೨

ಶಿಲೆಯ ರಕ್ಷಿಸಿ ಕುಲಕೆ ತಂದೆ
ಬಲಿಗೆ ಒಲಿದು ಪದವಿಯನಿತ್ತೆ
ಸುಲಭದಿ ಭಕ್ತರ ಸಲುಹುವ ನಮ್ಮ
ಚೆಲುವ ಪುರಂದರವಿಠ್ಠಲರಾಯ　　　　೩

ಮದಗಜವೆಲ್ಲ...—ಗಜೇಂದ್ರನನ್ನು ಮೊಸಳೆ ಹಿಡಿದು ಎಳೆಯುತ್ತಿರಲು, ಅದನ್ನು ಬಿಡಿಸಲೆಂದು ಉಳಿದ ಆನೆಗಳೆಲ್ಲ ಹಿಡಿದೆಳೆದರೂ ಪ್ರಯೋಜನವಾಗಲಿಲ್ಲ. (ಅದರ ಹೊತ್ತಿಗೆ ಆಗಲಿಲ್ಲ, 'ವ್ಯಾಳ್ಯಕೆ ಒದಗಲಿಲ್ಲ').

ಪತಿಗಳೈವರು...—ತುಂಬಿದ ಸಭೆಯಲ್ಲಿ ದುಃಶಾಸನನು ದ್ರೌಪದಿಯ ಮಾನ ಭಂಗಮಾಡಲು ಯತ್ನಿಸಿದಾಗ ಅಲ್ಲೇ ಇದ್ದ ಐವರು ಪಾಂಡವರು ನೆರವಿಗೆ ಬರಲಿಲ್ಲ.

ಶಿಲೆಯ ರಕ್ಷಿಸಿ...—ರಾಮಾವತಾರದಲ್ಲಿ ಅಹಲ್ಯೆಯನ್ನುದ್ಧರಿಸಿದ ಪ್ರಸಂಗ.

ಬಲಿಗೆ ಒಲಿದು...—ವಾಮನಾವತಾರದಲ್ಲಿ ಬಲಿಗೆ ಭಾವಿ ಇಂದ್ರಪದವಿಯನ್ನು ಕೊಟ್ಟನೆಂಬ ಉಲ್ಲೇಖ.

ಕಲ್ಯಾಣಿ ಅಟ್ಟ

ಒಂದೇ ಕೂಗಳತೆ ವೈಕುಂಠ ಪ

ಸಂದೇಹವಿಲ್ಲವೋ ಸಾಧು ಸಜ್ಜನರಿಗೆ ಅ

ಸರಸಿಯಲಿ ಆನೆ ಮೊರೆಯೆಂದು ಕರೆಯಲು
ತ್ವರಿತದಿ ಬಂದು ಕಾಯ್ದಾ
ನರಹರಿ ಕೃಷ್ಣಾ ಸಲಹೆಂದು ಚೀರಲು
ತರಳ ಪ್ರಹ್ಲಾದಗೆ ಕಂಭದಿಂದಲಿ ಬಂದ ೧

ಅಂಬರೀಷ ದ್ವಾದಶೀ ವ್ರತಮಾಡಲು
ದೊಂಬಿ ಮಾಡಿದ ದೂರ್ವಾಸ ಮುನಿ
ಕುಂಭಿಣಿಪತಿ ಕೃಷ್ಣಾ ಕಾಯೆಂದು ಮೊರೆಯಿಡೆ
ಬೆಂಬತ್ತಿ ಚಕ್ರದಿಂ ಮುನಿಶಾಪವ ಕಳೆದ ೨

ದ್ರುಪದರಾಯನ ಪುತ್ರಿಯಾಪತ್ತು ಕಳೆಯೆನೆ
ಕೃಪೆಯಿಂದ ಅಕ್ಷಯವಿತ್ತು ತಾನು
ಕಪಟನಾಟಕ ಕೃಷ್ಣ ಪುರಂದರವಿಠಲನ
ಗುಪಿತದಿ ನೆನೆವರ ಹೃದಯವೇ ವೈಕುಂಠ ೩

ಕೂಗಳತೆ—ಕೂಗಿದರೆ ಕೇಳುವಷ್ಟು ದೂರ; 'ಎಲ್ಲಿ ಕರೆದರೆ ಅಲ್ಲೆ ಬಂದೊದಗುವ' ಎಂಬುದರ ಭಾವ.

ಸರಸಿಯಲಿ...—ಗಜೇಂದ್ರಮೋಕ್ಷಣದ ಪ್ರಸಂಗ

ನರಹರಿ ಕೃಷ್ಣಾ...—ನರಸಿಂಹಾವತಾರ.

ಅಂಬರೀಷ...—ವಿಷ್ಣುಭಕ್ತನಾದ ಅಂಬರೀಷನ ವ್ರತಭಂಗವಮಾಡಲು ಬಂದ ದೂರ್ವಾಸನನ್ನು ಬೆನ್ನಟ್ಟಿ (ಬೆಂಬತ್ತಿ) ವಿಷ್ಣುಚಕ್ರವು ಕಾಡಿದ ಪ್ರಸಂಗ.

ಕುಂಭಿಣಿಪತಿ—ಭೂಮಿಗೆ ಒಡೆಯನಾದವನು, ಅಂಬರೀಷರಾಜ.

ದ್ರುಪದರಾಯನ ಪುತ್ರಿ—ದ್ರೌಪದಿಯು ಮಾನಭಂಗಪ್ರಕರಣದಲ್ಲಿ ಅಕ್ಷಯ ವಸ್ತ್ರದಾನ ಮಾಡಿದ ಪ್ರಸಂಗ.

ಗುಪಿತದಿ—ಅಂತರಂಗದಲ್ಲಿ ; ಧ್ಯಾನಮಾರ್ಗವನ್ನು ಹಿಡಿದು.

[ಮೊದಲ ನುಡಿಯಲ್ಲಿ ಈ ಪಾಠಾಂತರವಿದೆ
ಕರಿರಾಜ ವನದಲಿ ಉಳುಹೆಂದು ಕೂಗಲು
ತ್ವರಿತದಿಂದಲಿ ಬಂದು ಕಾಯ್ದ ತಾನು
ಕರುಣಸಾಗರ ಕೃಷ್ಣ ಕಾಯಬೇಕೆನುತಲಿ
ತರಳ ಪ್ರಹ್ಲಾದನ ಕಂಬದಿ ಬಂದುದು]



ಬೇಹಾಗು ಅಟ್ಟ

ನಾನು ಬೇರ ಮಾಡುವೆ
ಎನ್ನ ನಾಲಿಗೆಯೆಂಬೊ ಎತ್ತನೇರಿಕೊಂಡು ಪ

ತನುವೆಂಬೋ ಒಂದು ಗೋಣಿಯಲ್ಲಿ
ರಾಮನಾಮವೆಂಬೊ ಸರಕು ತುಂಬಿಕೊಂಡು ೧

ಇಂದ್ರಿಯಗಳೆಂಬ ಸುಂಕದವರಡ್ಡಬಂದರೆ ಮು
ಕುಂದ ಮುದ್ರೆಯ ತೋರಿಸಿ ಹೊಡೆದಾಡಿ ೨

ಅಚಲಾನಂದ ಪುರಂದರವಿಠಲನಲ್ಲಿ ಪೋಗಿ
ಪ್ರಚುರಭಕ್ತಿಯನಿತ್ತು ಮುಕ್ತಿಯ ಪಡೆದು ೩

ಬೇರ—'ವ್ಯಾಪಾರ' ಎನ್ನುವುದರ ತದ್ಭವ. ಬೇಹರ > ಬೇರ.

ನಾಲಿಗೆಯೆಂಬೊ...—ನಾಮಸ್ಮರಣೆ ಮಾಡುತ್ತ ; ಸಂಕೀರ್ತನ ಮಾಡುತ್ತ.

ತನು ..—ದೇಹವೆನ್ನುವುದೇ ಚೀಲ.

ಪ್ರಚುರಭಕ್ತಿಯನಿತ್ತು...—ಆತ್ಯಂತಿಕ ಭಕ್ತಿಯನ್ನು ಕೊಟ್ಟು. ಜೀವಾತ್ಮ ಪರಮಾತ್ಮರಿಗೆ ಇರುವ ನಿತ್ಯಸ್ನೇಹಸಂಬಂಧವು ಜೀವಾತ್ಮನಲ್ಲಿ ಭಕ್ತಿಯಂತೆ ಪರಮಾತ್ಮನಲ್ಲಿ ಅನುಗ್ರಹದಂತೆ (ಪ್ರಸಾದ) ತೋರಿಕೊಳ್ಳುತ್ತದೆ. ಜೀವಾತ್ಮನು ಸಾಧನದಿಂದ ಭಕ್ತಿಯನ್ನು ಮಾಡಿದರೆ ಪರಮಾತ್ಮನು ಮುಕ್ತಿಯನ್ನು ಅನುಗ್ರಹಿಸುವನು.

೨೦೬

ಕಾಂಬೋದಿ ಝಂಪೆ

ಇದ ಕೊಳ್ಳಿ ಭವರೋಗಕೌಷಧವನು
ಇಂದ್ರಿಯವ ಜಯಿಸುವುದೆ ಇದಕೆ ಇಚ್ಛಾಪಥ್ಯ ಪ

ವಾಸುದೇವನ ನಾಮ ಪಾತವಿಧ್ವಂಸಿನಿ
ಜನಾರ್ದನನ ನಾಮ ಜ್ವರಾಂಕುಶ
ಮಾಧವನ ನಾಮವೇ ಮನಗಂಡ ಮಂಡೂರ
ಮಂಗಳಾತ್ಮನ ನಾಮ ಮೌಲ್ಯವಸಂತ ೧

ಅಜಪಿತನ ನಾಮ ತ್ರೈಲೋಕ್ಯಚಿಂತಾಮಣಿ
ಭುಜಗಶಯನನ ನಾಮ ಭೂಪತಿಮಾತ್ರೆ
ರಾಜೀವಲೋಚನನ ನಾಮ ರಸಕರ್ಪೂರ
ಸೀತಾಪತಿಯ ನಾಮ ದಿವ್ಯಸಿಂಧೂರ ೨

ನಾರಾಯಣನ ನಾಮ ದಿವ್ಯ ತಾಮ್ರಭಸ್ಮ
ಲೋಕದೊಡೆಯನ ನಾಮ ಲೋಹಭಸ್ಮ
ವೈಕುಂಠಪತಿಯೆಂಬ ವಂಗಭಸ್ಮವ ಕೊಳ್ಳಿ
ಶ್ರೀನಿವಾಸನ ನಾಮ ಸ್ವರ್ಣಭಸ್ಮ ೩

ರಾಮಚಂದ್ರನೆಂಬ ಪೂರ್ಣಚಂದ್ರೋದಯವು
ಕೃಷ್ಣ ಕೃಷ್ಣನೆಂಬ ಶ್ರೇಷ್ಠ ಕುಠಾರ
ವಾರಿಜಾಂಬಕನೆಂಬ ವಸಂತಕುಸುಮಾಕರ
ಕಮಲನಾಭನೆಂಬ ಕರ್ಣಚೂರ್ಣವಿದಕೋ ೪

ಇದನು ಕೊಂಡವರ ಪೆಸರನು ಪೇಳುವೆನು ಕೇಳಿ
ಮುದದಿ ಪ್ರಹ್ಲಾದ ಮುಚುಕುಂದ ಧ್ರುವನು
ಸದಮಲೆ ದ್ರೌಪದಿ ಅಜಮಿಳನು ಬದುಕಿದನು
ಪದುಮಾಕ್ಷ ಪುರಂದರವಿಠಲನೆಂಬೌಷಧವು ೫

ಪೂರ್ವಿ (ಕಾನಡ) ಅಟ್ಟ

ಆತನ ಪಾಡುವೆ ಅನವರತ
ಪ್ರೀತಿಯಿಂದಲಿ ತನ್ನ ಭಕುತರ ಸಲಹುವ ಪ

ಆವಾತನ ಕೀರ್ತಿ ಪರೀಕ್ಷಿತ ಕೇಳಿ
ಪಾವನವಾದನು ಮೂಜಗವರಿಯೆ
ಭಾವಶುದ್ಧಿಯಲಿ ಶುಕನಾರ ಪೊಗಳುವ
ಆವಾಗ ಪ್ರಹ್ಲಾದ ಆರ ನೆನೆವನಯ್ಯ ೧

ಶಿಲೆಯು ಬಾಲೆಯು ಮಾಡಿದ ಪಾದವಾರದು
ನಳಿನಸಂಭವನ ಪಿತ್ರುವರಾರು
ಕಲಿಯುಗ ಜನರಿಗೆ ಆರ ನಾಮವೆ ಗತಿ
ಇಳೆಯ ಭಾರವನಿಳುಹಿ ಸಲಹಿದವರಾರಯ್ಯ ೨

ದ್ರುಪದನ ಸುತೆ ಅಭಿಮಾನರಕ್ಷಕರಾರು
ನೃಪ ಧರ್ಮಜಗೆ ರಕ್ಷಕನಾರು
ಕೃಪೆಯಿಂದ ವಿದುರನ ಮನೆಯಲುಂಡವನಾರು
ಆಪತ್ಕಾಲದಿ ಗಜನ ಸಲಹಿದವರಾರಯ್ಯ ೩

ಅತಿಶಯದಿಂದ ಅರ್ಜುನಗೆ ಸಾರಥಿಯಾಗಿ
ರಥವನೇರಿ ನಡೆಯಿಸಿದವರಾರು
ಪೃಥಿವಿಯೆಲ್ಲವ ಬಲಿ ಯಾರಿಗೊಪ್ಪಿಸಿದನು
ಮತಿವಂತ ಧ್ರುವನ ರಕ್ಷಕರಾರು ಪೇಳಯ್ಯ ೪

ಸಾಗರನ ಮಗಳಿಗು ಆರ ನಾಮವೆ ಗತಿ
ಯೋಗದಿ ನಾರದನಾರ ಭಜಿಪನು
ರಾಗರಹಿತ ಹನುಮಂತನೊಡೆಯನಾರು
ಭಾಗವತರ ಪ್ರಿಯ ಪುರಂದರವಿಠಲ ೫

[ಭಾರತ–ರಾಮಾಯಣ–ಭಾಗವತಗಳಲ್ಲಿ ಬರುವ ಪ್ರಸಂಗಗಳನ್ನು ಪೋಣಿಸಿ ಹರಿಯ ಮಾಹಾತ್ಮ್ಯೆಯನ್ನು ಹಾಡಿದ್ದಾರೆ ಅರ್ಜುನನ ಮೊಮ್ಮಗನಾದ ಪರೀಕ್ಷಿದ್ರಾಜನಿಗೆ ಶುಕ ಮುನಿಗಳು ಏಳು ದಿನಗಳ ಕಾಲ ಭಾಗವತ ಪುರಾಣದ ಶ್ರವಣ ಮಾಡಿಸಿದುದನ್ನೇ ಮೊದಲಲ್ಲಿ ಎತ್ತಿಕೊಂಡು ಪ್ರಹ್ಲಾದ, ಅಹಲ್ಯೆ, ಬ್ರಹ್ಮ, ದ್ರೌಪದಿ, ಯುಧಿಷ್ಠಿರ, ವಿದುರ, ಇಂದ್ರದ್ಯುಮ್ನ (ಗಜೇಂದ್ರ), ಅರ್ಜುನ, ಬಲಿ, ಧ್ರುವ, ಲಕ್ಷ್ಮಿ, ನಾರದ, ಹನುಮಂತ ಇವರೆಲ್ಲ ಪರಮಭಾಗವತರೆಂದು ನಿರ್ದೇಶಿಸಿದ್ದಾರೆ ]

ಮೋಹನ ಆದಿ

ಏನಿತ್ತು ಮೆಚ್ಚಿಸುವೆನೊ ಏನೋ ವಿಠಲ ಪ

ದೀನರಕ್ಷಕನೆ ನಿನ್ನ ಧ್ಯಾನವೀಯೊ ವಿಠಲಯ್ಯ ಅ

ಓದಿ ನಿನ್ನ ಮೆಚ್ಚಿಸುವೆನೆ ವೇದವ ತಂದಜನಿಗಿತ್ತೆ
ವಾದಿಸಿ ನಿನ್ನ ಮೆಚ್ಚಿಸುವೆನೆ ಆದಿಶೇಷಶಯನನೆ ೧

ಆಡಿ ನಿನ್ನ ಮೆಚ್ಚಿಸುವೆನೆ ಮೃಡನಯ್ಯನಯ್ಯನೆ
ಪಾಡಿ ನಿನ್ನ ಮೆಚ್ಚಿಸುವೆನೆ ಪವನಜನ ಸ್ವಾಮಿ ನೀನೆ ೨

ಚಿನ್ನವಿತ್ತು ಮೆಚ್ಚಿಸುವೆನೆ ಸಿರಿದೇವಿಯರಸನೆ
ಪೂರ್ಣಾನಂದ ಸ್ವಾಮಿಯೆ ಪುರಂದರವಿಠಲನಯ್ಯ ೩

[ಅಲ್ಪಜ್ಞನೂ, ಅಲ್ಪಶಕ್ತನೂ, ಅಲ್ಪಾಂಶನೂ, ಪರಾಧೀನನೂ ಆದ ಜೀವವು ಸರ್ವಜ್ಞನೂ, ಸರ್ವಶಕ್ತನೂ, ಅಂಶಿಯೂ, ಸ್ವತಂತ್ರನೂ ಆದ ಪರಮಾತ್ಮನಿಗೆ ಏನನ್ನು ತಾನೆ ಸಲ್ಲಿಸಿ ಮೆಚ್ಚಿಸಬಹುದು ? ಧ್ಯಾನವೊಂದೇ ಜೀವಕ್ಕೆ ಸಾಧ್ಯವಾದುದು. ಆದರೆ ಅದಕ್ಕೆ ಬೇಕಾಗುವ ಮನಃಪ್ರಾವಣ್ಯವನ್ನೂ ಬಲವನ್ನೂ ಪರಮಾತ್ಮನೇ ಕೊಡಬೇಕು.]

ಓದಿ...—ವೇದವಿದ್ಯೆಯಲ್ಲಿ ತೊಡಗಿ ; ವೇದವನ್ನು ಮೊಟ್ಟಮೊದಲು ಪಡೆದುಕೊಂಡ ಬ್ರಹ್ಮನೇ ಅವನಿಗೆ ಮಗ ; ಎಂದಮೇಲೆ ಬೇರೆ ಯಾವನು ತನ್ನ ವೇದ ಪಾಂಡಿತ್ಯದಿಂದ ಅವನನ್ನು ಬೆರಗುಗೊಳಿಸಲು ಸಾಧ್ಯ ?

ವಾದಿಸಿ...—ಆದಿಶೇಷನು ತನ್ನ ಸಾವಿರ ಹೆಡೆಗಳಿಂದ ವಿಷ್ಣುಸರ್ವೋತ್ತಮತ್ವವನ್ನು ಸಾರುತ್ತ, ಅದರ ವಿರುದ್ಧ ವಾದಿಸುವವರ ಬಾಯಿಕಟ್ಟುವನೆಂದು ಪ್ರತೀತಿ.

ಆಡಿ...—ನಾಟ್ಯವಾಡಿ; ಮೃಡನೆಂದರೆ ಶಿವ, ನಟರಾಜ; ವಿಷ್ಣುವಿಗೆ ಮಗನ ಮಗ (ಬ್ರಹ್ಮನ ಮಗ).

ಪಾಡಿ...—ಹಾಡಿ, ಹನುಮಂತನು ಸಂಕೀರ್ತನ ಪದ್ಧತಿಯ ಪ್ರವರ್ತಕ ; ಸಂಗೀತ ಶಾಸ್ತ್ರದಲ್ಲಿ ಪರಂಪರೆಯನ್ನು ಸ್ಥಾಪಿಸಿದವನು.

೨೦೯

ಕಾಂಬೋದಿ ವಾರ್ಧಿಕ ಷಟ್ಪದಿ

ಮರೆಯದಿರು ಮರೆಯದಿರು ಶ್ರೀ ಹರಿಯನು ಪ

ಮರೆಯದಿರು ಶ್ರೀ ಹರಿಯ ಮರಣಾತುರದಿ ಮಗನ
ಕರೆದವಗೆ ಸಾಯುಜ್ಯವಿತ್ತ ನಾರಾಯಣನ
ಸ್ಮರಣೆಯನು ಮಾಡುವ ಚರಣಸೇವಕರಿಗೆ
ಪರಮಪದವೀವ ಹರಿಯ ಅ

ದೇವಕಿಯ ಬಂಧವನು ಪರಿದವನ ಪೂತನಿಯ
ಜೀವರಸವೀಂಟಿದನ ಮಾವನನು ಮಡುಹಿದನ
ಪಾವನ ತರಂಗಿಣಿಯ ಪದನಖದಿ ಪಡೆದವನ
ಗೋವರ್ಧನೋದ್ಧರಣನ
ದಾವಾನಲನ ಪಿಡಿದು ನುಂಗಿದನ ಲೀಲೆಯಲಿ
ಶ್ರೀವಕ್ಷ ಗೋಪಾಲ ರೂಪವನು ತಾಳ್ದವನ
ದೇವ ಮುನಿಮುಖ್ಯರಾರಾಧಿಸುವ ದಿವ್ಯ ಶ್ರೀ
ಪಾದವನು ಭಜಿಸು ಮನವೆ ೧

ಕಂಜಸಂಭವ ಪಿತನ ಕರುಣಾಪಯೋನಿಧಿಯ
ಕುಂಜರನ ನುಡಿ ಕೇಳಿ ಒದಗಿ ರಣದೊಳು ಧ
ನಂಜಯನ ಜೀವವಂ ಕೃಪೆಯಿಂದ ಕಾಯಿದವನ
ಆಂಜನೇಯನನಾಳ್ದನ
ರಂಜಿಸುವ ಕೌಸ್ತುಭ ವಿಭೂಷಣನ ಜಲಧಿಯಲಿ
ನಂಜಿನೊಡೆಯನ ಮೇಲೆ ಮಲಗಿ ತಮದೊಳು ಪ
ರಂಜ್ಯೋತಿಮಯನಾಗಿ ಬೆಳಗುವನ ಶ್ರೀ ಚರಣ
ಕಂಜವನು ಭಜಿಸು ಮನವೇ ೨

ವಾರಿಧಿಯೊಳಾಡಿದನ ವನಗಿರಿಯ ತಾಳಿದನ
ಧಾರುಣಿಯ ತಂದವನ ದೈತ್ಯನನು ಕೊಂದವನ
ಈರಡಿಯಲಳೆದವನ ಮೊನೆಗೊಡಲಿ ಪಿಡಿದವನ
ನೀರಧಿಯ ಬಂಧಿಸಿದನ
ದ್ವಾರಕಿಯನಾಳ್ದವನ ತ್ರಿಪುರಗಳ ಜಗುಳ್ದವನ
ಚಾರುಹಯವೇರಿದನ ಸಕಲ ಸುಜನರ ಪೊರೆವ
ಧೀರ ಶ್ರೀ ಪುರಂದರವಿಠಲನ ಚರಣಕಮಲವ
ನಂಬಿ ನೀ ಭಜಿಸು ಮನವೇ ೩.

ಮರಣಾತುರದಿ ..—ಅಜಾಮಿಳನ ಕಥೆ.
ಪರಿದವನ—ಹರಿದುಹಾಕಿದವನ.
ಮಾವನನು ..—ಕಂಸನನ್ನು ಕೊಂದವನ.
ಪಾವನ ತರಂಗಿಣಿಯ...—ತ್ರಿವಿಕ್ರಮಾವತಾರದಲ್ಲಿ ಗಂಗೆಯನ್ನು ತನ್ನ ಬಲಗಾಲ ಉಗುರಿನಿಂದ ಹೊರಹೊಮ್ಮಿಸಿದವನ.
ಗೋವರ್ಧನೋದ್ಧರಣನ—ಕೃಷ್ಣಾವತಾರದಲ್ಲಿ.
ದಾವಾನಲನ—ಗೋಕುಲದಲ್ಲಿ ಕೃಷ್ಣನ ಒಡನಾಡಿಗಳಾದ ಗೋವಳರು ಹಸುಗಳನ್ನಟ್ಟಿಕೊಂಡು ಈಷಿಕೆಯೆಂಬ ಅರಣ್ಯಪ್ರಾಂತ್ಯಕ್ಕೆ ಹೋಗಿರಲು ಅಲ್ಲಿ ಕಾಡುಕಿಚ್ಚು (ದಾವಾನಲ) ಎದ್ದು ಅವರನ್ನು ಕಾಡಲು, ಕೃಷ್ಣನು ಅದನ್ನು ನುಂಗಿ ಗೆಳೆಯರನ್ನೆಲ್ಲ ಕಾಪಾಡಿದನೆಂಬ ಕಥೆ ಭಾಗವತದಲ್ಲಿದೆ.
ಶ್ರೀವಕ್ಷ—ಲಕ್ಷ್ಮಿಯನ್ನು ವಕ್ಷಃಸ್ಥಳದಲ್ಲಿರಿಸಿಕೊಂಡವನು.
ಕಂಜಸಂಭವ—ವಿಷ್ಣುನಾಭಿಕಮಲ (ಕಂಜ)ದಿಂದ ಹುಟ್ಟಿದ ಬ್ರಹ್ಮ.
ಕುಂಜರನ ನುಡಿ. .—ಗಜೇಂದ್ರ ಮೋಕ್ಷದ ಪ್ರಸಂಗ.
ರಣದೊಳು ಧನಂಜಯನ—ಮಹಾಭಾರತ ಯುದ್ಧದಲ್ಲಿ ಅರ್ಜುನನ ಪ್ರಾಣವನ್ನು ಉಳಿಸಿದವನು ಕೃಷ್ಣ.
ಆಂಜನೇಯನನಾಳ್ದನ—ರಾಮಾವತಾರದಲ್ಲಿ.
ರಂಜಿಸುವ ಕೌಸ್ತುಭ—ವಿಷ್ಣುವಿನ ಆಭರಣವಿಶೇಷ.
ಜಲಧಿಯಲ್ಲಿ ನಂಜಿನೊಡೆಯನ ಮೇಲೆ ಮಲಗಿ—ಕ್ಷೀರ ಸಮುದ್ರದಲ್ಲಿ ಆದಿಶೇಷನ (ನಂಜಿನ ಒಡೆಯ ; ವಿಷವುಳ್ಳದ್ದು, ಹಾವು) ಮೇಲೆ ಮಲಗಿರುವವ.
ತಮದೊಳು—ಮಹಾಪ್ರಲಯದಲ್ಲಿ ದುರ್ಗಾದೇವಿಯು ತೋರಿಕೊಂಡ ಕತ್ತಲೆಯಲ್ಲಿ.
ವಾರಿಧಿಯೊಳಾಡಿದವನ—ಯಮುನಾ ನದಿಯ ಕಾಳಿಂದಿ ಮಡುವಿನಲ್ಲಿ ಕಾಳಿಂಗನ ಮೇಲೆ ನಾಟ್ಯಮಾಡಿದವನ (ಕೃಷ್ಣಾವತಾರದಲ್ಲಿ).
ವನಗಿರಿಯ ತಾಳಿದವನ—ಗೋವರ್ಧನೋದ್ಧರಣ.
ಧಾರುಣಿಯ ತಂದವನ—ವರಾಹಾವತಾರದಲ್ಲಿ.
ದೈತ್ಯನನು ಕೊಂದವನ—ನರಸಿಂಹಾವತಾರದಲ್ಲಿ.
ಈರಡಿಯಲಳೆದವನ—ವಾಮನಾವತಾರದಲ್ಲಿ.
ಮೊನೆಗೊಡಲಿ ಪಿಡಿದವನ—ಪರಶುರಾಮಾವತಾರದಲ್ಲಿ.
ನೀರಧಿಯ ಬಂಧಿಸಿದನ—ರಾಮಾವತಾರದಲ್ಲಿ (ಸೇತು ಬಂಧನ).
ದ್ವಾರಕಿಯನಾಳ್ದವನ—ಕೃಷ್ಣನಾಗಿ.
ತ್ರಿಪುರಗಳ ಜಗುಳ್ದವನ—ಬೌದ್ಧಾವತಾರದಲ್ಲಿ.
ಚಾರು ಹಯವನೇರಿದನ—ಕಲ್ಕಿಯ ಅವತಾರದಲ್ಲಿ.

ಪೂರ್ವಕಲ್ಯಾಣಿ ಆದಿ

ಯಾತಕೆ ನೋಡುತೀ ಯಮನ ಪಾಶಕೆ ಬೀಳುತಿ ಪ

ನಾಥ ನಾರಾಯಣ ಹರಿಕೃಷ್ಣ ಎಂಬುವ
ಕೀರ್ತನೆಯನು ಕೇಳಿ ದೂಷಿಸಿ ನಗುತಿ ಅ

ಮೂಢತನದಿ ಮಲಮೂತ್ರದ ಭಾಂಡಕೆ ಬಹು ಶೃಂಗಾರವ ಮಾಡುತಿ
ಗಾಡಾಂಧಕಾರದ ಮದ ಉನ್ಮತ್ತದಿ ಕವಿದು ಮುಗ್ಗುಂಡಿಗೆ ಬೀಳುತಿ
ಪಾಡಿ ಪೊಗಳಿ ನಿನ್ನ ಬದಿಯಲ್ಲಿರುವವರು ಕಾದುಕೊಂಡಿಹರೆಂದು ನೋಡುತಿ
ಪೀಡಿಸಿ ಕಾಲನ ದೂತರು ಎಳೆವಾಗ ಬೇಡಿ ನೀ ಭಯದಲಿ ಕೂಗುತಿ ೧

ಖಂಡ ಮಾಂಸಗಳು ತುಂಬಿದ ದೇಹವ ಕಂಡು ಸಂತೋಷದಿ ಉಬ್ಬುತಿ
ಕಂಡಕಂಡುದಾಪೇಕ್ಷಿಸಿ ಮನದಲಿ ಉಂಡೇನೆನ್ನುತ ಹಿಗ್ಗುತಿ
ಕಂಡುಕೊಳ್ಳದೆ ಮುಂದಿನ ಮಾರ್ಗವ ಪುಂಡಾಟಗಳನು ಮಾಡುತಿ
ಕಂಡ್ಯಮದೂತರು ಕೊಂಡೊಯ್ದು ನಿನ್ನನು ದಂಡಿಸುವಾಗ ಕಣ್ಣಣ್ಬಿಡುತಿ ೨

ದುಷ್ಟ ಯಮದೂತರು ಕಟ್ಟಿ ಎಳೆಯಲು ಬಿಟ್ಟು ಪೋಪುದೀ ಪ್ರಾಣವು
ಕಟ್ಟಿದ ಮನೆಯನು ಬಿಟ್ಟು ಹೋಗುವಂತೆ ಬಿಟ್ಟು ಪೋಪುದೀ ಜೀವವು
ಒಟ್ಟಿದ ಕಸವು ಸುಟ್ಟುಹೋಗುವ ಹಾಗೆ ಸುಟ್ಟು ಪೋಪುದೀ ದೇಹವು
ಹುಟ್ಟಿದ ಮಕ್ಕಳು ಕೊಟ್ಟಿಗೆ ಪಶುಗಳು ಪೆಟ್ಟಿಗೆ ನಗ ಬೆನ್ನಟ್ಟಿ ಬಾರವು ೩

ಇರುಳು ಹಗಲು ನರಹರಿಯನು ತುತಿಸದೆ ನರಪಶುಗಳ ಕೊಂಡಾಡುತಿ
ಸುರಧೇನುವು ತಾನಿರುತಿರೆ ನೆರೆಮನೆ ಹುಳಿ ಮಜ್ಜಿಗೆಯನು ಬೇಡುತಿ
ಹರಿವ ಭಾಗೀರಥಿ ಎದುರಲ್ಲಿರೆ ನೀ ಒರತೆಯ ಜಲಪಾನ ಮಾಡುತಿ
ಮುರಹರ ನಗಧರ ಮುಕುಂದ ಎನ್ನದೆ ನರಕಬಾಧೆಗೆ ಗುರಿಯಾಗುತಿ ೪

ಸಿಟ್ಟಿಲಿ ನೀ ಹರಿದಾಸರ ಮುಖವನು ದೃಷ್ಟಿಸಿ ನೋಡದೆ ಹೋಗುತಿ
ಮುಷ್ಟಿಯೊಳಗೆ ಒಂದಿಷ್ಟುಕೊಡದೆ ನಿನ್ನ ಹೊಟ್ಟೆ ತುಂಬುವುದೇ ನೋಡುತಿ
ಬಟ್ಟಬಯಲು ಸಂಸಾರದಲನುದಿನ ದಿಟ್ಟತನದಲೋಡ್ಯಾಡುತಿ
ನೆಟ್ಟನೆ ಪುರಂದರವಿಠಲನೆನದೆ ಮುಕ್ತಿಬಟ್ಟೆಯ ಕಾಣದೆ ಹೋಗುತಿ ೫

ನೋಡುತೀ—ನೋಡುವೆ.
ಮಲಮೂತ್ರದ ಭಾಂಡಕೆ—ಶರೀರಕ್ಕೆ.
ಮುಗ್ಗುಂಡಿ—ಆಳವಾದ ಹಳ್ಳ.
ಮುಂದಿನ ಮಾರ್ಗವ—ಸಾಧನೆಯ ದಾರಿಯನ್ನು.
ಒರತೆ—ನೀರು ಜಿನುಗುವ (ಊಟೆ) ಹಳ್ಳ.
ಮುಕ್ತಿಬಟ್ಟೆ—ಮುಕ್ತಿಯ ದಾರಿ (ವಾಟ, ವರ್ತ್ಮ).

ಸುರಟಿ ಆದಿ

ನಾಚಿಕೆಗೊಳಬೇಡ ಮನದಲಿ ಯೋಚಿಸಿ ಕೆಡಬೇಡ ಪ

ನೀಚವೇನೋ ನಮ್ಮಚ್ಯುತನೋಲಗ
ಮೆಚ್ಚಿಕೊಟ್ಟಿದೆ ನಿನಗೆ ಹೆಚ್ಚಿನ ಪದವಿಯು ಅ

ಹರಿ ಹರಿಯೆಂದೊದರೊ ಹತ್ತಿದ
ದುರಿತಗಳಿಗೆ ಬೆದರೊ
ನೀರಜಾಕ್ಷ ನಿರ್ಜರಪತಿ ಹರಿಯೆಂದು
ಚೀರಿ ಹಾರಿ ಭೋರಿಡುತಲಿ ಕುಣಿಯೊ ೧

ಯಾರ ಗೊಡವೆಯೇಕೋ ನರಕದ
ದಾರಿ ತಪ್ಪಿಪರೇನೋ
ಸಾರಿಸಾರಿ ಸರ್ವೇಶನ ನಾಮವ
ಬೀರಿ ಬೀರಿ ಕೈ ಮುಗಿದು ಕೊಂಡಾಡೊ ೨

ಭಕ್ತಜನರ ಕೂಡೊ ಭವಭಯ
ಬತ್ತಿಪೋಪುದು ನೋಡೋ
ಮುಕ್ತಿದಾಯಕ ಶ್ರೀಪುರಂದರವಿಠಲನ
ಭಕ್ತಿಯಿಂದ ನೀ ಕುಣಿಯುತ ಪಾಡೋ ೩

ಹೆಚ್ಚಿನ ಪದವಿ—ಮನುಷ್ಯ ಜನ್ಮ ; ಅದೇನು ಕೀಳಾದುದಲ್ಲ ; ಪರಮಾತ್ಮನ ಅನುಗ್ರಹದಿಂದಲೇ ಬಂದದ್ದು ; ಸಾಧನೆಗೆ ಅನುಕೂಲವಾದದ್ದು.

ಶಹನ ಆದಿ

ಗೋವಿಂದನ ಧ್ಯಾನ ಬಲು ಶುಭಕರವೊ ಪ

ಭಾವಿಸಿ ನೋಡಲು ಬಹು ಜನ್ಮಗಳ ಪಾಪಹರವೊ ಅ

ಒಂದಾವರ್ತಿ ನೆನೆಯಲು ಭವಬಂಧ ಖಿಲವೊ
ಹಿಂದಿನ ಸುಕೃತಕೆ ಮುಂದಿನ ಸುಕೃತಾನಂದ ಫಲವೊ ೧

ವಿಧವಿಧ ಸಾಧನಕಿಂತ ಇದು ಬಲು ಘನವೊ
ಉದರಂಭರಣಕ್ಕೆ ಉಡುವ ವಸನಕ್ಕೆ ಇದು ಸುಸಾಧನವೊ ೨

ಶ್ರೀರಾಮ ಪುರಂದರವಿಠಲ ಆರ ಪಾರವೋ
ಸೇರಿದವರಿಗೆ ಈ ಹರಿಧ್ಯಾನ ಕ್ರೂರರಗೆ ದೂರವೋ ೩

ಭವಬಂಧ—ಸಂಸಾರದ ತೊಡಕು.

ಖಿಲ—ಬಿಟ್ಟುಹೋಗುವುದು.

ವಿಧವಿಧಸಾಧನಕಿಂತ—ವಿರಕ್ತಿ, ಸಚ್ಛಾಸ್ತ್ರಶ್ರವಣ, ಯೋಗಸಾಧನೆ, ಕೃಚ್ಛ್ರಾದಿ ತಪ, ತೀರ್ಥಯಾತ್ರೆ, ಧ್ಯಾನ, ವ್ರತ ಮೊದಲಾದವುಗಳಿಗಿಂತ.

ಉದರಂಭರಣಕ್ಕೆ...—ಇಹದ ಅಭ್ಯುದಯಕ್ಕೂ (ಊಟ, ಉಡುಗೆಗಳಿಗೆ) ಕಾರಣವಾಗುತ್ತದೆ.

ಆರಪಾರವೊ—ಆರುಪಾರು, ನಿರಂತರ, ನೇರ, ಸ್ಪಷ್ಟ.

ಆನಂದಭೈರವಿ

ಅಟ್ಟ

ಸುಮ್ಮನೆ ಬರುವುದೆ ಮುಕ್ತಿ ಪ

ನಮ್ಮ ಅಚ್ಯುತಾನಂತನ ನೆನೆಯದೆ ಭಕ್ತಿ ಅ

ಮನದಲ್ಲಿ ದೃಢವಿರಬೇಕು ಪಾಪಿ
ಜನರ ಸಂಸರ್ಗವ ನೀಗಲಿ ಬೇಕು
ಅನುಮಾನವನು ಬಿಡಬೇಕು ತನ್ನ
ತನುಮನ ಧನವನೊಪ್ಪಿಸಿಕೊಡಬೇಕು ೧

ಕಾಮ ಕ್ರೋಧವ ಬಿಡಬೇಕು ಪರ
ಕಾಮಿನಿಯರ ಹಂಬಲ ಬಿಡಬೇಕು
ಹೇಮದಾಸೆಯ ಸುಡಬೇಕು ಹರಿ
ನಾಮ ಸಂಕೀರ್ತನೆ ಮಾಡಬೇಕು ೨

ಸಂದಣಿಗಳ ಬಿಡಬೇಕು ದೇಶ
ಬಂಧು ಬಾಂಧವರ ಸ್ನೇಹವ ಬಿಡಬೇಕು
ನಿಂದಿಸಿದರೆ ಹಿಗ್ಗಬೇಕು ಕೋಪ
ಬಂದಾಗ ಸೈರಣೆ ಬಿಡದಿರಬೇಕು ೩

[ಭಕ್ತಿಯು ಬೇರೂರಲು ಅಗತ್ಯವಾದ ಸಾಧನೆಗಳನ್ನು ಇಲ್ಲಿ ಒಕ್ಕಣಿಸಿದ್ದಾರೆ.]

ಹೇಮದಾಸೆ—ಹೊನ್ನಿನ ಆಸೆ, ಎಂದರೆ ಐಶ್ವರ್ಯವನ್ನು ಗಳಿಸುವ ಬಯಕೆ.

ಸಂದಣಿ—ಜನರ ಗುಂಪು (ಭಗವದ್ಗೀತೆಯ 'ಅರತಿರ್ಜನ ಸಂಸದಿ' ಎಂಬ ಮಾತಿನ ಛಾಯೆ.

ದೇಶ ಬಂಧು ಬಾಂಧವರ ಸ್ನೇಹ—ತನ್ನ ಊರು, ತನ್ನವರು, ತನ್ನ ಹಿತವರು ಎಂಬ ಅಭಿಮಾನ (ಮಮಕಾರ).

ನಿಂದಿಸಿದರೆ...—ಮಾನವನ್ನೂ ಅಪಮಾನವನ್ನೂ ಸಮನಾಗಿ ಕಾಣುವುದು ತಾತ್ಪರ್ಯ ('ಸಮಂ ಮಾನಾಪಮಾನಯೋಃ').

ಕೋಪ ಬಂದಾಗ...—'ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಂ' ಎಂಬ ಗೀತಾವಾಕ್ಯದ ಛಾಯೆ.

ಕಲ್ಯಾಣಿ ಅಟ್ಟ

ಸಲ್ಲದೊ ಕೃಷ್ಣ ಸಲ್ಲದೊ ಪ

ಸಿರಿ ವಲ್ಲಭ ಇದ ನೋಡಿ ಪಾಲಿಸಬೇಕೊ ಅ

ಬಿತ್ತಿ ಬೆಳೆಸಿ ತಲೆಯೆತ್ತಿದ ಪೈರನು
ಮತ್ತೆ ತುರುವಿಂಡು ಬಿಟ್ಟು ಮೆಲ್ಲಿಸುವುದು ೧

ಸಾವಿರ ಹೊನ್ನಿಕ್ಕಿ ಸದನವ ಸಾಧಿಸಿ
ಪಾವಕನುರಿಗೆ ನೀನೊಪ್ಪಿಸಿಕೊಡುವುದು ೨

ಕುಶಲದಿ ಬಣ್ಣಿಸಿ ಬರೆದ ಚಿತ್ತಾರವ
ಮಸಿ ಮಣ್ಣು ಮಾಡಿ ನೀ ಕೆಡಿಸುವುದು ೩

ಬಲುಕಾಲ ಮುದ್ದಿಸಿ ಕಲಿಸಿ ಮಾತುಗಳ
ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು ೪

ಕರುಣಿಸು ಸಿರಿ ಪುರಂದರವಿಟ್ಠಲ ನಮ್ಮ
ಹಿರಿದು ಮಾಡಿ ಮತ್ತೆ ಕಿರಿದು ಮಾಡುವುದು ೫

[ಮನುಷ್ಯ ಜನ್ಮ ಬಂದಿರುವುದೇ ಹೆಗ್ಗಳಿಕೆ ; ಅನೇಕ ಜನ್ಮಗಳ ಪುಣ್ಯಫಲ. ಹೀಗಿರುವಾಗ ಈ ಜನ್ಮದಲ್ಲಿ ಸಾಧನೆಗೆ ಅವಕಾಶಮಾಡಿಕೊಡದೆ ಅದನ್ನು ವ್ಯರ್ಥವಾಗಿ ನೀಗಿಸುವುದು ಅಥವಾ ಪಾಪಗಳನ್ನು ಮಾಡಿಸಿ ದುರ್ಗತಿಗೆ ಎಳೆಯುವುದು ಸಲ್ಲದು. ಮನುಷ್ಯ ಜನ್ಮವನ್ನು ಒದಗಿಸಿದ ಪರಮಾತ್ಮನೇ ಸದ್ಗತಿಗೂ ಅವಕಾಶ ಮಾಡಿಕೊಡಬೇಕು ಎಂದು ಅವನಲ್ಲಿ ಆಗ್ರಹಮಾಡಿ ಬೇಡಿಕೊಂಡಿದ್ದಾರೆ.]

ತುರುವಿಂಡು—ಹಸುಗಳ ಗುಂಪನ್ನು.
ಸಾಧಿಸಿ—ಕಟ್ಟಿಸಿ.
ಪಾವಕನುರಿಗೆ—ಬೆಂಕಿಗೆ.
ಚಿತ್ತಾರ—ಚಿತ್ರ.
ಬಾವುಗ—ಗಂಡುಬೆಕ್ಕು (ಬೋಕಾ).

ಮುಖಾರಿ　　　　　　　　　　　　　　　　　　　　　　　　　　ಅಟ್ಟ

ಅಂದಿಗಲ್ಲದೆ ಮನದ ಪರಿತಾಪವಡಗದೊ ಮು
ಕುಂದ ಮಾಧವ ಮುರಾರೆ ಶೌರೇ　　　　ಪ

ಎಂದಿಗೆ ನಿನ್ನ ಭಕ್ತರ ಸಂಗ ಸೌಖ್ಯಗಳೊ
ಎಂದಿಗಭಯವ ಪಡೆವೆನೋ ಕೃಷ್ಣ　　　　ಅ

ಎಂದಿಗೀ ಜನನ ಮರಣಾದಿಗಳು ಪರಿಹರವು
ಎಂದಿಗೆ ಏಕಾಂತ ಭಕ್ತಿಯೋ ಕೃಷ್ಣ
ಎಂದಿಗೀ ಮಾನಾವಮಾನ ಸುಖ ದುಃಖ
ನಿಂದೆವಂದನೆಗಳಲಿ ಸಮತೆಯೋ ಕೃಷ್ಣ
ಎಂದಿಗೆ ಈ ಹೀನ ಜನಸಂಗ ಪರಿಹರವೊ
ಎಂದಿಗೆ ಸುಜ್ಞಾನ ಪಡೆವೆನೋ ಕೃಷ್ಣ
ಎಂದಿಗೆನ್ನದು ತನ್ನದೆಂಬ ದುರ್ಮೋಹ
ವೃಂದಗಳ ಕಡೆಗೆಣಿಪೆನೋ ಕೃಷ್ಣ　　　　೧

ಎಂದಿಗೆ ಈ ಕರ್ಮಕಾನನವ ತರಿವುದೊ
ಎಂದಿಗಪರೋಕ್ಷ ಸುಖವೋ ಕೃಷ್ಣ
ಎಂದಿಗೆ ಶಮದಮಗಳನ್ನು ನಾ ಪಡೆವುದೊ
ಎಂದಿಗಾಸೆ ನಿರಾಸೆಯೋ ಕೃಷ್ಣ
ಎಂದಿಗೀ ಕಾಮಸಂಕಲ್ಪಾದಿ ದೋಷಗಳ
ದ್ವಂದ್ವಗಳ ಕಡೆಗೆಣಿಪೆನೋ ಕೃಷ್ಣ
ಎಂದಿಗೀ ಕಾಯಕರಣಾದಿಗಳು ನಾನಲ್ಲ
ವೆಂದೆಂಬ ನಿಜದ ನೆಲೆಯೋ ಕೃಷ್ಣ　　　　೨

ದುರಿತಕೋಟಿಗಳನಳವಡಿಸಿಪ್ಪ ಸಂಸಾರ
ಸೆರೆಮನೆಯು ಕಳೆವುದೆಂದೋ ಕೃಷ್ಣ
ಕರಣಗಳ ಕಾದಾಟವನು ಬಿಡಿಸುವಭ್ಯಾಸ
ಪರಿ ನಾನು ಪಡೆವುದೆಂದೋ ಕೃಷ್ಣ
ತರತರದ ತಾಪತ್ರಯಗಳನು ನೀಗಿಸಿ
ಸ್ಥಿರಚಿತ್ತ ಪಡೆವುದೆಂದೊ ಕೃಷ್ಣ
ಸಿರಿ ಪುರಂದರವಿಠಲರಾಯ ನಿನ್ನಯ ದಿವ್ಯ
ಚರಣದೊಲುಮೆಯು ಎಂದಿಗೋ ಕೃಷ್ಣ　　　　೩

ಮಧ್ಯಮಾವತಿ ಆದಿ

ಮನವೆ ಚಂಚಲಮತಿಯ ಬಿಡು ಪ

ನಮ್ಮ ವನಜನಾಭನ ಭಜನೆಯ ಮಾಡು ಅ

ಬಡಮನುಜಗೆ ಬಾಯಬಿಡುತ ದೈನ್ಯದಲವನ
ಅಡಿಗಳಿಗೆರಗಲು ಪಡೆವುದೇನೊ
ಕಡಲಶಯನ ಜಗದೊಡೆಯನ ನೆನೆಯೆ ಕೈ
ಪಿಡಿದು ಸಲಹುವನು ಬಿಡದೆಲೆ ಅನುಗಾಲ ೧

ಬಲ್ಲಿದ ಭಜಕರ ಬಲ್ಲವ ಬಲುಸಿರಿ
ಯಬಳ್ಳನು ಕರುಣೆಯ ನಲ್ಲನಿರೆ
ಕ್ಷುಲ್ಲಕರನು ಕಾಯೆ ಸಲ್ಲದೆಂದೆಂದಿಗು
ನಿಲ್ಲು ಹರಿಯ ಪಾದದಲಿ ತಲ್ಲಣಿಸದೆ ೨

ಮುಗಿಲು ಮೇಲುಗಡೆ ಅಗಣಿತ ಆಪ
ತ್ತುಗಳು ಬಂದಡರಲು ನಗುತಲಿರು
ಜಗದುದರನ ಮಹಿಮೆಗೆ ನಮೋ ನಮೋ ಎಂದು
ಪೊಗಳುತ್ತ ಬಾಳಘಗಳನು ಗಣಿಸದಲೆ ೩

ಆವಾವ ಕಾಲಕ್ಕೆ ದೇವನಿಚ್ಛೆಯಿಂದ
ಆವಾವುದು ಬರೆ ಸುಖವೆ ಎನ್ನು
ಶ್ರೀವರ ಅನಾದಿ ಜೀವರ ಕ್ಲುಪ್ತದಂತೆ
ಈವನು ನಿಜ ಸ್ವಭಾವ ಬಿಡದೆ ನಿತ್ಯ ೪

ಕೇಶವಾಚ್ಯುತ ಶ್ರೀನಿವಾಸ ಮುರಾರೇ
ದೋಷರಹಿತ ಕ್ಲೇಶನಾಶನನೆಂದು
ಮೋಸಗೊಳಿಪ ಭವಪಾಶವ ಖಂಡಿಪ
ಶ್ರೀಶ ಪುರಂದರವಿಠಲನು ಜಗಕಿರೆ ೫

ಬಡಮನುಜಗೆ—ಹುಲುಮಾನವನಿಗೆ.

ನಲ್ಲ—ಪ್ರಿಯ.

ಕ್ಷುಲ್ಲಕರನು ಕಾಯೆ—ಕ್ಷುದ್ರರಾದ ಮನುಷ್ಯರ ಬಾಗಿಲ ಕಾಯುವುದು.

ಬಾಳಘೆಗಳನು—ಬದುಕಿನ ಪಾಪಗಳನ್ನು.

ಕ್ಲಪ್ತದಂತೆ...—ಕ್ರಮದಂತೆ; ಪ್ರತಿಜೀವರ ಯೋಗ್ಯತಾನುಸಾರವಾಗಿ ಕರ್ಮಫಲಗಳನ್ನು ಪರಮಾತ್ಮನು (ಶ್ರೀವರ) ಒದಗಿಸಿಕೊಡುವನು (ಈವನು); ಅವನಿಗೆ ಜೀವರನ್ನು ಕುರಿತು ಆದರ, ನಿರಾದರಗಳಿಲ್ಲ; ಕರ್ಮಫಲ ಕೊಡುವಾಗಲೂ ಅವನಿಗೆ ಸ್ವಭಾವಸಿದ್ಧವಾದ ಕಾರುಣ್ಯ ಮರೆಯಾಗುವುದಿಲ್ಲ (ನಿಜ ಸ್ವಭಾವ ಬಿಡದೆ).



ಪುನ್ನಾಗವರಾಳಿ ಆದಿ

ಗುಡಿಗುಡಿಯನು ಸೇದಿ ನೋಡೊ ಪ

ಒಡಲ ಪಾಪಂಗಳನೆಲ್ಲ ಈಡಾಡೊ ಅ

ಮನವೆಂಬೋ ಸಂಚಿಯ ಬಿಚ್ಚಿ ನಿನ್ನ
ದಿನದ ಪಾಪಗಳೆಂಬೊ ಭಂಗಿಯ ಕೊಚ್ಚಿ
ತನುವೆಂಬೊ ಚಿಲುಮೆಯೊಳಿಕ್ಕಿ ಅಚ್ಯು
ತನ ಧ್ಯಾನವೆಂತೆಂಬೊ ಬೆಂಕಿಯ ಹಚ್ಚಿ ೧

ಬುರುಡೆಯೆಂಬೋದು ಈ ಶರೀರ ನಿನ್ನ
ಗುರುಭಕ್ತಿಯೆಂಬೋದು ಕೊಳವಿಯಾಕಾರ
ಸಿರಿನಾರಾಯಣನೆಂಬೋ ನೀರ ಆದ
ನರಿತು ತುಂಬಿಕೊಳ್ಳೋ ಎಲೆ ಮೋಜುಗಾರ ೨

ಸದ್ಯದಿಂದಮಲು ಏರುವುದು ದಾ
ರಿದ್ರ್ಯ ದೋಷವು ಸುಟ್ಟು ಹೊಗೆಯು ಹಾರುವುದು
ಬುದ್ಧಿಗೆ ಜ್ಞಾನ ತೋರುವುದು ಗುರು
ಮಧ್ವೇಶ ಪುರಂದರವಿಠಲನ ತೋರುವುದು ೩

[ಮೋಜುಗಾರರು ಗುಡಿಗುಡಿಯನ್ನು ಸೇದುತ್ತಿರುವುದನ್ನು ಕಂಡು, ಅದರ ವಿವರಗಳನ್ನು ಅಧ್ಯಾತ್ಮದ ಹಂದರದಲ್ಲಿ ಸೇರಿಸಿದ್ದಾರೆ.]

ತೋಡಿ ರೂಪಕ

ಪೂಜೆ ಯಾತಕೋ ಮನುಜ ಪೂಜೆ ಯಾತಕೋ ಪ

ಪೂಜೆಯಲಿ ನಿನ್ನ ಮನ ನಿಲ್ಲದಿದ್ದಮೇಲೆ ನಿನಗೆ ಅ

ಭೂತದಯಾ ಪಶ್ಚಾತ್ತಾಪ
ನೀತಿಯೆಂಬುದು ಮತ್ತಿಲ್ಲ
ಮಾತಿನಲಿ ಜ್ಞಾನಿಯಲ್ಲ
ಕೋತಿ ಬುದ್ಧಿ ಬಿಡಲಿಲ್ಲ ೧

ಹಾಕುವುದು ಸಾಧು ವೇಷ
ಸಾಕುವುದು ಹಲವು ದೋಷ
ಬೇಕೆ ನಿನಗೆ ಒಳ್ಳೆ ಪದ
ಏಕೆ ಭ್ರಾಂತಿ ಉನ್ಮತ್ತ ೨

ಪೂಜೆಯಲ್ಲಿ ಪಾಪಬುದ್ಧಿ
ಜಾಜಿ ತುಳಸಿ ಕೈಯಲಿ
ಮೂಜಗದೊಡೆಯ ಅವನು ಎಲ್ಲಿ
ಮಾರ್ಜಾಲನಂತೆ ನೋಟದಲಿ ೩

ಆಸೆಯನ್ನು ಬಿಡಲಿಲ್ಲ
ಶೇಷಶಯನನ ಪೂಜೆಯೆಲ್ಲ
ಗಾಸಿಪಟ್ಟು ಮಾಡುತಿಯಲ್ಲ
ಮೋಸ ಹೋಗದೆ ತಿಳಿಯೊ ಎಲ್ಲ ೪

ತಂದೆ ಪುರಂದರವಿಠಲನ
ಒಂದೆ ಮನದಿ ನೆನೆಯೊ ಅಣ್ಣ
ಎಂದು ಕುಂದದ ಪದವನೀವ
ನಂದನಂದನ ತಂದೆ ಕೃಷ್ಣ ೫

ಒಳ್ಳೆ ಪದ—ಸದ್ಗತಿ ; ಉತ್ತಮವಾದ ಪದವಿ.
ಮಾರ್ಜಾಲನಂತೆ—ಬೆಕ್ಕಿನಂತೆ (ಬೂಟಕದ ಧ್ಯಾನ).
ಎಂದು ಕುಂದದ ಪದ—ಮುಕ್ತಿ.

ಕಾಂಬೋದಿ ಝಂಪೆ

ಹೂವ ತರುವರ ಮನೆಗೆ ಹುಲ್ಲ ತರುವ ಪ

ಅವ್ವೆ ಲಕುಮಿರಮಣ ಇವಗಿಲ್ಲ ಗರುವ ಅ

ಒಂದು ದಳ ಶ್ರೀ ತುಳಸಿ ಬಿಂದು ಗಂಗೋದಕವ
ಇಂದಿರಾರಮಣಗರ್ಪಿತವೆನ್ನಲು
ಒಂದೆ ಮನದಲಿ ಸಿಂಧುಶಯನ ಮುಕುಂದಯೆನೆ
ಎಂದೆಂದು ವಸಿಪನಾ ಮಂದಿರದೊಳಗೆ ೧

ಪರಿಪರಿಯ ಪುಷ್ಪಗಳ ಪರಮಾತ್ಮಗರ್ಪಿಸಿ
ಪರಿಪೂರ್ಣನೆಂದು ಪೂಜೆಯನು ಮಾಡೆ
ಸರಸಿಜಾಕ್ಷನು ತನ್ನ ಸಕಲ ಸ್ವಾತಂತ್ರ್ಯದಲಿ
ಸರಿಭಾಗ ಕೊಡುವ ತನ್ನರಮನೆಯ ಒಳಗೆ ೨

ಪಾಂಡವರ ಮನೆಯೊಳಗೆ ಕುದುರೆಗಳ ತಾ ತೊಳೆದು
ಪುಂಡರೀಕಾಕ್ಷ ತಾ ಹುಲ್ಲ ತಂದ
ಅಂಡಜಾಧಿಪ ನಮ್ಮ ಪುರಂದರವಿಠ್ಠಲನು
ತೊಂಡರಿಗೆ ತೊಂಡನಾಗಿ ಸಂಚರಿಸುತಿಹನು ೩

[ಭಕ್ತಿಯಿಂದ ಸುಲಭಪೂಜೆಯನ್ನು ಮಾಡಿ ಒಂದೇ ಹೂವನ್ನು ಒಪ್ಪಿಸಿದರೆ, ಅಂಥವರಿಗೂ ಒಲಿದು ಅವರ ಬದುಕಿನ ಎಲ್ಲ ಭಾರವನ್ನೂ ಹೊತ್ತುಕೊಳ್ಳುವವ. ಜಗತ್ತಿನ ಐಶ್ವರ್ಯಕ್ಕೆಲ್ಲ ಅಧಿದೇವತೆಯಾದ ಲಕ್ಷ್ಮಿಯ ಗಂಡನಾದರೂ ಅವನಿಗೇನು ಹೆಮ್ಮೆಯಿಲ್ಲ, ಬಿಂಕವಿಲ್ಲ, ಬಿಗುಮಾನವಿಲ್ಲ. ಭಕ್ತಿಯಿಂದ ಬಡತನದ ಪೂಜೆ ನಡೆದರೂ, ಅಲ್ಲಿ ಎಂದೆಂದಿಗೂ ನೆಲೆಸಿರುವನು.]

ಅವ್ವೆ—ಇಡೀ ಬ್ರಹ್ಮಾಂಡಕ್ಕೆ ತಾಯಿಯಾದ ಲಕ್ಷ್ಮಿ, ಮೂಲಪ್ರಕೃತಿ.

ಬಿಂದು ಗಂಗೋದಕ—ಒಂದು ತೊಟ್ಟು ನೀರು (ಪೂಜೆಯಲ್ಲಿ).

ತನ್ನ ಸಕಲ ಸ್ವಾತಂತ್ರ್ಯದಲಿ ಸರಿಭಾಗ ..—ತನ್ನ ಸಂಕಲ್ಪಾನುಸಾರವಾಗಿ, ಭಕ್ತನ ಯೋಗ್ಯತೆಗೆ ತಕ್ಕಂತೆ (ಸರಿ) ಪದವಿಯನ್ನು ವೈಕುಂಠದಲ್ಲಿ (ತನ್ನರಮನೆ) ಒದಗಿಸಿಕೊಡುವನು.

ಅಂಡಜಾಧಿಪ—ಅಂಡ-ಜ ವೆಂದರೆ ಮೊಟ್ಟೆಯಿಂದ ಹೊರಬರುವ ಹಕ್ಕಿ ; ಇಲ್ಲಿ ಗರುಡ, ಅದಕ್ಕೆ ಒಡೆಯ.

ತೊಂಡರು—ಭಕ್ತರು.

ಸುರಟಿ ಆದಿ

ಬಂದದ್ದೆಲ್ಲ ಬರಲಿ, ಗೋವಿಂದನ ದಯ ನಮಗಿರಲಿ ಪ

ಇಂದಿರೆ ರಮಣನ ಧ್ಯಾನವ ಮಾಡಲು
ಬಂದ ದುರಿತ ಬಯಲಾದುದಿಲ್ಲವೆ ಅ

ಅರಗಿನ ಮನೆಯೊಳಗಂದು, ಪಾಂಡವರನು ಕೊಲಬೇಕೆಂದು
ದುರುಳ ಕೌರವ ಬಂದು, ಅತಿ ಹರುಷದಲಿರುತಿರಲಂದು
ಹರಿ ಕೃಪೆ ಅವರಲ್ಲಿದ್ದ ಕಾರಣ ಬಂದ
ಘೋರ ದುರಿತ ಬಯಲಾದುದಿಲ್ಲವೆ ? ೧

ಆರು ಒಲಿಯದಿರಲೆನ್ನ, ಮುರಾರಿ ಎನಗೆ ಪ್ರಸನ್ನ
ಹೋರುವ ದುರಿತದ ಬನ್ನ, ನಿವಾರಿಪ ಕರುಣ ಸಂಪನ್ನ
ಶ್ರೀರಮಣನ ಸಿರಿ ಚರಣ ಶರಣರಿಗೆ
ಕ್ರೂರ ಯಮನು ಶರಣಾಗತನಾಗಲಿಲ್ಲವೆ ? ೨

ಸಿಂಗನ ಪೆಗಲೇರಿದವಗೆ, ಕರಿ ಭಂಗವೇಕೆ ಮತ್ತವಗೆ
ರಂಗನ ಕೃಪೆಯುಳ್ಳವಗೆ, ಭವ ಭಂಗಗಳೇತಕ್ಕವಗೆ
ಮಂಗಳ ಮಹಿಮ ಪುರಂದರವಿಠಲ ಶು
ಭಾಂಗನ ದಯವೊಂದಿದ್ದರೆ ಸಾಲದೆ ೩

ಹೋರುವ—ಸೆಣಸುವ.

ಬನ್ನ—ಭಂಗ ; ಬವಣೆ.

ಸಿಂಗನ ಪೆಗಲೇರಿದವಗೆ—ಸಿಂಹವನ್ನೇರಿ ಕುಳಿತವನಿಗೆ.

ಕರಿ ಭಂಗವೇಕೆ—ಆನೆಯಿಂದ ಕಾಟವಿದೆಯೆ ?

## ೨೨೧

ಶಂಕರಾಭರಣ ಆದಿ

ದೃಷ್ಟಿ ನಿನ್ನ ಪಾದದಲ್ಲಿ ನೆಡೊ ಹಾಂಗೆ
ದುಷ್ಟ ಜನ ಸಂಗಗಳ ಬಿಡೊ ಹಾಂಗೆ ಪ

ಕೆಟ್ಟ ಮಾತು ಕೇಳಿ ಕಿವಿ ಕೊಡದ್ಹಾಂಗೆ, ಮನ
ಕಟ್ಟಿಸಯ್ಯ ನಿನ್ನ ಪಾದ ಬಿಡದ್ಹಾಂಗೆ ಅ

ಧಿಟ್ಟನಾಗಿ, ಕೈಯನೆತ್ತಿ ಕೊಡೊ ಹಾಂಗೆ
ಶ್ರೀಕೃಷ್ಣ ನಿನ್ನ ಪೂಜೆಗಳ ಮಾಡೊ ಹಾಂಗೆ
ಭ್ರಷ್ಟನಾಗಿ ನಾಲ್ವರೊಳಗೆ ತಿರುಗದ್ಹಾಂಗೆ
ಶಿಷ್ಟಜನ ಸೇವೆಯನು ಮಾಡೊ ಹಾಂಗೆ ೧

ಪುಟ್ಟಿಸಿದ ತಾಯಿತಂದೆಯಲ್ಲೊ ನೀನು
ಹೊಟ್ಟೆಗಾಗಿ ದೈನ್ಯ ಪಡಲಾರೆ ನಾನು
ಪಟ್ಟೆ ಪಟ್ಟವಾಳಿ ಬೇಡಲಿಲ್ಲ ನಾನು
ಗುಟ್ಟು ಅಭಿಮಾನಿಗಳ ಕಾಯೊ ನೀನು ೨

ನಟ್ಟ ನೀರೊಳಗೆ ಈಸಲಾರೆ ನಾನು
ಕಟ್ಟೆ ಸೇರಿಸಬೇಕಯ್ಯ ನೀನು
ಕಟ್ಟೆ ಕಾಣದೆ ಅಲ್ಲಾಡುವೆನು ನಾನು, ಕೈಯ
ಬಿಟ್ಟು ನೋಡುವರೆ ಪುರಂದರವಿಠಲ ನೀನು ೩

ಶಿಷ್ಟಜನ—ಸಾಧುಸಜ್ಜನರು, ಸದಾಚಾರಸಂಪನ್ನರು.

ಪಟ್ಟೆ ಪಟ್ಟವಾಳಿ—ರೇಷ್ಮೆಯ, ಪಟ್ಟೆಸೀರೆ.

ಗುಟ್ಟು ಅಭಿಮಾನಿಗಳ—ಏಕಾಂತ ಭಕ್ತರನ್ನು.

ಕಟ್ಟೆ—ದಡ.

ಆನಂದಭೈರವಿ ಆದಿ

ಶ್ರೀನಿವಾಸ ನೀನೆ ಪಾಲಿಸೊ ಶ್ರಿತಜನಪಾಲ
ಗಾನಲೋಲ ಶ್ರೀ ಮುಕುಂದನೆ ಪ

ಧ್ಯಾನವಮಾಳ್ಪ ಸಜ್ಜನರ ಮಾನದಿಂ ಪರಿಪಾಲಿಸುವ
ವೇಣುಗೋಪಾಲ ಗೋವಿಂದ ವೇದವೇದ್ಯ ನಿತ್ಯಾನಂದ ಅ

ಎಷ್ಟುದಿನ ಕಷ್ಟಪಡುವುದೋ ಯಶೋದೆ ಕಂದ
ದೃಷ್ಟಿಯಿಂದ ನೋಡಲಾಗದೆ
ಮುಟ್ಟಿ ನಿನ್ನ ಭಜಿಸಲಾರೆ, ಕೆಟ್ಟ ನರಜನ್ಮದವ
ದುಷ್ಟಕಾರ್ಯ ಮಾಡಿದಾಗ್ಯೂ ಇಷ್ಟನಾಗಿ ಕೈಯ ಪಿಡಿಯೋ ೧

ಎಂದಿಗೆ ನಿನ್ನ ಪಾದಾಬ್ಜವ ಪೊಂದುವ ಸುಖ
ಎಂದಿಗೆ ಲಭ್ಯವೊ ಮಾಧವ
ಅಂಧಕಾರಣ್ಯದಲಿ ನಿಂದು ತತ್ತರಿಸುತಿಹೆನೊ
ಅಂದದಿಂ ಭವಾಬ್ಧಿಯೊಳು ನಿಂದು ನೊಂದೆನೊ ಗೋವಿಂದ ೨

ಅನುದಿನ ಅನೇಕ ರೋಗಗಳ ಅನುಭವಿಸಿದೆನು
ಘನ ಮಹಿಮನೆ ಕೇಳಯ್ಯ
ತನುವಿನಲ್ಲಿ ಬಲವಿಲ್ಲ, ನೆನೆದ ಮಾತ್ರದಿ ಸಲಹೊ ಯೆನ್ನ
ಹನುಮಂದೀಶ ಪುರಂದರವಿಠ್ಠಲನೆ ಕೈಯ ಪಿಡಿದು ೩

ಮಾನದಿಂ—ಆದರದಿಂದ, ತನ್ನವರೆಂಬ ಅಭಿಮಾನದಿಂದ.
ಇಷ್ಟನಾಗಿ—ಪರಮಾಪ್ತನೆನಿಸಿದ ಬಿಂಬರೂಪೀ ಪರಮಾತ್ಮ.
ಅಂಧಕಾರಣ್ಯದಲ್ಲಿ—ಸಂಸಾರವೆಂಬ ಕತ್ತಲೆಯ ಕಾಡಿನಲ್ಲಿ.
ಹನುಮಂಧೀಶ—ಮುಖ್ಯಪ್ರಾಣನಿಗೆ ಅಂತರ್ಯಾಮಿಯಾದ.

ಪಂತುವರಾಳಿ ಚಾಪು

ಏನೇನು ದಾನವ ಮಾಡಲಿ, ಹರಿ
ಧ್ಯಾನಕೆ ಸಮವಾದ ದಾನಗಳುಂಟೆ ಪ

ಶತಕೋಟಿ ಕನ್ಯಾಪ್ರದಾನವ ಮಾಡಲಿ
ಅತಿಶಯ ಉದಕ ದಾನವ ಮಾಡಲಿ
ಮತಿಶುದ್ಧನಾಗಿ ಭೂದಾನವ ಮಾಡಲಿ
ಕೃತಿರಮಣನ ಧ್ಯಾನಕೆ ಸರಿಯುಂಟೆ ೧

ದಿನಕೊಂದು ಸಾವಿರ ಗೋದಾನವಮಾಡಲಿ
ಅನುದಿನ ಅನ್ನದಾನವ ಮಾಡಲಿ
ಘನವಾಗಿ ಸುವರ್ಣ ದಾನವಮಾಡಲಿ
ವನಜನಾಭನ ಧ್ಯಾನಕೆ ಸರಿಯುಂಟೆ ೨

ಸಾದರದಿ ತರ್ಕ ವ್ಯಾಕರಣ ಪೇಳಲಿ
ವೇದ ಗೀತ ಭಾಷ್ಯವನೋದಲಿ
ಸಾಧಿಸಿ ಸ್ನಾನ ಜಪಂಗಳ ಮಾಡಲಿ
ಮಾಧವನ ಧ್ಯಾನಕೆ ಸರಿಯುಂಟೆ ೩

ಉತ್ತಮವಾದ ವಸ್ತ್ರವ ದಾನಮಾಡಲಿ
ಮುತ್ತು ಮಾಣಿಕ್ಯ ದಾನವ ಮಾಡಲಿ
ಅತ್ಯಂತ ವಿದ್ಯಾಪ್ರದಾನವ ಮಾಡಲಿ
ಚಿತ್ತಜಪಿತನ ಧ್ಯಾನಕೆ ಸರಿಯುಂಟೆ ೪

ನಾನಾ ತೀರ್ಥಗಳಲಿ ಸ್ನಾನವ ಮಾಡಲಿ
ಕಾನನದೊಳಗೆ ತಪವ ಮಾಡಲಿ
ಜ್ಞಾನದಿಂದ ಶಾಸ್ತ್ರಾರ್ಥಮಾಡಲಿ
ನಿನ್ನ ಧ್ಯಾನಕೆ ಸರಿಯುಂಟೆ ಪುರಂದರವಿಠಲ ೫

ಕೃತಿರಮಣ—ಲಕ್ಷ್ಮಿಯ ಒಂದು ರೂಪಕೃತಿ ; ಅನಿರುದ್ಧನು ಕೃತಿರಮಣ.

ಕಾನಡ　　　　　　　　　　　　　　　　　　　　　　　ರೂಪಕ

ನಾ ನಿನ್ನ ಧ್ಯಾನದೊಳಿರಲು, ಮಿಕ್ಕ
ಹೀನಮಾನವರೇನ ಮಾಡಬಲ್ಲರೋ ರಂಗ　　ಪ

ಮಚ್ಚರಿಸುವರೆಲ್ಲ ಕೂಡಿ ಮಾಡುವದೇನು
ಅಚ್ಯುತ ನಿನದೊಂದು ದಯೆಯಿರಲು
ವಾತ್ಸಲ್ಯ ಬಿಡದಿರು ನಿನ್ನ ನಂಬಿದೆ ದೇವ
ಕಿಚ್ಚಿಗೆ ಇರುವೆ ಮುತ್ತುವುದೆ ಕೇಳೆಲೋ ರಂಗ　೧

ಧಾಳಿಲಿ ಕುದುರೆ ವೈಯಾರದಿ ಕುಣಿಯಲು
ಧೂಳು ರವಿಯ ಮೇಲೆ ಮುಸುಕುವುದೆ
ತಾಳಿದವರಿಗೆ ವಿರುದ್ಧ ಲೋಕದೊಳುಂಟೆ
ಗಾಳಿಗೆ ಗಿರಿಯು ಅಲ್ಲಾಡಬಲ್ಲುದೆ ರಂಗ　　೨

ಕನ್ನಡಿಯೊಳಗಿನ ಗಂಟು ಕಂಡು ಕಳ್ಳ
ಕನ್ನವಿಕ್ಕಲವನ ವಶವಹುದೆ
ನಿನ್ನ ನಂಬಲು ಮುದ್ದು ಪುರಂದರವಿಠಲ
ಚಿನ್ನಕ್ಕೆ ಪುಟವಿಟ್ಟಂತೆ ಅಹುದು ರಂಗ　　೩

ಮಚ್ಚರಿಸುವರೆಲ್ಲ—ನನ್ನಲ್ಲಿ ಅಸೂಯೆಗೊಂಡು ನಾನು ಹಾಳಾಗುವುದನ್ನೇ ಬಯಸುವವರು.

ಕಿಚ್ಚಿಗೆ—ಬೆಂಕಿಗೆ.

ಧಾಳಿಲಿ—ಯುದ್ಧದಲ್ಲಿ.

ನಟ್ಟ  ಆದಿ

ಎಲೆ ಮನವೆ ಹರಿಧ್ಯಾನ ಮಾಡು ಪ

ಎಲೆ ಜಿಹ್ವೆ ಕೇಳು ಕೇಶವನ ಗುಣಗಳ ನುತಿಸು
ಎಲೆ ಮನವೆ ಮುರವೈರಿಯಂಘ್ರಿಗಳ ಭಜಿಸು
ಎಲೆಲೆ ಕರಗಳಿರ ಶ್ರೀಧರನ ಸೇವೆಯ ಮಾಡಿ
ಎಲೆ ಕರ್ಣಗಳಿರ ಅಚ್ಯುತನ ಕಥೆ ಕೇಳಿ ೧

ಎಲೆ ನೇತ್ರಗಳಿರ ಶ್ರೀಕೃಷ್ಣಮೂರ್ತಿಯ ನೋಡಿ
ಎಲೆ ಪಾದಗಳಿರ ಹರಿಯಾತ್ರೆಯನೆ ಮಾಡಿ
ಎಲೆ ನಾಸಿಕವೆ ಮುಕುಂದನ ಚರಣಕರ್ಪಿಸಿದ
ತುಲಸಿ ಪರಿಮಳವನಾಘ್ರಾಣಿಸು ಅನುದಿನವು ೨

ಎಲೆ ಶಿರವೆ ನೀ ಕೇಳಧೋಕ್ಷಜನ ಸಿರಿಚರಣ
ಜಲರುಹದೊಳಳಿಯಂತೆ ಬಿಡದೆ ಓಲ್ಯಾಡು
ಎಲೆ ತನುವೆ ನೀನು ಶ್ರೀಪುರಂದರವಿಠ್ಠಲನ
ಸಲೆ ಭಕುತ ಜನರ ಸಂಗತಿಯಲ್ಲಿ ಬಾಳು ೩

ಅಧೋಕ್ಷಜನ ಸಿರಿಚರಣ ಜಲರುಹದೊಳು ಅಳಿಯಂತೆ—ನಾರಾಯಣನ ಅಡಿದಾವರೆ ಗಳಲ್ಲಿ ದುಂಬಿಯಂತೆ.
ಸಲೆ—ಚೆನ್ನಾಗಿ.

ಆನಂದಭೈರವಿ ಅಟ್ಟ

ನೀನೆ ದಯಾಳೊ ನಿರ್ಮಲಚಿತ್ತ ಗೋವಿಂದ
ನಿಗಮಗೋಚರ ಮುಕುಂದ ಪ

ಜ್ಞಾನಿಗಳರಸ ನೀನಲ್ಲದೆ ಜಗಕಿನ್ನು
ಮಾನದಿಂದಲಿ ಕಾವ ಧೊರೆಗಳ ನಾ ಕಾಣೆ ಅ

ದಾನವಾಂತಕ ದೀನಜನಮಂದಾರನೆ
ಧ್ಯಾನಿಪರ ಮನಸಂಚಾರನೆ
ಮೌನವಾದೆನು ನಿನ್ನ ಧ್ಯಾನಾನಂದದಿ ಈಗ
ಸಾನುರಾಗದಿ ಕಾಯೊ ಸನಕಾದಿವಂದ್ಯನೆ ೧

ಬಗೆ ಬಗೆಯಲಿ ನಿನ್ನ ತುತಿಪೆನೊ ನಗಧರ
ಖಗಪತಿವಾಹನನೆ
ಮಗುವಿನ ಮಾತೆಂದು ನಗುತ ಕೇಳುತ ಬಂದೆ
ಬೇಗದಿಂದಲಿ ಕಾಯೊ ಸಾಗರಶಯನನೆ ೨

ಮಂದರಧರ ಅರವಿಂದಲೋಚನ ನಿನ್ನ
ಕಂದನೆಂದೆಣಿಸೊ ಎನ್ನ
ಸಂದೇಹವೇಕಿನ್ನು ಸ್ವಾಮಿ ಮುಕುಂದನೆ
ಬಂದೆನ್ನ ಕಾಯೊ ಶ್ರೀಪುರಂದರವಿಠಲ ೩

ನಿಗಮಗೋಚರ—ವೇದಗಳಿಂದಲೇ ತಿಳಿಯಲ್ಪಡತಕ್ಕವನು.

ಮಾನದಿಂದಲಿ—ಅಭಿಮಾನದಿಂದ (ನಿನ್ನವನೆಂಬ ಪ್ರೀತಿಯಿಂದ).

ಖಗಪತಿವಾಹನನೆ—ಗರುಡವಾಹನನೆ.

ರೇಗುಪ್ತಿ ಚಾಪು

ಅಂತರಂಗದಲಿ ಹರಿಯ ಕಾಣದವ ಹುಟ್ಟು ಕುರುಡನೋ ಪ

ಸಂತತ ಶ್ರೀಕೃಷ್ಣ ಚರಿತೆ ಕೇಳದವ ಜಡಮತಿ ಕಿವುಡನೋ
ಎಂದೆಂದಿಗು ಅ

ಹರುಷದಿಂದಲಿ ಹರಿಯ ಪೂಜೆ ಮಾಡದವ ಕರವು ಮುರಿದವನೊ
ಸುರವರನ ಮುಂದೆ ಶ್ರೀಕೃಷ್ಣಾ ಎಂತೆಂದು ಕುಣಿಯದವನೆ ಕುಂಟನೊ
ನರಹರಿ ಚರಣೋದಕ ಧರಿಸದ ಶಿರ ನಾಯಂಬೋ ಹಂಚು ಕಾಣೋ
ಸಿರಿವರಗರ್ಪಿಸದಲೆ ಮಾಡಿದ ಊಟವು ಸೂಕರಭೋಜನವೊ
ಎಂದೆಂದಿಗು ೧

ಅಮರೇಶ ಕೃಷ್ಣಗರ್ಪಿತವಲ್ಲದ ಕರ್ಮ ಅಸತಿಯ ವ್ರತನೇಮವೊ
ರಮೆಯರಸನ ಪ್ರೀತಿಪಡಿಸದ ವಿತರಣೆ ರಂಡೆ ಕೊರಳ ಸೂತ್ರವೊ
ಕಮಲನಾಭನ ಪೊಗಳದ ಸಾರಸಂಗೀತ ಗಾರ್ದಭರೋದನವೊ
ಮಮತೆಯಿಂದಲಿ ಕೇಶವಗೆ ನಮಸ್ಕಾರ ಮಾಡದವನೆ ಖಳನೊ
ಎಂದೆಂದಿಗು ೨

ಜರೆ ಹುಟ್ಟು ಮರಣ ಕಡೆಯ ಸುದ್ದಿಯ ಬಿಟ್ಟು ನರರ ಸೇವಿಸಬೇಡವೊ
ಸುರಧೇನು ಇರಲಾಗಿ ಕಾಣದೆ ಪೊಲೆಹಾಲು ಕರೆದು ಕುಡಿಯಬೇಡವೊ
ಕರಿ ತುರಗವಿರಲು ಬಿಟ್ಟು ಕೆಡಹುವ ಕತ್ತೆಯೇರಲು ಬೇಡವೊ
ಪರಮಪುರುಷ ಪುರಂದರವಿಠಲನಿರಲು ನರರ ಭಜಿಸಬೇಡವೊ
ಎಂದೆಂದಿಗು ೩

[ವ್ಯಾಸರಾಯಸ್ವಾಮಿಗಳ ಕೃತಿಯೊಂದೂ ಹೀಗೆಯೇ ಇದೆ.]

ಧನಾಸರಿ ಆದಿ

ಕರುಣಾಕರ ನೀನೆಂಬುವುದ್ಯಾಕೋ
ಭರವಸೆ ಇಲ್ಲೆನಗೆ ಪ

ಪರಿ ಪರಿಯಲಿ ನರಜನ್ಮವನಿತ್ತು
ತಿರುತಿರುಗಿ ಮನ ಕರಗಿಸುವುದ ಕಂಡು ಅ

ಕರಿ ಧ್ರುವ ಬಲಿ ಪಾಂಚಾಲಿ ಅಹಲ್ಯೆಯು
ಪೊರೆದವ ನೀನಂತೆ
ಅರಿತು ವಿಚಾರಿಸಿ ನೋಡಲದೆಲ್ಲವು
ಪರಿಪರಿ ಕಂತೆಗಳಂತಿದ ಕೃಷ್ಣಾ ೧

ಕರುಣಾಕರ ನೀನಾದರೆ ಈಗಲೇ
ಕರ ಪಿಡಿದೆನ್ನನು ಹರಿ ಕಾಯೊ
ಸರಸಿಜಾಕ್ಷನೆ ಸರಸ ನೀನಾದರೆ
ದುರಿತಗಳೆನ್ನನು ಪೀಡಿಪುದುಂಟೆ ೨

ಮರಣ ಕಾಲದಲಿ ಅಜಾಮಿಳಗೊಲಿದೆ
ಗರುಡಧ್ವಜನೆಂಬ ಬಿರುದಿನಿಂದ
ವರ ಬಿರುದುಗಳು ಉಳಿಯಬೇಕಾದರೆ
ತ್ವರಿತದಿ ಕಾಯೋ ಪುರಂದರವಿಠಲ ೩

ಕರಿ—ಗಜೇಂದ್ರ.
ಪಾಂಚಾಲಿ—ದ್ರೌಪದಿ.
ಕಂತೆಗಳಂತೆ—ಕಟ್ಟುಕತೆಗಳಂತೆ.

೨೨೯

ಸೌರಾಷ್ಟ್ರ ಅಟ್ಟ

ತಾಯಿ ತಂದೆಯೆನ್ನ ಗುರು ದೈವ ನೀನೇ ಕೃಷ್ಣ
ಪಾಹಿ ಪಂಚಾಕ್ಷರ ಪರಮಪುಣ್ಯ ನೀನೆ ಪ

ಕಂದನು ಮಾಡಿದ ತಪ್ಪು ಕಾಯುವ ನೀನೇ ರಾಮ
ಕಂದರ್ಪಜನಕನೆ ಮೋಕ್ಷದಾತನು ನೀನೆ ೧

ಅರುಣ ಕರುಣ ಪಿಡಿದು ಕರ್ಮ ಕಳೆಯಬೇಕೊ ಮುಂದೆ
ಮರಣಜನನವಿಲ್ಲದ ಪದವಿ ಸೇರಿಸಬೇಕೊ ೨

ಎಂದೆಂದಿಗೂ ನಿನ್ನ ದಾಸನಾಗಬೇಕೊ
ಪುರಂದರವಿಠಲ ಚರಣವನು ತೋರಬೇಕೊ ೩

ಪಂಚಾಕ್ಷರ—'ಕೃಷ್ಣಾಯ ನಮಃ' ಎಂಬ ಐದಕ್ಷರಗಳ ಮಂತ್ರ.
ಅರುಣ ಕರುಣ ಪಿಡಿದು—ಅವ್ಯಾಜವಾದ ದಯೆಯಿಂದ.
ಮರಣಜನನವಿಲ್ಲದ ಪದವಿ—ಮುಕ್ತಿ.



ಮೋಹನಸಾವೇರಿ ತ್ರಿವಿಡೆ

ನಿನ್ನ ನಂಬಿದೆ ನೀರಜನಯನ
ಎನ್ನ ಪಾಲಿಸೊ ಇಂದಿರಾರಮಣ ಪ

ಮುನ್ನ ಪಾಂಚಾಲಿಯು ಮೊರೆಯ ಲಾಲಿಸಿ ಕಾಯ್ದ
ಪನ್ನಗಶಯನ ನೀ ಪರಮ ಪುರುಷನೆಂದು ಅ

ಹರಿ ಸರ್ವೋತ್ತಮನಹುದೆಂಬೋ ಬಾಲಕನ
ಹಿರಣ್ಯಕಶಿಪು ಹಿಡಿದು ಬಾಧಿಸಲು
ನರಹರಿ ರೂಪದಿಂದವನ ವಕ್ಷವ ಸೀಳ್ದ
ವರ ವಿಶ್ವಾತ್ಮಕನಹುದೆಂದು ನಾ ದೃಢವಾಗಿ ೧

ಪಾದವ ಪಿಡಿದು ನೀರೊಳಗೆಳೆವ ನಕ್ರನ
ಬಾಧೆಯ ತಾಳದೆ ಕರಿ ಮೊರೆಯಿಡಲು
ಆದಿಮೂರುತಿ ಚಕ್ರದಿ ನಕ್ರನ ಕೊಂದ
ವೇದಾಂತ ವೇದ್ಯ ಅನಾಥರಕ್ಷಕನೆಂದು ೨

ಇಳೆಯೊಡೆಯನ ತೊಡೆಗೆ ನೀನರ್ಹನಲ್ಲೆಂದು
ಲಲನೆ ಕೈಪಿಡಿದೆಳೆಯಲು ಕಂದನ
ನಳಿನಾಕ್ಷ ನಿನ್ನ ಮೊರೆಯ ಹೊಕ್ಕು ತಪಿಸಲು
ಒಲಿದು ಧ್ರುವಗೆ ನಿಜಲೋಕವಿತ್ತವನೆಂದು ೩

ಸುದತಿ ಗೌತಮಸತಿ ಮುನಿಶಾಪದಿಂದಲಿ
ಒದಗಿ ಪಾಷಾಣರೂಪದಲಿರಲು
ಪದರಜದಿಂದಲಿ ಸತಿಯ ಮಾಡಿದ ಯೋಗಿ
ಹೃದಯ ಭೂಷಣ ನಿನ್ನ ಪಾದಮಹಿಮೆಯ ಕಂಡು ೪

ಪರಮ ಪಾವನೆ ಜಗದೇಕಮಾತೆಯನು
ದುರುಳ ರಾವಣನು ಕದ್ದೊಯ್ದಿರಲು
ಶರಣೆಂದು ವಿಭೀಷಣ ಚರಣಕೆರಗಲಾಗಿ
ಸ್ಥಿರಪಟ್ಟವನು ಕೊಟ್ಟ ಪರಮಾತ್ಮನಹುದೆಂದು ೫

ಅಂಬರೀಷನೆಂಬ ನೃಪ ದ್ವಾದಶಿ ವ್ರತ
ಸಂಭ್ರಮದಲಿ ಹರಿಗರ್ಪಿಸಲು
ದೊಂಬಿ ಮಾಡಿ ದೂರ್ವಾಸ ಶಪಿಸಲಾಗಿ
ಬೆಂಬಿಡದೆಲೆ ಚಕ್ರದಿಂದ ಕಾಯ್ದವನೆಂದು ೬

ಧರೆಯೊಳು ನಿಮ್ಮ ಮಹಿಮೆಯ ಪೊಗಳುವರೆ
ಸರಿಸಿಜೋದ್ಭವ ಶೇಷರಗರಿದು
ಸ್ಮರಣೆ ಮಾತ್ರದಿ ಅಜಾಮಿಳಗೆ ಮುಕ್ತಿಯನಿತ್ತ
ಪುರಂದರವಿಠಲ ನೀ ಜಗದೀಶನೆಂದು ೭



## ೨೩೧

ಶಂಕರಾಭರಣ — ಅಟ್ಟ

ನೀನೇ ದಯಾಪರನೊ ನಿನ್ನ ವರ ಸಾಧನವೊ ಪ

ಮುದ್ದು ಹಯವದನ ಸುಖಸದನ ಪೇಳಿದನ ಅ

ಮದಕರಿಯು ಸರಸಿಯೊಳು ಮಕರಿಬಾಧೆಗೆ ಸಿಲುಕಿ
ಪದುಮೇಶ ಪದುಮಾಕ್ಷ ಪದುಮನಾಭ
ಪದುಮಸಂಭವನಯ್ಯ ಪಾಹಿಪಾಹಿ ಎನಲು
ಒದಗಿ ಪಾಲಿಸಿದೆ ತವ ದಯವೊಂದೆ ಸಾಧನವೊ ೧

ಅಂತ್ಯಜಳ ಸಹವಾಸದಿ ವಿಪ್ರವರನೊಬ್ಬ
ಸಂತೋಷದಿಂದ ಬಹುಕಾಲ ಕಳೆದು
ಅಂತ್ಯಕಾಲಕೆ ತನ್ನ ಮಗನ ಕರೆಯಲು ಕಾಯ್ದೆ
ಕಂತುಜನಕ ನಿನ್ನ ದಯವೊಂದ ಸಾಧನವೊ ೨

ಅವರವರ ಯೋಗ್ಯತೆಯನರಿತು ಪ್ರೇರಕನಾಗಿ
ಅವರಿಂದ ನುಡಿಸಿ ಅವರ ನುಡಿಗಳಿಗೆ ಹಿಗ್ಗಿ
ಅವರಿಗೊಲಿವೆ ನಮ್ಮ ಪುರಂದರವಿಠ್ಠಲ
ಅವನೀಶನೆ ನಿನ್ನ ದಯವೊಂದೆ ಸಾಧನವೊ ೩

[ಮೊದಲ ನುಡಿ ಗಜೇಂದ್ರ ಮೋಕ್ಷವನ್ನೂ, ಎರಡನೆಯದು ಅಜಾಮಿಳೋಪಾಖ್ಯಾನವನ್ನೂ ಉಲ್ಲೇಖಿಸುವುವು. ಜೀವರ ಯೋಗ್ಯತಾನುಸಾರ ಅವರಿಂದ ಕರ್ಮ ಮಾಡಿಸಿ ಅವರ ಫಲವನ್ನುಣ್ಣುವಂತೆ ಮಾಡುವವನು ಪರಮಾತ್ಮನೇ. ಜೀವರು ಹೀಗೆ ಮಾಡುವ ಕರ್ಮಗಳೆಲ್ಲ ಸಾಧನೆಗಳೇ; ಅವನ್ನು ಅವರಿಂದ ಮಾಡಿಸಿ ಕಡೆಗೆ ಮುಕ್ತಿಯ ದಾರಿಗೆ ತರುವುದು ಅವನ ದಯವೇ. ಯೋಗ್ಯತೆಯುಳ್ಳ ಜೀವರಿಗೆ ಭಕ್ತಿಯನ್ನು ನೀಡುವವನೂ, ಆ ಭಕ್ತಿಯಿಂದ ಪ್ರಸನ್ನನಾಗುವನೂ ಅವನೇ.]

ಕಮಾಚು ಚಾಪು

ನೀ ತಂದೆ ನಾ ಬಂದೆ
ನೀ ಎನ್ನ ತಂದೆ ಪ

ಮನ್ಮನದಾಧೀನ ಪೇಳೆನ್ನ ತಂದೆ ಅ

ಒಂದಲ್ಲ ಎರಡಲ್ಲ
ಮೂರಲ್ಲ ನಾಲ್ಕಲ್ಲ
ಎಂಭತ್ತನಾಲ್ಕುಲಕ್ಷ ಯೋನಿಗಳಲ್ಲಿ ನೀ ತಂದೆ ೧

ಕಾಮದಲಿ ಎನ ತಂದೆ
ಕ್ರೋಧದಲಿ ಎನ ತಂದೆ
ಉನ್ಮದಾಭರಣಗಳೆನ್ನೆಲ್ಲ ತಂದೆ ೨

ಹಿಂದೆ ಬರೆದಾ ಬರಹ
ಹೆಂಗಾದರಾಗಲಿ ಮುಂದೆ
ಚಂದಾಗಿ ಬರೆಯಯ್ಯ ಪು
ರಂದರವಿಠಲ ೩

ನೀ ತಂದೆ—ನನ್ನನ್ನು ನೀನೇ ಸಂಸಾರಕ್ಕೆ ಎಳೆದು ತಂದವನು. ಜೀವರಿಗೆ ಅನಾದಿ ಸಿದ್ಧವಾದ ಲಿಂಗದೇಹದ ಸಂಬಂಧವನ್ನು ಒದಗಿಸುವುದು ಪರಮಾತ್ಮನ ಸಂಕಲ್ಪವೇ. ಲಿಂಗದೇಹದ ಸಂಬಂಧವೇ ಜನ್ಮ.

ನೀ ಎನ್ನ ತಂದೆ—ಸೃಷ್ಟಿಗೆ ಮೂಲವಾದುದು ಅವನ ಸಂಕಲ್ಪವೇ ಆದುದರಿಂದ ಎಲ್ಲ ಜೀವ ಜಡಜಗತ್ತಿಗೂ ಅವನೇ ತಂದೆ.

ಮನ್ಮನದಾಧೀನ—ನನ್ನ ಮನಸ್ಸಿನ ಪ್ರವೃತ್ತಿಗೆ ಒಳಗಾಗುವವನು ; ಭಕ್ತಿಗೆ ವಶವಾಗುವವನು.

ಎಂಭತ್ತುನಾಲ್ಕುಲಕ್ಷ ಯೋನಿಗಳಲ್ಲಿ—ಪುರಾಣಗಳಲ್ಲಿ ಬರುವ ಎಣಿಕೆ ವೃಕ್ಷಾದಿ ಯೋನಿ ಇಪ್ಪತ್ತು ಲಕ್ಷ, ಅಂಡಜ–ಸ್ವೇದಜಯೋನಿ ಹತ್ತುಲಕ್ಷ, ಕ್ರಿಮಿಯೋನಿ ಹನ್ನೊಂದು ಲಕ್ಷ, ಜಲಜಯೋನಿ ಒಂಬತ್ತು ಲಕ್ಷ, ಪಶ್ವಾದಿಯೋನಿ ಮೂವತ್ತು ಲಕ್ಷ, ಮನುಷ್ಯಯೋನಿ ನಾಲ್ಕು ಲಕ್ಷ, ಒಟ್ಟು ಎಂಭತ್ತು ನಾಲ್ಕು ಲಕ್ಷ ಯೋನಿಗಳು. ಜೀವವು ಈ ಎಲ್ಲ ಯೋನಿಗಳಲ್ಲೂ ಬಂದು ಕಡೆಗೆ ಮನುಷ್ಯಯೋನಿಯಲ್ಲಿ ಹುಟ್ಟುವುದೆಂದು ನಂಬಿಕೆ. ಪುರಂದರದಾಸರ 'ಎಂದಿಗೆ ನಾನಿನ್ನು ಧನ್ಯನಹೆನೊ' ಎಂಬ ಕಾಂಬೋದಿರಾಗದ ಕೃತಿಯಲ್ಲಿಯೂ ಈ ಎಣಿಕೆಯಿದೆ.

## ೨೩೩

ಪಂತುವರಾಳಿ ಅಟ್ಟ

ಬಂದೆಯ ಪರಿಣಾಮಕೆ ನಿನ್ನ
ಬಂಧುಬಳಗವೆಲ್ಲ ಬಿಟ್ಟು ಸನ್ಮಾರ್ಗಕೆ ಪ

ಸ್ಥೂಲ ಸೂಕ್ಷ್ಮ ಕಾರಣ ದೇಹಂಗಳ
ಬೀಳುಗೆಡಹಿ ಪಂಚಭೂತಂಗಳ
ಪಾಳುಮಾಡಿ ಪಂಚೇಂದ್ರಿಯಗಳನ್ನೆಲ್ಲ
ಕೋಳಕ್ಕೆ ತಗಲ್ಹಾಕಿ ಕೊನಬುಗಾರನಾಗಿ ೧

ಸಂಚಿತ ಆಗಾಮಿ ಪ್ರಾರಬ್ಧಗಳನೆಲ್ಲ
ಸಂಚುಮಾಡಿ ಸಂಕೋಲೆ ಹಾಕಿ
ಮಿಂಚುವ ಧನಪುತ್ರದಾರೇಷಣವೆಂಬ
ಪಂಚಿಪ ಕವಲದಾರಿಯ ಬಿಟ್ಟು ಮಾರ್ಗಕೆ ೨

ಅಷ್ಟಮದಂಗಳ ನಷ್ಟವನ್ನೆಮಾಡಿ
ಅಷ್ಟೈಶ್ವರ್ಯವ ಕಟ್ಟುಮಾಡಿ
ಅಷ್ಟಭೋಗಂಗಳ ಕುಟ್ಟಿ ಕೆಡಹಿ ಬಹ
ನಷ್ಟತುಷ್ಟಿಗಳನೆಳ್ಳಷ್ಟು ಲಕ್ಷಿಸದೆ ೩

ಕಾಮವ ಖಂಡಿಸಿ ಕ್ರೋಧವ ದಂಡಿಸಿ
ಕಾಮಿನಿ ಹೇಮ ಭೂಮಿಯ ನಿಂದಿಸಿ
ತಾಮಸ ಬುದ್ಧಿಯ ನೀಗಿಸಿ ಕರ್ಮ ನಿ
ರ್ನಾಮಗೈಸಿ ಮದಮತ್ಸರ ದಹಿಸಿ ೪

ಹೊಳೆವ ಪ್ರಪಂಚದ ಬಳಗದ ಬಳ್ಳಿಯ
ಬಲೆಗಳೊಳಗೆ ಸಿಲುಕದೆ ಹರಿದು
ಒಲಿದು ಮುಕ್ತಿಯನೀವ ಪುರಂದರವಿಠಲನ
ಒಲುಮೆಯಾದುದರಿಂದ ನಾನು ನೀನೆನ್ನದೆ ೫

ಪರಿಣಾಮಕ್ಕೆ—ಸಂಸಾರಕ್ಕೆ.

ಸ್ಥೂಲ ಸೂಕ್ಷ್ಮ ಕಾರಣದೇಹಂಗಳ—ಮೂರು ದೇಹಗಳ ಎಣಿಕೆಯಿದೆ. ಪಾಂಚಭೌತಿಕವಾದ ದೇಹ ಮತ್ತು ಇಂದ್ರಿಯಗಳು ಸ್ಥೂಲದೇಹ (ಅನ್ನಮಯಕೋಶ) ; ದಶ ಇಂದ್ರಿಯಗಳು, ಪಂಚವಾಯುಗಳು, ಮನಸ್ಸು, ಬುದ್ಧಿ ಇಷ್ಟು ಸೇರಿ ಸೂಕ್ಷ್ಮದೇಹ (ಪ್ರಾಣಮಯ, ಮನೋಮಯ, ವಿಜ್ಞಾನಮಯ ಕೋಶಗಳು) ; ಕರ್ಮಕ್ಕೆ ಆಶ್ರಯವಾಗಿ, ಜೀವಕ್ಕೂ ದೇಹಕ್ಕೂ ಸಂಬಂಧವನ್ನು ಒದಗಿಸುವ, ದೇಹಪಾತಾನಂತರ ಮುಂದೆ ದೇಹವನ್ನು ಪಡೆಯುವ ಆತಿವಾಹಿಕ ಕಾರಣ ಶರೀರ (ಆನಂದಮಯಕೋಶ).

ಪಂಚಭೂತಂಗಳು—ಪೃಥ್ವೀ, ಅಪ್, ತೇಜ, ವಾಯು, ಆಕಾಶ.

ಪಂಚೇಂದ್ರಿಯಗಳು—ಚಕ್ಷು, ಶ್ರೋತ್ರ, ಘ್ರಾಣ, ರಸನಾ, ಸ್ಪರ್ಶ.

ಕೋಳ—ಕೈಗೆ ತೊಡಿಸುವ ಸಂಕೋಲೆ.

ಕೊನಬುಗಾರ—ಒನಪುಗಾರ, ಬೆಡಗುಗಾರ.

ಸಂಚಿತ ಆಗಾಮಿ ಪ್ರಾರಬ್ಧಗಳು—ಮೂರು ಬಗೆಯ ಕರ್ಮಗಳು. ಹಿಂದಣ ಜನ್ಮಗಳಿಂದ ಕೂಡಿಹಾಕಿಕೊಂಡು ಬಂದಿರುವ ಕರ್ಮಗಳು ಸಂಚಿತ ; ಮುಂದೆ ಫಲವನ್ನು ಕೊಡಲಿರುವುವು ಆಗಾಮಿ ; ಈ ದೇಹಕ್ಕೆ ಈ ಸ್ಥಿತಿಗೆ ಕಾರಣವಾಗಿ ಫಲವನ್ನು ಕೊಡಲು ಆಗಲೆ ತೊಡಗಿರುವುವು ಪ್ರಾರಬ್ಧ.

ಧನಪುತ್ರದಾರೇಷಣ—ಏಷಣಾತ್ರಯ. ಏಷಣವೆಂದರೆ ಅರಸಿಕೊಂಡು ಹೋಗುವುದು ; ಎಲ್ಲ ಕರ್ಮಗಳಿಗೂ ಪ್ರೇರಕವಾಗಿರುವುದು. ಇವು ಮೂರು ಬಗೆ. ಸಂಪತ್ತಿನ ಏಷಣೆ, ಮಕ್ಕಳಾಗಬೇಕೆಂಬ ಏಷಣೆ, ಹೆಂಗಳೆಯರ ಏಷಣೆ.

ಅಷ್ಟಮದ—ಕುಲ, ಧನ, ವಿದ್ಯಾ, ರೂಪ, ಅನ್ನ, ಅರ್ಥ, ಯೌವನ, ಬಲ.

ಅಷ್ಟೈಶ್ವರ್ಯ—ಧನ, ಧಾನ್ಯ, ವಾಹನ, ವಾಸ್ತು, ಪುತ್ರ, ಮಿತ್ರ, ಕಳತ್ರ, ಭೃತ್ಯ.

ಅಷ್ಟಭೋಗ—ಗೃಹ, ಶಯ್ಯಾ, ವಸ್ತ್ರ, ಆಭರಣ, ಸ್ತ್ರೀ, ಪುಷ್ಪ, ಗಂಧ, ತಾಂಬೂಲ.

ನಷ್ಟತುಷ್ಟಿಗಳನೆಳ್ಳಷ್ಟು ಲಕ್ಷಿಸದೆ—ಸಮಬುದ್ಧಿ ; 'ಲಾಭಾಲಾಭೇ' ಇತ್ಯಾದಿ.

ತಾಮಸಬುದ್ಧಿ—ಅಧ್ಯಾತ್ಮದಲ್ಲಿ ಅಲಸಿಕೆ.

ಬಳೆಗದ ಬಳ್ಳಿ—ಪ್ರಾಪಂಚಿಕ ಆಕರ್ಷಣೆ, ಪ್ರಲೋಭನೆ ; ನೆಂಟರಿಷ್ಟರ ಕರುಳಬಳ್ಳಿ.

ನಾದನಾಮಕ್ರಿಯೆ ಏಕ

ಬ್ರಹ್ಮಾನಂದದ ಸಭೆಯೊಳಗಲ್ಲಿ ಸುಮ್ಮನೆ ಇರುತಿಹುದೇನಯ್ಯ ಪ

ಮೂಡದು ಉಣ್ಣದು ಕೂಡದು ಮಾಣದು
ಕಾಡದು ಬೇಡದು ಕಂಗೆಡದು
ನಾಡ ಮಾತುಗಳ ಬಲ್ಲದು ಆಡದು
ರೂಢಿಯೊಳಿರತಿಹುದೇನಯ್ಯ ೧

ಪೊಡವಿಗಧಿಕವೆಂಬುವರಿಗೆ ಬಲ್ಲುದು
ಕಡೆ ಮೊದಲಿಲ್ಲದ ಒಡಲಿಹುದು
ಬೆಡಗನರಿವೆನೆಂಬುವರಿಗಗೋಚರ
ಪೊಡವಿಯೊಳಗಣ ಭಕ್ತರ ಬಲ್ಲುದು ೨

ನಿಲ್ಲದು ನಿಲುಕದು ಎಲ್ಲಿಗೆ ಪೋಗದು
ಬಲ್ಲೆನೆಂಬುವರಿಗಳವಡದು
ಬಲ್ಲಿದ ನಮ್ಮ ಪುರಂದರವಿಠ್ಠಲ
ಗಲ್ಲದೆ ತಿಳಿಯದು ಜಗದೊಳಗೆ ೩

[ಬ್ರಹ್ಮಾನಂದದ ಸಭೆಯೆಂದರೆ ಮುಕ್ತಿಮಂಟಪ, ವೈಕುಂಠ. ಅಲ್ಲಿ ಮುಕ್ತರು ನೆರೆದಿದ್ದು ಪರಮಾತ್ಮನನ್ನು ಸರ್ವದಾ ಓಲೈಸುವರು. ಅವರಿಗೆ ಲಿಂಗದೇಹದ ಭಂಗವಾಗಿರುವುದರಿಂದ ಲೌಕಿಕ ವ್ಯಾಪಾರಗಳೇನೂ ನಡೆಯದು. ಮುಕ್ತಿಯಲ್ಲಿ ಜೀವರುಗಳು ತಮ್ಮ ಸ್ವರೂಪವನ್ನು ಅರಿಯುವರು, ಪರಮಾತ್ಮನ ಸರ್ವಾಧಿಕ್ಯವನ್ನೂ ಅರಿಯುವರು. ಈ ಸ್ಥಿತಿಗೆ ಆದಿಯಾಗಲಿ, ಅಂತ್ಯವಾಗಲಿ, ವಿಕಾರವಾಗಲಿ ಇಲ್ಲ.]

ನಾದನಾಮಕ್ರಿಯೆ ಆದಿ

ಮನವ ನಿಲಿಸುವುದು ಬಹು ಕಷ್ಟ
ಹರಿದಾಡುವಂಥ ಪ

ಕಾಶಿಗೆ ಹೋಗಲಿಬಹುದು ದೇಶ ತಿರುಗಲಿಬಹುದು
ಆಸೆ ಸುಟ್ಟಂತೆ ಇರಬಹುದು
ಹರಿದಾಡುವಂಥ ೧

ಜಪವ ಮಾಡಲಿಬಹುದು ತಪವ ಮಾಡಲಿಬಹುದು
ಉಪವಾಸ ವ್ರತದಲ್ಲಿರಬಹುದು
ಹರಿದಾಡುವಂಥ ೨

ಸ್ನಾನ ಮಾಡಲಿಬಹುದು ಮೌನ ಮಾಡಲಿಬಹುದು
ಧ್ಯಾನದಿ ಪುರಂದರವಿಠಲನ ಚರಣದಲಿ
ಹರಿದಾಡುವಂಥ ೩

[ಮನಸ್ಸು ದುರ್ನಿಗ್ರಹವಾದುದೆಂದೂ, ಚಂಚಲವೆಂದೂ, ಪ್ರಮಾಥಿಯೆಂದೂ ಭಗವದ್ಗೀತೆಯಲ್ಲಿ ವಿವರಣೆಯಿದೆ. ಇಂದ್ರಿಯ ವ್ಯಾಪಾರದಿಂದ ಪುಷ್ಟವಾದ ಮನಸ್ಸು, ವಿಷಯಭೋಗಗಳಿಂದ ಬೆಳೆದು ಅದರಲ್ಲೇ ಬೇರೂರಿದ ಮನಸ್ಸನ್ನು ವಶಮಾಡಿಕೊಳ್ಳು ವುದು ಕಷ್ಟವೆಂದು ವ್ಯಾಸರಾಯಸ್ವಾಮಿಗಳ ಕೀರ್ತನೆಗಳಲ್ಲೂ ಬರುತ್ತದೆ. ಭ್ರಾಂತಿ ಯಿಂದ ಮನಸ್ಸನ್ನು ತಿರುಗಿಸಬೇಕಾದರೆ ಹರಿಯ ಕಾರುಣ್ಯವೇ ಬೇಕೆಂದು ಅವರು

'ಎನ್ನ ಮನ ಕಂಡ ಕಡೆಗೆ ಎರಗುತಿದೆ
ನಿನ್ನಲಿ ನಿಲಿಸೊ ಕಾಯೋ'

ಎಂದು ಬೇಡಿಕೊಂಡರು. ಒಮ್ಮೊಮ್ಮೆ ಬೇಸತ್ತು

'ಛೀ ಛೀ ಮನವೆ ನಾಚದ ತನುವೆ
ನೀಚವೃತ್ತಿಯ ಬಿಟ್ಟು ನೆನೆ ಕಂಡ್ಯ ಹರಿಯ'

ಎಂದು ಬೋಧಿಸಿದರು.]

ಬೇಹಾಗು

ಆದಿ

ನೀ ಕೊಡೆ ನಾ ಬಿಡೆ, ಕೇಳಯ್ಯ ಮಾತ ಪ

ಗೋಕುಲಪತಿ ಗೋವಿಂದಯ್ಯ ಅ

ಪಾಡುವೆ ನಿನ್ನಯ ಲೀಲೆಯ ಗುಣಗಳ
ಕಾಡುವೆ ಬೇಡುವೆ ನಾಡೊಳಗೆ
ಮೋಡಿಯ ಬಿಡು, ಕೊಡು ಮೊದಲಿಗೆ ಬಡ್ಡಿಯ
ಕಾಡೊಳು ತುರುಗಳ ಕಾಯುವನೆ ೧

ಎಂಟಕ್ಷರವಿದೆ ದ್ವಯ ಸಾಕ್ಷಿಗಳಿವೆ
ಗಂಟಿಗೆ ಮೋಸವೆ ದಾಸನಿಗೆ
ಉಂಟೆನಿಸುವ ನಿನ್ನ ಭಂಟರ ಬಾಯೊಳು
ಉಂಟಾದ ಬಡ್ಡಿಯ ಕೊಡು ತುಡುಗ ೨

ಆಗಭೋಗಗಳಿವೆ ಅನುಭೋಗಗಳಿವೆ
ಈಗಲೆ ಕೊಡೆನಗೆ ಮುಕ್ತಿಯನು
ನಾಗಶಯನ ಶ್ರೀ ಪುರಂದರವಿಠಲನೆ
ಬೇಗನೆ ಕೊಡು ಸಾಯುಜ್ಯವನು ೩

ಮೋಡಿ—ಮಾಯ, ಕಪಟ, ಸೋಗು.
ಎಂಟಕ್ಷರವಿದೆ—'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರಿ ಮಂತ್ರ.
ದ್ವಯಸಾಕ್ಷಿ—'ನ ಮೇ ಭಕ್ತಃ ಪ್ರಣಶ್ಯತಿ' ("ನನ್ನ ಭಕ್ತರು ಹಾಳಾಗುವುದಿಲ್ಲ") ಮತ್ತು 'ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ' ("ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡಿಸುತ್ತೇನೆ") ಎಂಬ ಭಗವಂತನೇ ಕೊಟ್ಟಿರುವ ಎರಡು ಆಶ್ವಾಸನೆಗಳು.
ಗಂಟು—ಹರಿದಾಸರ ಮೂಲಧನ, ಆತ್ಯಂತಿಕ ಭಕ್ತಿ.
ತುಡುಗ—ಕಳ್ಳ.
ಆಗಭೋಗ—(ಆಗಸ್) ದುರಾಚಾರದ ವಿಷಯತೃಪ್ತಿ.
ಅನುಭೋಗ—ಪೂರ್ವಕರ್ಮದ ಫಲವನ್ನು ಅನುಭವಿಸುವುದು.
ಸಾಯುಜ್ಯ—ಮುಕ್ತಿಯಲ್ಲೊಂದು ಬಗೆ.

## ೨೩೭

ಮುಖಾರಿ — ಝಂಪೆ

ಯಾಕೆ ಈ ದೇಹವನು ದಂಡಿಸುವೆ ವ್ಯರ್ಥ ಪ

ಏಕಚಿತ್ತದಲಿ ಲಕ್ಷ್ಮೀಪತಿ ಎನ್ನದೆ ಅ

ಸ್ನಾನವನು ಮಾಡಿ ನೀ ಧ್ಯಾನಿಸುವೆನೆಂದೆನುತ
ಮೌನದಲಿ ಕುಳಿತು ಬಕಪಕ್ಷಿಯಂತೆ
ಹೀನಬುದ್ಧಿಗಳ ಯೋಚಿಸಿ ಕುಳಿತು ಫಲವೇನು
ದಾನವಾಂತಕನ ಧ್ಯಾನಕೆ ಮನವುಂಟೆ ೧

ಜಪವ ಮಾಡುವೆನೆನುತ ಕಪಟಬುದ್ಧಿಯ ಗುಣಿಸಿ
ಗುಪಿತದಲಿ ಕುಳಿತು ಫಲವೇನು ನಿನಗೆ
ಅಪರಿಮಿತ ಮಹಿಮ ನಾರಾಯಣ ಎಂದೆನಲು
ಸಫಲವಲ್ಲದೆ ಬೇರೆ ಜಪವು ತಾನುಂಟೆ ೨

ಹಿಂದಜಾಮಿಳಗೆ ಮುಕುತಿಯು ನಾಮ-ಮಾತ್ರದಲಿ
ಚಂದದಿಂ ಕರುಣಿಸಲಿಲ್ಲವೇನೊ
ಸಂದೇಹವನು ಬಿಟ್ಟು ನೀನೊಂದು ಕ್ಷಣ ಬಿಡದೆ
ತಂದೆ ಪುರಂದರವಿಠಲನ ನೆನೆ ಕಂಡ್ಯ ಮನವೆ ೩



ಕಲ್ಯಾಣಿ ಅಟ್ಟ

ಯಾಕೆ ಕಕುಲಾತಿಪಡುವೆ ಎಲೆ ಮರುಳೆ ಪ

ಲೋಕ ಮೂರನು ಆಳ್ವ ಶ್ರೀನಿವಾಸನು ನಮ್ಮ
ಸಾಕಲಾರದೆ ಬಿಡುವನೇ, ಮರುಳೆ ಅ

ಕಲ್ಲು ಪಡೆಯುಲಿ ಹುಟ್ಟಿರುವ ಮಂಡೂಕಕೆ
ಅಲ್ಲಿ ತಂದಿಡುವರ್‍ಯಾರೊ
ಎಲ್ಲವನು ತೊರೆದಿರುವ ಅರಣ್ಯವಾಸಿಯನು
ಅಲ್ಲಿ ಸಲಹದೆ ಬಿಡುವನೇ, ಮರುಳೆ ೧

ಅಡವಿಯೊಳು ಹುಟ್ಟುವ ಮೃಗಜಾತಿಗಳಿಗೆಲ್ಲ
ಬಿಡದೆ ತಂದಿಡುವರ್‍ಯಾರೊ
ಗಿಡದಿಂದ ಗಿಡಗಳಿಗೆ ಹಾರುವ ಪಕ್ಷಿಗೆ
ಪಡಿಯನಳೆಯದೆ ಬಿಡುವನೇ, ಮರುಳೆ ೨

ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳನ್ನು
ಇಂಬಾಗಿ ಸಲಹುತಿಹನು
ನಂಬು ಶ್ರೀ ಪುರಂದರವಿಠಲನ ಚರಣವನು
ನಂಬಿದರೆ ಸಲಹದಿಹನೇ, ಮರುಳೆ ೩

ಕಕುಲಾತಿ—ಕಕ್ಕುಲತೆ, ಪ್ರೀತಿಯಿಂದ ಒದಗುವ ಕಾತರ.

ಪಡೆ—ಪೊಟರೆ, ಡೊಗರು.

ಪಡಿಯನು—ನಿರ್ದಿಷ್ಟವಾದ ಆಹಾರವನ್ನು.

ಇಂಬಾಗಿ—ಸೊಗಸಾಗಿ, ಚೆನ್ನಾಗಿ.

ಶಂಕರಾಭರಣ ಆದಿ

ಯಮನೆಲ್ಲೊ ಕಾಣೆನೆಂದ್ಹೇಳಬೇಡ ಪ

ಯಮನೆ ಶ್ರೀರಾಮನು ಸಂದೇಹ ಬೇಡ ಅ

ನಂಬಿದ ವಿಭೀಷಣಗೆ ರಾಮನಾದ
ನಂಬದಿದ್ದ ರಾವಣಗೆ ಯಮನಾದ ೧

ನಂಬಿದ ಅರ್ಜುನನಿಗೆ ಭೃತ್ಯನಾದ
ನಂಬದ ದುರ್ಯೋಧನನಿಗೆ ಮೃತ್ಯುವಾದ ೨

ನಂಬಿದ ಪ್ರಹ್ಲಾದನಿಗೆ ಹರಿಯಾದ
ನಂಬದ ಹಿರಣ್ಯಕನಿಗೆ ಉರಿಯಾದ ೩

ನಂಬಿದ ಉಗ್ರಸೇನಗೆ ಮಿತ್ರನಾದ
ನಂಬದಿದ್ದ ಕಂಸನಿಗೆ ಶತ್ರುವಾದ ೪

ನಂಬಿಕೊಳ್ಳಿ ಬೇಗ ಶ್ರೀಕೃಷ್ಣದೇವನ
ಕಂಬು ಚಕ್ರಧಾರಿ ಪುರಂದರವಿಠಲನ ೫

ಹಿರಣ್ಯಕ—ಹಿರಣ್ಯಕಶಿಪು.

ಉಗ್ರಸೇನ—ಮಧುರೆಯ ರಾಜನಾಗಿದ್ದವನು ; ಕಂಸನ ತಂದೆ. ದುರಾಚಾರಿಯಾದ ಕಂಸನು ರಾಜನಾಗಬೇಕೆಂಬ ಆಸೆಯಿಂದ ತಂದೆಯನ್ನೇ ಸೆರೆಯಲ್ಲಿರಿಸಿ, ತಾನು ಆಡಳಿತ ನಡೆಸತೊಡಗಿದ. ಉಗ್ರಸೇನನ ಸೋದರ ದೇವಕನೆಂಬುವನ ಮಗಳೇ ದೇವಕಿ, ಕೃಷ್ಣನ ತಾಯಿ. ಆಹುಕನೆಂಬ ಚಂದ್ರವಂಶದ ಅರಸನ ಮಕ್ಕಳು ದೇವಕ, ಉಗ್ರಸೇನರು.

ಕಂಬು—ಶಂಖ.

ಶಂಕರಾಭರಣ

ಅಟ್ಟ

ಹೇವವೆಲ್ಲಿಹುದಯ್ಯ ವೈಕುಂಠಪತಿಗೆ ಪ

ಮೌನದಿಂ ಭಾರ್ಗವನು ಮಾತೆಯ ಶಿರವ ತರಿದ

ಒಬ್ಬ ಮಾವನ ಕೊಂದ ಒಬ್ಬ ಮಾವನ ಎಸೆದ
ಒಬ್ಬ ಮಾವನ ಕೂಡೆ ಕಡಿದಾಡಿದ
ಒಬ್ಬ ಭಾವನ ಹಿಡಿದು ಹೆಡೆ ಮುರಿಯ ಕಟ್ಟಿದ
ಒಬ್ಬ ಮೈದುನಗೆ ಬಂಡಿಯ ಬೋವನಾದ ೧

ಕುಂಭಿನಿಗೆ ಪತಿಯಾದ ಕುಂಭಿನಿಗೆ ಸುತನಾದ
ಕುಂಭಿನೀ ಮಗನ ಸಂಹಾರ ಮಾಡಿದ
ಅಂಬುಧಿಗೆ ಪಿತನಾದ ಅಂಬುಧಿಗೆ ಸುತನಾದ
ಅಂಬುಧೀಜಾತೆಗೆ ಸ್ವಾಮಿಯಾದ ೨

ಬೊಮ್ಮನ ಸಂಹರಿಸಿ ಅವನ ಮಕ್ಕಳನು
ಈ ಮಹಿಯೊಳಗವರ ಹತಮಾಡಿದ
ರಮ್ಮೆ ವೈಕುಂಠಪತಿ ಪುರಂದರವಿಠ್ಠಲ
ಬೊಮ್ಮ ಮಾರುತಿಗೇಕೆ ಬಂಧು ಬಳಗ ೩

ಹೇವ—ನಾಚಿಕೆ, ಮಾನ.

ಭಾರ್ಗವನು...—ಪರಶುರಾಮನು ತನ್ನ ತಾಯಿ ರೇಣುಕೆಯ ತಲೆಯನ್ನು ಕತ್ತರಿಸಿದ **ಪ್ರಸಂಗ.**

ಒಬ್ಬ ಮಾವನ ಕೊಂದ—ಕಂಸನನ್ನು (ಸೋದರಮಾವ).

ಒಬ್ಬ ಮಾವನ ಎಸೆದ—ರಾಮಾವತಾರದಲ್ಲಿ ಸಮುದ್ರರಾಜನನ್ನು ಬಾಣದಿಂದ ದೂರ ಸರಿಸಿದ ಪ್ರಸಂಗ; ಲಕ್ಷ್ಮಿಯು ಸಮುದ್ರತನಯೆಯಾದುದರಿಂದ ಸಮುದ್ರವು ವಿಷ್ಣುವಿಗೆ ಮಾವ.

ಒಬ್ಬ ಮಾವನ ಕೂಡೆ ಕಡಿದಾಡಿದ—ಕೃಷ್ಣನ ಹೆಂಡತಿ ಜಾಂಬವತಿಯ ತಂದೆ ಋಕ್ಷ ರಾಜ ಜಾಂಬವಂತನೊಂದಿಗೆ ಕಾದಾಡಿದ ಪ್ರಸಂಗ (ಸ್ಯಮಂತಕ ಮಣಿಯನ್ನು ತಂದ ಸಂದರ್ಭ)

ಒಬ್ಬ ಭಾವನ ಹಿಡಿದು ಹೆಡೆಮುರಿಯ ಕಟ್ಟಿದ—ರುಕ್ಮಿಣಿಯ ಸೋದರ ರುಕ್ಮನನ್ನು (ರುಕ್ಮಿಣೀ ಕಲ್ಯಾಣದ ಸಂದರ್ಭದಲ್ಲಿ).

ಒಬ್ಬ ಮೈದುನಗೆ ಬಂಡಿಯ ಬೋವನಾದ—ಅರ್ಜುನನಿಗೆ ಸಾರಥಿಯಾದದ್ದು.

ಕುಂಭಿನಿಗೆ ಪತಿಯಾದ—ಕುಂಭಿನಿಯೆಂದರೆ ಭೂಮಿ ; ಭೂದೇವಿ ಲಕ್ಷ್ಮಿಯ ಅವತಾರವೇ.

ಕುಂಭಿನಿಗೆ ಸುತನಾದ—ಹಾಲು ಮೊಸರಿನ ಮಡಕೆಗಳನ್ನು ಹೊತ್ತು ಹಾಲು ಮೊಸರನ್ನು ಮಾರಾಟ ಮಾಡುತ್ತಿದ್ದ ಜನರ ಒಡೆಯ ನಂದಗೋಪನಿಗೆ ಕುಂಭಿಯೆಂದು ಹೆಸರು ; ಅವನ ಹೆಂಡತಿ ಯಶೋದೆ ಕುಂಭಿನಿ ; ಕೃಷ್ಣನ ಸಾಕುತಾಯಿ.

ಕುಂಭಿನೀ ಮಗನ ಸಂಹಾರ ಮಾಡಿದ—ಯದುವಂಶದ ದುಮಘೋಷನ ಹೆಂಡತಿ ಶ್ರುತಶ್ರವೆ (ವಸುದೇವನ ಸೋದರಿ)ಗೆ ಕುಂಭಿನಿಯೆಂಬ ಹೆಸರಿದ್ದಿತು ; ಅವಳ ಮಗ ಶಿಶುಪಾಲ. ಅವನನ್ನು ಯುಧಿಷ್ಠಿರನ ರಾಜಸೂಯಯಾಗದ ಸಂದರ್ಭ ದಲ್ಲಿ ಕೃಷ್ಣನು ಕೊಂದನು.

ಅಂಬುಧಿಗೆ ಪಿತನಾದ—ಇಲ್ಲಿ ಅಂಬುಧಿಯೆಂದರೆ ನದಿ ; ಗಂಗೆಯು ವಿಷ್ಣುವಿನ ಪಾದ ಗಳಿಂದ ಹುಟ್ಟಿದಳಾಗಿ (ತ್ರಿವಿಕ್ರಮಾವತಾರದಲ್ಲಿ) ಗಂಗೆ ವಿಷ್ಣುವಿನ ಮಗಳು.

ಅಂಬುಧಿಗೆ ಸುತನಾದ—ಮತ್ಸ್ಯಾವತಾರ ; ಮೀನು ಸಮುದ್ರದಲ್ಲೇ ಹುಟ್ಟುವುದ ರಿಂದ ನೀರಿನ ಮಗು.

ಅಂಬುಧೀಜಾತೆಗೆ ಸ್ವಾಮಿ—ಸಮುದ್ರಮಥನ ಸಂದರ್ಭದಲ್ಲಿ ಸಮುದ್ರದಿಂದ ಹೊರ ಹೊಮ್ಮಿದವಳು ಲಕ್ಷ್ಮಿ; ಅವಳು ನಾರಾಯಣನನ್ನು ವರಿಸಿದಳು.

ಬೊಮ್ಮನ ಸಂಹರಿಸಿ...—ಸಂದರ್ಭ ತಿಳಿಯುವುದಿಲ್ಲ.

ರಮ್ಮೆ—ರಮೆ, ಲಕ್ಷ್ಮಿ.

ಬೊಮ್ಮಮೂರುತಿ —ಪರಬ್ರಹ್ಮ ; ಏಕಮೇವಾದ್ವಿತೀಯ.

ಸಾವೇರಿ ತ್ರಿವಿಡೆ

ಹರಿಯ ದರುಶನಕಾಗಿ ನಾರದರು ಬರೆಲು
ಸಿರಿದೇವಿ ಹೊರಗಿನ ಬಾಗಿಲಲ್ಲಿರಲು ಪ

ಕರಕಮಲ ಮುಗಿದು ದೊರೆ ಸಮಯವೇನೆನಲು
ನಾರಿಮಣಿ ಲಕುಮಿಯು ಅರುಹುವಳಾಗ
ವರದೇವತಾರ್ಚನೆಗೆ ಅರಮನೆಯೊಳಗೆ
ಭರದಿಂದ ಕುಳಿತಿಹನು ಪರಮಾತ್ಮನು ೧

ಸರಸಿಜೋದ್ಭವ ಮುಖ್ಯ ಸುರರಿಗೆ ದೊರೆಯಾತ
ಪರಮ ಆಶ್ಚರ್ಯವನರಿಯಬೇಕೆಂದ
ಕಳವಳಿಸುತ ಮನೆಯೊಳಗೆ ದೂರುತೆ ಕಂಡ
ಥಳಿಥಳಿಸುವ ರನ್ನ ಸಂಪುಟದಿ ೨

ಕಲುಷದೂರರಾದ ಪ್ರಹ್ಲಾದ ನಾರದ
ವರ ಅಂಬರೀಷ ಮುಖ್ಯರ ಪೂಜೆಗೈವುದನು
ಹರಿದಾಸರ ಚರಣ ರಜಗಳ ತುಂಬಿಟ್ಟು
ತೆರೆದು ತೋರಿದ ಮುನಿಗೆ ಪರಮಾತ್ಮನು ೩

ಪರಮಾನಂದಭರಿತನಾಗಿ ನಾರದಮುನಿ
ಸಿರಿಪತಿ ಪುರಂದರವಿಠಲನನು ಸ್ತುತಿಸಿದ ೪

[ಪರಮಾತ್ಮನು ಭಕ್ತರ ಅಧೀನನೆಂದೂ, ತನ್ನ ತೊಂಡರಿಗೆ ತಾನೇ ತೊಂಡನೆಂದೂ ಭಾಗವತರಲ್ಲಿ ಪ್ರಸಿದ್ಧಿ. 'ಹೂವ ತರುವವರ ಮನೆಗೆ ಹುಲ್ಲ ತರುವ' ಎಂಬ ಭಾವ ಅವರ ಪರಮವಿಶ್ವಾಸಕ್ಕೆ ಕಾರಣ. ಇದನ್ನು ಒಂದು ಪ್ರಸಂಗದಂತೆ ಕಲ್ಪಿಸಿಕೊಂಡು, ವೈಕುಂಠದಲ್ಲಿ ಪರಮಾತ್ಮನು ಭಕ್ತರ ಪೂಜೆಯಲ್ಲಿ ತೊಡಗಿರುವಂತೆ ಈ ಪದದಲ್ಲಿ ಕಾಣಿಸಿದ್ದಾರೆ.]

ಅರಮನೆಯೊಳಗೆ—ವೈಕುಂಠದಲ್ಲಿ.
ಭರದಿಂದ—ಸಂಭ್ರಮದಿಂದ.

ಪ್ರಹ್ಲಾದ—ಹಿರಣ್ಯಕಶಿಪುವೆಂಬ ದಾನವ ಮತ್ತು ಅವನ ಹೆಂಡತಿ ಕಯಾಧು ಇವರ ಮಗ, ವಿಷ್ಣುಭಕ್ತ, ನರಸಿಂಹಾವತಾರಕ್ಕೆ ಕಾರಣನಾದ. ಇವನ ಕಥೆ ಭಾಗವತ, ವಿಷ್ಣುಪುರಾಣ ಮತ್ತು ಮತ್ಸ್ಯಪುರಾಣಗಳಲ್ಲಿ ಬರುತ್ತದೆ.

ನಾರದ—ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನ ಮಾನಸಪುತ್ರ; ದೇವರ್ಷಿಯೆಂದು ಪ್ರಸಿದ್ಧನಾದವನು. ವಿಷ್ಣುಭಕ್ತ; ಸಂಕೀರ್ತನ ಪದ್ಧತಿಯ ಪ್ರವರ್ತಕ. ನಾರಾಯಣನು ಇವನಿಗೆ ಶ್ವೇತದ್ವೀಪದಲ್ಲಿ ಭಾಗವತ ಧರ್ಮವನ್ನು ಬೋಧಿಸಿದನು.

ಅಂಬರೀಷ—ಸೂರ್ಯ ವಂಶದಲ್ಲಿ ಬಂದ ರಾಜ, ವೈವಸ್ವತಮನುವಿನ ಮೊಮ್ಮಗ, ನಾಭಾಗನ ಮಗ, ವಿಷ್ಣುಭಕ್ತ. ಏಕಾದಶೀ ವ್ರತಪಾಲನೆಯಲ್ಲಿ ನಿಷ್ಠ; ಇವನ ವ್ರತವನ್ನು ಮುರಿಯಲೆಂದು ಬಂದ ದುರ್ವಾಸನು ವಿಷ್ಣುಚಕ್ರದಿಂದ ಬವಣೆಪಟ್ಟ ಕಥೆ ಭಾಗವತದಲ್ಲಿದೆ.



ಪೂರ್ವಿಕಲ್ಯಾಣಿ ಅಟ್ಟ

ಪರ ಚಿತ್ತ ಸತ್ಯ ಹರಿ ಚಿತ್ತ ಪ

ನರ ಚಿತ್ತಕ್ಕೆ ಬಂದದ್ದು ಲವಲೇಶ ನಡೆಯದು ಅ

ಮಡದಿ ಮಕ್ಕಳ ಭಾಗ್ಯ ಬಯಸೋದು ನರಚಿತ್ತ
ಮದುವ್ಯಾಗದಿರುವುದು ಹರಿಚಿತ್ತವು
ಕುದುರೆ ಅಂದಣ ಆನೆ ಬಯಸೋದು ನರಚಿತ್ತ
ಪದಚಾರಿಯಾಗೋದು ಹರಿಚಿತ್ತವಯ್ಯ ೧

ವಿಧವಿಧ ಯಾತ್ರೆಯ ಬಯಸೋದು ನರಚಿತ್ತ
ಒದಗಿಬರುವ ರೋಗ ಹರಿಚಿತ್ತವು
ಸದಾ ಅನ್ನದಾನವ ಬಯಸೋದು ನರಚಿತ್ತ
ಹಸಿದು ಅಳುವುದು ಹರಿಚಿತ್ತವಯ್ಯ ೨

ಧರಣಿಯನಾಳಬೇಕೆಂಬುದು ನರಚಿತ್ತ
ಪರರ ಸೇವಿಸುವುದು ಹರಿ ಚಿತ್ತವು
ಪುರಂದರವಿಠಲನ ಬಯಸೋದು ನರಚಿತ್ತ
ದುರಿತವ ಕಳೆವುದೆ ಹರಿಚಿತ್ತವಯ್ಯ ೩

ಅಂದಣ—ಪಲ್ಲಕ್ಕಿ.

ಪದಚಾರಿಯಾಗೋದು—ಕಾಲಲ್ಲೇ ನಡೆಯಬೇಕಾಗಿ ಬರುವುದು.

ಒದಗಿಬರುವ ರೋಗ—ಯಾತ್ರೆಮಾಡಲು ಅಡ್ಡಿಯಾಗಿ.

ಪುರಂದರವಿಠಲನ ಬಯಸೋದು...—ಭಕ್ತಿಮಾಡುವುದು ಜೀವರ ಹೊಣೆ; ಪಾಪಗಳನ್ನು ಕಳೆದು, ಮುಕ್ತಿಗೆ ಬೇಕಾಗುವ ಜ್ಞಾನವನ್ನು ಕೊಡುವುದು ಪರಮಾತ್ಮನ ಹೊಣೆ.

ಪಂತುವರಾಳಿ	ಝಂಪೆ

ಒಳಿತೀ ಶಕುನಫಲವಿಂದೆಮಗೆ	ಪ

ಜಲಜಾಕ್ಷನೊಲುಮೆಯಾಗುವುದು ಕೇಳ್ಕೆಳದಿ	ಅ

ವಾಮ ಗರುಡ ನೋಡು ವಾಯಸ ಬಲ ನೋಡು
ಕೋಮಲಾಂಗೇರ ಉದಕುಂಭ ನೋಡು
ಸಾಮಾನ್ಯವಲ್ಲ ಗೌಳಿ ಬಲಕೆ ನುಡಿಯುತಿದೆ
ಪ್ರೇಮದಿ ಮಧುರ ವಚನ ಕೇಳಿ ಕೆಳದಿ	೧

ಭೇರಿ ಶಂಖವು ಘಂಟಾವಾದ್ಯವಾಗುತಲಿದೆ
ಕ್ಷೀರ ಘೃತ ಫಲಪುಷ್ಪ ಎದುರಾದುವು
ಭಾರದ್ವಾಜ ಪಕ್ಷಿ ಎಡವಾಗುವುದು ಕಂಡ್ಯ
ತೋರುತಿವೆ ಶುಭ ಶಕುನಗಳಿದೆಕೊ	೨

ನೋಡು ದ್ವಯವಿಪ್ರರು ಎದುರಾಗುತ್ತೈದಾರೆ
ಕೊಡುವುದು ಮನದ ವಾಂಛಲ್ಯವೆಲ್ಲ
ಬೇಡಿದ ವರಗಳ ಕೊಡುವ ಪುರಂದರವಿಠಲನ
ಕೂಡಿ ಇಹಪರ ಸುಖದಿಂದಿರುವೆ ರಮಣಿ	೩

[ಭಕ್ತ ಭಾಗವತರಿಗೆ ಭಗವಂತನ ಒಲುಮೆಯೇ ಶುಭಶಕುನ. ಅದೊಂದು ಒದಗಿತೆಂದರೆ ಉಳಿದೆಲ್ಲ ಸಾಂಪ್ರದಾಯಿಕ ಶಕುನಗಳೂ ಶುಭಕರವಾದುವೇ. ಈ ಪದದಲ್ಲಿ ಶುಭ ಶಕುನಗಳ ಪಟ್ಟಿಯಿದೆ. ಎಡಗಡೆ ಗರುಡ ಕಾಣುವುದು, ಬಲಗಡೆ ಕಾಗೆ ಕಾಣುವುದು, ಹೆಂಗಳೆಯರು ನೀರಿನ ಕೊಡಗಳನ್ನು ಹೊತ್ತು ಬರುವುದು, ಬಲಭಾಗದಲ್ಲಿ ಹಲ್ಲಿ ಲೊಚಗುಟ್ಟುವುದು, ದಾರಿಯಲ್ಲಿ ಭೇರಿ, ಶಂಖ, ಗಂಟೆಗಳ ದನಿ ಕೇಳುವುದು, ಹಾಲು–ಮೊಸರು–ತುಪ್ಪ ಅಥವಾ ಹೂವು–ಹಣ್ಣುಗಳನ್ನು ಹೊತ್ತವರು ಎದುರಿಗೆ ಬರುವುದು, ಭರದ್ವಾಜವೆಂಬ ಹಕ್ಕಿ ಎಡಗಡೆಗೆ ಹಾರುವುದು, ಇಬ್ಬರು ಬ್ರಾಹ್ಮಣರು ಎದುರಿಗೆ ಬರುವುದು ಇವೆಲ್ಲ ಶುಭಶಕುನಗಳೆಂದೂ, ಈ ಶಕುನಗಳು ತೋರಿದರೆ ಮನಸ್ಸಿನ ಬಯಕೆ (ವಾಂಛಲ್ಯವೆಲ್ಲ) ಕೈಗೂಡುವುದೆಂದೂ ನಂಬಿಕೆ. ಆದರೆ ಬೇಡಿದ ವರಗಳನ್ನು ಕೊಡುವವ ಪರಮಾತ್ಮನೊಬ್ಬನೆ. ಅವನು ಒಲಿದನೆಂದರೆ ಎಲ್ಲ ಶಕುನಗಳೂ ಶುಭವೇ.]

ಮೋಹನ ಆದಿ

ಇಂತು ವೇದಾಂತಗಳಲ್ಲಿ ಸುರರು ನಿನ್ನ ಎಣಿಸುವರು
ಅಹುದಹುದಯ್ಯ ಪ

ಅಂತರ ತಿಳಿಯಲು ಬ್ರಹ್ಮಾದ್ಯರಿಗೆ ಅಳವಲ್ಲವು
ಅಹುದಹುದಯ್ಯ ಅ

ರಂಡೆಯ ಮಕ್ಕಳು ಕುಂಡಗೋಳಕರು ರಾಯರು
ನಿನ್ನಿಂದಯ್ಯ
ಪಂಡಿತರಾದ ದ್ವಿಜರಿಗೆ ಭಿಕ್ಷಾಪಾತ್ರೆಯು
ನಿನ್ನಿಂದಯ್ಯ
ಮುಂಡೆಯ ನೇವರಿಸಿ ಮೊಲೆಯ ಕೊಟ್ಟವಳಿಗೆ ಮರಣವು
ನಿನ್ನಿಂದಯ್ಯ
ಭಂಡಾಟದಿ ಮೈಗೊಟ್ಟ ಗೋಪಿಯರು ಪಾವನ
ನಿನ್ನಿಂದಯ್ಯ ೧

ತೊತ್ತಿನ ಮಗನಿಗೆ ಒಲಿದು ನಿನ್ನಯ ಗುಣ ತೋರಿಸಿದೆ
ಅಹುದಹುದಯ್ಯ
ಉತ್ತಮರನು ನೀನಡವಿ ಸೇರಿಸಿದಿ ಉತ್ತಮ
ನೀನಹುದಯ್ಯ
ಅತ್ತೆಯನಾಳಿದಿ ಮಾವನ ಮಡುಹಿದಿದೇತರ
ಮರಿಯಾದೆಯಯ್ಯ
ಮತ್ತನಾಗಿ ನಿನ್ನ ಬೈದ ಪಾತಕಿಯ ಮೈಯೊಳಗಿರಿಸಿದೆ
ನೀನಯ್ಯ ೨

ತಂದೆಯ ಕೊಂದು ಕಂದನ ಸಲಹಿದ ಚೆಂದವು
ನಿನ್ನಿಂದಯ್ಯ
ಕಂದನ ಕೊಂದು ತಂದೆಯ ಸಲಹಿದೆ ಯಾತರ
ನ್ಯಾಯವಿದಯ್ಯ
ವಂದಿಸಿ ದಾನವ ಕೊಟ್ಟ ಬಲೀಂದ್ರನ ಬಂಧಿಸಿದೆ
ಅಹುದಹುದಯ್ಯ
ತಂದೆ ಶ್ರೀ ಪುರಂದರವಿಠಲರಾಯ ನೀ ಮಾಡಿದ್ದೆ
ಮರಿಯಾದೆಯಯ್ಯ ೩

ವೇದಾಂತಗಳಲ್ಲಿ—ವೇದದ ಕಡೆಯ ಭಾಗವಾದ ಉಪನಿಷತ್ತೇ ಮೊದಲಾದ ಶಾಸ್ತ್ರಗಳಲ್ಲಿ.

ಅಂತರ—ಗುಟ್ಟು ; ಸಂಪೂರ್ಣಜ್ಞಾನ ; ಇಲ್ಲಿ ಭಗವದವತಾರಗಳ ತಾತ್ಪರ್ಯ.

ಮಂಡೆಯು ನೇವರಿಸಿ ..—ಪೂತನೀ ಸಂಹಾರ,

ಭಂಡಾಟದಿ...—ಗೋಪಿಕಾಸ್ತ್ರೀಯರ ಸುರತ.

ತೊತ್ತಿನ ಮಗನಿಗೆ .—ವಿದುರನಿಗೆ.

ಉತ್ತಮರನು.. —ಪಾಂಡವರನ್ನು.

ಅತ್ತೆಯಣಾಳಿದಿ...—ಸಂದರ್ಭ ತಿಳಿಯುವುದಿಲ್ಲ.

ಮಾವನ ಮಡುಹಿದಿ—ಕಂಸನನ್ನು ಕೊಂದೆ.

ಮತ್ತನಾಗಿ ನಿನ್ನ ಬೈದ . —ಯುಧಿಷ್ಠಿರನ ರಾಜಸೂಯಯಾಗದ ಸಂದರ್ಭದಲ್ಲಿ ದಂತವಕ್ರನು ಕೃಷ್ಣನನ್ನು ಬಯ್ದಾಡಿ, ಎದುರಿಸಿ, ಹತನಾಗಿ, ಕೃಷ್ಣನಲ್ಲಿ ಐಕ್ಯವಾದನೆಂದು ಭಾಗವತದ ಕಥೆ.

ತಂದೆಯ ಕೊಂದು. —ಹಿರಣ್ಯಕಶಿಪುವನ್ನು ಕೊಂದು ಪ್ರಹ್ಲಾದನನ್ನು ಕಾಪಾಡಿದೆ.

ವಂದಿಸಿ ದಾನವ . —ವಾಮನಾವತಾರದಲ್ಲಿ.

[ಇದೊಂದು ನಿಂದಾಸ್ತುತಿ.]



ಪೀಲು — ಮಿಶ್ರಚಾಪು

ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ
ಕಪಟನಾಟಕ ಸೂತ್ರಧಾರಿ ನೀನೆ ಪ

ನೀನೆ ಆಡಿಸದಿರಲು ಜಡ ಒನಕೆಯು ಬೊಂಬೆ
ಏನು ಮಾಡಲು ಬಲ್ಲುದು ತಾನೆ ಬೇರೆ
ನೀನಿಟ್ಟ ಸೂತ್ರದಿಂ ಚಲಿಪವು ಕೈ ಕಾಲುಗಳು
ನೀನೆ ಮುಗ್ಗಿಸಲು ಮುಗ್ಗುವ ದೇಹದವನು ೧

ಒಂದೆಂಟು ಬಾಗಿಲ ಪಟ್ಟಣಕೆ ತನ
ಗೆಂದು ಇಪ್ಪತ್ತಾರು ಮನೆಯಾಳುಗಳ
ತಂದು ಕಾವಲ ನಿಲಿಸಿ ಎನ್ನ ನೀ ಒಳಗಿಟ್ಟು
ಮುಂದೆ ಭವದಲಿ ಭವಣಿಪುದನ್ಯಾಯ ೨

ಯಂತ್ರವಾಹಕ ನೀನೆ ಒಳಗಿದ್ದು ಎನ್ನ ಸ್ವ
ತಂತ್ರನೆಂದೆನಿಸಿ ಕೊಲಿಸುವರೆ ಹೇಳೋ
ಕಂತುಪಿತ ಲಕ್ಷ್ಮೀಶ ಎಂತಾದಡಂತಹುದ–
ನಂತಮೂರುತಿ ನಮ್ಮ ಪುರಂದರವಿಠಲ ೩

ತಾನೆ ಬೇರೆ—ಸ್ವಾತಂತ್ರ್ಯದಿಂದ.

ನೀನಿಟ್ಟ ಸೂತ್ರದಿಂ—ಪ್ರೇರಕ, ನಿಯಾಮಕ, ಸಾಕ್ಷಿಕ ಎಂಬ ಬಿಂಬರೂಪೀ ಪರಮಾತ್ಮನ ದ್ರವ್ಯ, ಗುಣ, ಕ್ರಿಯಾ ಪ್ರಕಾರಗಳು. ವಿವರಣೆಗೆ ಪ್ರಸ್ತಾವನೆ ನೋಡಿ.

ಒಂದೆಂಟು ಬಾಗಿಲ ಪಟ್ಟಣಕೆ—'ನವದ್ವಾರೇ ಪುರೇ ದೇಹೀ', ಒಂಬತ್ತು ಬಾಗಿಲುಗಳುಳ್ಳ ದೇಹ; ವಿವರಣೆ ಆಗಲೆ ಬಂದಿದೆ.

ಇಪ್ಪತ್ತಾರು ಮನೆಯಾಳುಗಳು—ತತ್ತ್ವಾಭಿಮಾನಿ ದೇವತೆಗಳು; ತಾರತಮ್ಯ ಸ್ತೋತ್ರದ ಪ್ರಸ್ತಾವನೆ ನೋಡಿ.

ಎನ್ನನೀ ಒಳಗಿಟ್ಟು—ಹೃದಯ ಕಮಲದಲ್ಲಿ, ಬಿಂಬನೊಂದಿಗೆ.

ಭವಣಿಪುದು—ಬವಣೆಗೊಳಿಸುವುದು.

ಯಂತ್ರವಾಹಕ—ಬದುಕೆಂಬ ಯಂತ್ರವನ್ನು ನಡೆಸುವವನು ಬಿಂಬರೂಪಿ.

ಎನ್ನ ಸ್ವತಂತ್ರನೆಂದೆನಿಸಿ—ದತ್ತಸ್ವಾತಂತ್ರ್ಯವೆಂಬ ಕಲ್ಪನೆ. ಜೀವನು ತನ್ನ ದೇಹೇಂದ್ರಿಯ ಮನಸ್ಸುಗಳಿಂದ ಕೆಲಸಮಾಡಲು (ಕರ್ತೃತ್ವ), ಅದರ ಫಲಗಳನ್ನು ಅನುಭವಿಸಲು (ಭೋಕ್ತೃತ್ವ) ಪರಮಾತ್ಮನೇ ತನ್ನ ಸಂಕಲ್ಪಾನುಸಾರ, ಜೀವನ ಸ್ವರೂಪ–ಯೋಗ್ಯತಾನುಸಾರ ಸ್ವಾತಂತ್ರ್ಯವನ್ನು ಕೊಡುತ್ತಾನೆ.

ಕಾಂಬೋದಿ                                                    ಝಂಪೆ

ಸುಮ್ಮನಿರು ಸುಮ್ಮನಿರು ಬೇಡಿಕೊಂಬೆ ಪ
ಈ ಮಹಿಯೊಳತಿಶಯದ ಗುಮ್ಮ ಬಂದಿದೆಕೋ ಅ

ಐದು ಮುಖ ಮತ್ತೆ ಮೂರೈದು ಕಣ್ಣುಗಳಿಂದ
ಐದು ಮುಖದೊಳಗ್ನಿ ಕಿಡಿ ಉದುರಿಸಿ
ಐದೆರಡು ತೋಳುಗಳ ನೀಡಿ ಒಲಿದಾಡಿಸುತ
ಐದು ಬಾಣನ ಗೆದ್ದ ಗುಮ್ಮ ಬಂದಿದೆಕೋ ೧

ಬಾಲಚಂದ್ರನ ಪೊತ್ತುಕೊಂಡು ತ್ರಿಶೂಲದ
ಮೇಲೆ ಹೆಣಗಳ ಚುಚ್ಚಿ ಒಲಿದಾಡುತ
ಕಾಲಭೈರವನ ಕಾವಲನಿರಿಸಿ ಮರುಳುಗಳ
ಓಲಗದಿ ತಲೆಬಾಗಿಲಲಿ ಬಂದನಿದೆಕೋ ೨

ಮುದಿ ಎತ್ತನೇರಿ ಮೈಯೊಳು ಬೂದಿಯನು ಪೂಸಿ
ಮದನಾರಿ ಎಂಬಂಥ ಬಲು ಭೂತವು
ಹೃದಯದಲಿ ನಿನ್ನ ನೋಡುವೆನೆಂಬ ಧ್ಯಾನದಲಿ
ಒದಗಿ ಬಂದೈದಾನೆ ಪುರಂದರವಿಠಲ ೩

[ಪರಮಾತ್ಮನಲ್ಲಿ ಭಕ್ತಿಮಾಡುವ ಮನಸ್ಸನ್ನು ಕೊಡುವವನು ಅಹಂಕಾರತತ್ತ್ವದ ಅಭಿಮಾನಿಯಾದ ರುದ್ರದೇವರು. 'ಮನಸು ಕಾರಣವಲ್ಲ ಪಾಪಪುಣ್ಯಕ್ಕೆಲ್ಲ, ಅನಲಾಕ್ಷ ನಿನ್ನ ಪ್ರೇರಣೆಯಿಲ್ಲದೆ' ಎಂದು ಹರಿದಾಸರ ನಿಲುವು ಆದ್ದರಿಂದ ರುದ್ರದೇವರು ಹೃದಯದಲ್ಲಿ ನಿಂತು ಪ್ರೇರಣೆ ಮಾಡುವ ಭಾವವನ್ನು ಈ ಪದ ಸೂಚಿಸುತ್ತದೆ. 'ಅತಿಶಯದ ಗುಮ್ಮ'ನೆಂದರೆ ರುದ್ರ, 'ಮಹರುದ್ರದೇವರು'.]

ಗುಮ್ಮ—ಗುರ್ವು, ಬಿಗುರ್ವು ; ಬೆದರಿಸುವ ದೆವ್ವ.

ಐದು ಮುಖ—ಶಿವನ ಐದು ಮುಖಗಳು : ಅಘೋರ, ತತ್ಪುರುಷ, ವಾಮದೇವ, ಈಶಾನ, ಸದ್ಯೋಜಾತಗಳೆಂಬ ಹೆಸರಿನವು.

ಐದುಮುಖದೊಳಗ್ನಿ—ಪಂಚಾಗ್ನಿಗಳು.

ಐದೆರಡು ತೋಳುಗಳು—ಹತ್ತು ಕೈಗಳು.

ಐದು ಬಾಣನ—ಮನ್ಮಥನಿಗೆ ಪಂಚಬಾಣನೆಂದು ಹೆಸರು (ಅರವಿಂದ, ಅಶೋಕ, ಚೂತ, ಮಲ್ಲಿಕಾ, ನೀಲೋತ್ಪಲ ಎಂಬ ಐದು ಹೂಗಳನ್ನೇ ಬಾಣಗಳಾಗಿ ಉಳ್ಳವನು).

ಮರುಳುಗಳ—ಭೂತಗಳ.

ತಲೆಬಾಗಿಲಲಿ—ಬುದ್ಧಿಯಲ್ಲಿ (ಪ್ರೇರಣೆ ಮಾಡುವ ಸಲುವಾಗಿ)

ಮದನಾರಿ—ಮನ್ಮಥನನ್ನು ಕೊಂದವನು (ಕುಮಾರ ಸಂಭವದ ಸಂದರ್ಭ).



ಕಾಂಬೋದಿ ರಘಂಪೆ

ನಾ ಮುಂದೆ ರಂಗ ನೀ ಎನ್ನ ಮುಂದೆ
ಎಂದೆಂದು ನಿನ್ನ ನಾಮುವ ಎಂದೆಂಬ ಪ

ಅನಾಥನು ನಾನು ಎನಗೆ ಬಂಧು ನೀನು
ಹೀನನು ನಾನು ದಯವಂತ ನೀನು
ಧ್ಯಾನಮಂತ್ರನು ನೀನು ಧ್ಯಾನಿಸುವೆನು ನಾನು
ಜ್ಞಾನಗಮ್ಯನು ನೀನು ಅಜ್ಞಾನಿ ನಾನು ೧

ಸುರತರುವು ನೀನು ಫಲ ಬಯಸುವನು ನಾನು
ಸುರಧೇನು ನೀನು ಕರೆದುಂಬೆ ನಾನು
ವರಚಿಂತಾಮಣಿ ನೀನು ಪರಿಚಿಂತಿಸುವೆನು ನಾನು
ಶರಧಿಕ್ಷೀರನು ನೀನು ತರಳನು ನಾನು ೨

ಒಂದರೊಳೊಂದೊಂದು ಅವಗುಣವ ಹೊಂದಿದೆ
ಕಂದನನೆತ್ತಿಕೋ ಸಲಹೋ ಬೇಗ
ತಂದೆ ಶ್ರೀ ಪುರಂದರವಿಠಲರಾಯ ನೀ
ಬಂದೆನ್ನ ಮನದಲಿ ನಲಿನಲಿದಾಡು ೩

[ಜೀವಾತ್ಮ-ಪರಮಾತ್ಮರು ಪರಸ್ಪರ ಸಮ್ಮುಖರಾಗಿರುವುದು ನಿತ್ಯಸಂಬಂಧ. 'ದ್ವಾ ಸುಪರ್ಣಾ' ಎಂದು ಮೊದಲಾಗುವ ಶ್ರುತಿ ಹೇಳುವುದು ಇದನ್ನೇ. ಆದರೆ ಪರಮಾತ್ಮನ ಸಂಕಲ್ಪದಿಂದಲೇ ಅನ್ಯಥಾಜ್ಞಾನವೊದಗಿದಾಗ ಅದರ ಫಲವಾಗಿ ಹರಿವಿಸ್ಮರಣೆ ತೋರಿಕೊಳ್ಳುವುದು. ಇದರಿಂದ, ತನ್ನೊಳಗೇ ಅಂತರ್ಯಾಮಿಯಾಗಿ, ಬಿಂಬನಾಗಿ, ಇರುವ ಪರಮಾತ್ಮನನ್ನು ಜೀವನು ಕಾಣದೆ ಪರಿತಪಿಸುತ್ತಾನೆ. ಗುರೂಪದೇಶದಿಂದ, ಸಾಧುಸಂಗದಿಂದ, ಮಾಹಾತ್ಮ್ಯ ಜ್ಞಾನವೊದಗಿದಾಗ ಜೀವನಿಗೆ ತಾನು ಪ್ರತಿಬಿಂಬ, ಪರಮಾತ್ಮನು ತನಗೆ ಬಿಂಬ ಎಂಬ ಅರಿವುಂಟಾಗುತ್ತದೆ. ಆ ಭಾವದೊಂದಿಗೆ ಸಾಧಕನಿಗೆ ಪರಮಾತ್ಮನ ಸರ್ವಜ್ಞತ್ವ, ಸರ್ವಶಕ್ತಿತ್ವ, ಅಂಶಿತ್ವ, ಸರ್ವಸ್ವಾತಂತ್ರ್ಯ, ವೇದವೇದ್ಯತ್ವ, ಕಾರುಣ್ಯ ಮೊದಲಾದ ಕಲ್ಯಾಣಗುಣಗಳು ಮನದಟ್ಟಾಗುತ್ತವೆ, ಸಾಧಕನ ಅಲ್ಪಜ್ಞತ್ವ, ಅಲ್ಪಶಕ್ತಿತ್ವ, ಅಂಶತ್ವ, ಅಸ್ವಾತಂತ್ರ್ಯ,

ದೈನ್ಯ ಮೊದಲಾದ ಅವಗುಣಗಳ ಅನುಭವವೂ ಆಗುತ್ತದೆ ಇದನ್ನು ಈ ಪದ ಎತ್ತಿ ತೋರಿಸುತ್ತದೆ.]

ನಿನ್ನ ನಾಮವ ಎಂದೆಂಬ (ನಾ)—ನಿನ್ನ ನಾಮಸ್ಮರಣೆಯನ್ನೇ ಮಾಡುತಿರುವ ನಾನು.

ಬಂಧು—ಅನಿಮಿತ್ತ ಬಂಧು ; ಆಶ್ರಯ, ಪ್ರೇರಕ, ನಿಯಾಮಕ.

ಹೀನ—ಪರಾಧೀನ.

ಶರಧಿಕ್ಷೀರ—ಕ್ಷೀರಶರಧಿ ; ಪಾಲಗಡಲು ; ಎಂದರೆ ಅಷ್ಟು ದೊಡ್ಡವನು ; ನಾನಾ ದರೋ ಸಣ್ಣವನು (ತರಳ).



ಸುರಟಿ ಆದಿ

ಮರೆಯದಿರು ಹರಿಯ ಮರೆವರೆ
ಮೂರುಲೋಕದ ಧೊರೆಯ ಪ

ಮದಗಜ ಹರಿಯೆಂದು
ಒದರಲು ಒದಗಿದಾ ಕ್ಷಣದಿ ಬಂದು
ಮುದದಿ ನಕ್ರನ ಕೊಂದು ಸಲಹಿದ ಸದ್ಭಕ್ತರ ಬಂಧು
ಮೃದುಲ ಪ್ರಹ್ಲಾದನ ಬೆದರಿಸಿದಸುರನುದರವ
ಬಗೆದಂಥ ಅದ್ಭುತಮಹಿಮನ ೧

ನಾರಿ ತನ್ನ ಕರೆದ ಮಾತ್ರದಿ ಸೀರೆಯ ಮಳೆಗರೆದ
ಘೋರಶಾಪದಿ ಬದ್ಧ ಸ್ತ್ರೀಯು
ದ್ಧಾರ ದಯದಿ ಮಾಡಿದ
ಜಾರ ಅಜಾಮಿಳನು ನಾರಾಯಣನೆನೆ
ಪಾರುಗಾಣಿಸಿದಪಾರಮಹಿಮನ ೨

ಒಂದು ಬಾರಿ ಶ್ರೀಶಾಯೆಂದರೆ ಬಂದ ದುರಿತ ನಾಶ
ಬೆಂದವು ಭವಪಾಶ
ಅವರಿಗೆ ಎಂದಿಗಿಲ್ಲವೊ ಕ್ಲೇಶ
ಇಂದಿರೆ ರಮಣನ ಶ್ರೀ ಪುರಂದರವಿಠಲನ
ಎಂದಿಗೆ ನೆನೆವರೊ ಅಂದಿಗೆ ಧನ್ಯರು ೩

ಮದಗಜ—ಗಜೇಂದ್ರಮೋಕ್ಷದ ಕಥೆ.
ನಕ್ರ—ಮೊಸಳೆ.
ನಾರಿ .. —ದ್ರೌಪದೀ ಮಾನಸಂರಕ್ಷಣದ ಪ್ರಸಂಗ.
ಘೋರಶಾಪದಿ... —ಅಹಲ್ಯೋದ್ಧಾರದ ಪ್ರಸಂಗ.
ಅಪಾರಮಹಿಮ—ಮಹಿಮೆಗೆ ಕೊನೆಮೊದಲಿಲ್ಲದವ.
ಬೆಂದವು ಭವಪಾಶ—ಸಂಸಾರದ ಬಂಧವು ಸುಟ್ಟುಹೋಯಿತು.

ಪೂರ್ವಿ ಆದಿ

ನೆಚ್ಚನಯ್ಯ ಹರಿ ಮೆಚ್ಚನಯ್ಯ ಪ

ಉತ್ತಮನೆಂದೆನಿಸಿಕೊಂಡು ಅರುಣೋದಯದ ಕಾಲದಲ್ಲಿ
ನಿತ್ಯ ಕಾಗೆಯು ಹಾಗೆ ನೀರೊಳಗೆ ಮುಳುಗುವವಗೆ ೧

ತೊಗಲಿನ ದೇಹಕೆ ಗೋಪೀಗಂಧ ತೇದುಕೊಂಡು
ರೋಗ ಬಂದೆಮ್ಮೆಯಹಾಗೆ ಬರೆದುಕೊಂಬ ಮನುಜಗೆ ೨

ಮರುಳು ತನವು ಮಾತಿನಲ್ಲಿ ಹೃದಯದಲ್ಲಿ ವಿಷದ ಗುಟಿಕೆ
ಮರದ ಮೇಲಣ ಓತಿಯಂತೆ ನಮಿಸುವಂಥ ದುರುಳನಿಗೆ ೩

ಹಣವಿಗೆ ಹಾರೈಸಿಕೊಂಡು ತಿರುಪತಿಗೆ ಹೋಹರ ಕಂಡು
ಹಣ ಕಾಸು ಕೊಂಡು ಬಂದು ಸ್ವಾಮಿಯ ನೋಡುವವಗೆ ೪

ಬಾಯಿ ಬೀಗದಲ್ಲಿ ಹೊಯ್ದು ಹಾಲು ತುಪ್ಪಗಳನು ಸವಿದು
ಮೈಯ ಹುಳಿತ ನಾಯಿಯಂತೆ ಬೀದಿ ಬೀದಿ ತಿರುಗುವವಗೆ ೫

ತಾನು ತನ್ನ ಮನೆಯ ಒಳಗೆ ದಾನ ಧರ್ಮಗಳನು ಕೊಡದೆ
ನೀನು ದಾನ ಮಾಡು ಎಂದು ಅನ್ಯರಿಗೆ ಹೇಳುವವಗೆ ೬

ಏಕೋ ಭಾವ ಏಕೋಭಕ್ತಿ ಏಕೋಯುಕ್ತಿ ಏಕೋಮುಕ್ತಿ
ಬೇಕಾಗಿ ಪುರಂದರವಿಠಲನ್ನ ಭಜಿಸದವಗೆ ೭

ಮರದ ಮೇಲಣ ಓತಿಯಂತೆ—ಹುಳುಹುಪ್ಪಟೆಗಳಿಗಾಗಿ ನೋಡುತ್ತ ಮರದ ಮೇಲಿರುವ ಓತಿಕ್ಯಾತವೆಂಬ ಪ್ರಾಣಿ ಮತ್ತೆ ಮತ್ತೆ ಕತ್ತನ್ನು ಕೆಳಗೆ ಮೇಲೆ ಮಾಡುತ್ತಿರುವುದು.

ಹಣವಿಗೆ—ಹಣಕ್ಕೆ.

ಏಕೋಭಾವ, ಏಕೋಭಕ್ತಿ, ಏಕೊಯುಕ್ತಿ, ಏಕೋಮುಕ್ತಿ — ಏಕಾಗ್ರಭಾವ, ಏಕಾಂತಭಕ್ತಿ, ಅನನ್ಯಚಿಂತನೆ, ಸಾಯುಜ್ಯ.

# ಪರಿಶಿಷ್ಟ

## ಪುರಾಣ ಸಂದರ್ಭ ಸೂಚಿ

ಹರಿದಾಸರು ಭಗವನ್ಮಾಹಾತ್ಮ್ಯಜ್ಞಾನಕ್ಕೆ ಪುರಾಣಗಳನ್ನೇ ಹೆಚ್ಚಾಗಿ ಅವಲಂಬಿಸುತ್ತಾರೆ. ಪುರಾಣಗಳು ವೇದದ ತಾತ್ಪರ್ಯವನ್ನು ಜನಸಾಮಾನ್ಯರಿಗೆ ತಿಳಿಸಲೆಂದೇ ಸಿದ್ಧವಾದುವೆಂದು ನಂಬಿಕೆ ಅಚೇತನ ಪದಾರ್ಥಗಳಲ್ಲಿ ನಿತ್ಯ, ಅನಿತ್ಯ, ನಿತ್ಯಾನಿತ್ಯವೆಂಬ ಮೂರು ಪ್ರಕಾರಗಳೆಂದೂ ವೇದವು ನಿತ್ಯವೆಂಬ ಪ್ರಕಾರಕ್ಕೆ ಸೇರಿದುದೆಂದೂ, ಪುರಾಣಗಳು ನಿತ್ಯಾನಿತ್ಯವೆಂಬ ಪ್ರಕಾರಕ್ಕೆ ಸೇರಿದುವೆಂದೂ ಪ್ರತೀತಿ. ವೇದವು ಅಪೌರುಷೇಯವಾದರೆ ಪುರಾಣಗಳು ಪೌರುಷೇಯ. ಸ್ವಯಂ ವಿಷ್ಣುವೇ ವೇದಸ್ವರೂಪದಲ್ಲಿ ಅವತರಿಸಿ ಪುರಾಣಗಳನ್ನು ರಚಿಸಿದನೆಂದು ಅವುಗಳ ಪ್ರಾಮಾಣ್ಯವನ್ನು ಸಮರ್ಥಿಸುತ್ತಾರೆ. ವೇದಗಳನ್ನು ಚತುರ್ಮುಖಬ್ರಹ್ಮನು ಪಡೆಯುವ ಮೊದಲೇ ಪುರಾಣಗಳು ಇದ್ದುವೆಂದೂ, 'ಪುರಾಣ'ವೆಂಬ ಮಾತಿಗೆ 'ಪುರಾ ನೀಯತೇ' (ಎಂದರೆ ಮೊದಲಲ್ಲಿ ಹೊರತಂದುದು) ಎಂದೇ ಅರ್ಥವೆಂದೂ ಹರಿದಾಸರು ಹೇಳುತ್ತಾರೆ. ಮೊದಲಿಗೆ ಪುರಾಣಗಳ ಒಟ್ಟು ಪರಿಮಿತಿ ಒಂದು ನೂರು ಕೋಟಿ ಗ್ರಂಥಗಳಂತೆ ; ಗ್ರಂಥವೆಂದರೆ ಮೂವತ್ತೆರಡು ಅಕ್ಷರಗಳ ಪರಿಮಿತಿ. ಪ್ರಳಯದಲ್ಲಿ ಇವೆಲ್ಲ ನಷ್ಟವಾದುವಂತೆ, ವಿಷ್ಣುವು ತನ್ನ ಮತ್ಸ್ಯಾವತಾರದಲ್ಲಿ ಮರಳಿ ಇವನ್ನೆಲ್ಲ ಪ್ರಕಟಪಡಿಸಿ ಚತುರ್ಮುಖ ಬ್ರಹ್ಮನಿಗೆ ಕೊಟ್ಟನಂತೆ. ಮುಂದೆ ಕಾಲಕ್ರಮದಲ್ಲಿ ಅವುಗಳ ಪ್ರಾಚುರ್ಯ ಕಡಮೆಯಾಗುತ್ತ ಬರಲು, ವಿಷ್ಣುವು ವೇದವ್ಯಾಸರೂಪದಿಂದ ಅವತರಿಸಿ ಹದಿನೆಂಟು ಪುರಾಣಗಳನ್ನು ರಚಿಸಿದನಂತೆ. ವೇದವ್ಯಾಸಾವತಾರವು ಪ್ರತಿ ದ್ವಾಪರಯುಗದಲ್ಲಿ ಆಗುವುದೆಂದು ಒಕ್ಕಣೆ ಹೀಗೆ ವೇದವ್ಯಾಸರು ಸಿದ್ಧಪಡಿಸಿದ ಪುರಾಣರಾಶಿಯ ಪ್ರಮಾಣ ನಾಲ್ಕು ಲಕ್ಷ ಗ್ರಂಥಗಳಷ್ಟು ಎಂಬ ವಿವರವಿದೆ.

ಇಷ್ಟು ಪರಿಮಿತಿಯ ಪುರಾಣರಾಶಿಯನ್ನು ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯ, ಬ್ರಹ್ಮವೈವರ್ತ, ಲೈಂಗ, ವಾರಾಹ, ಸ್ಕಾಂದ, ವಾಮನ, ಕೌರ್ಮ, ಮಾತ್ಸ್ಯ, ಗರುಡ, ಬ್ರಹ್ಮಾಂಡ ಎಂದು ಹದಿನೆಂಟು ಪುರಾಣಗಳಾಗಿ ವಿಭಾಗ ಮಾಡಿದ್ದಾರೆ. ಇವುಗಳಲ್ಲಿ ಆರು ವಿಷ್ಣುಪರವಾದ ಪುರಾಣಗಳೆಂದೂ, ಆರು ರುದ್ರಪರವಾದುವೆಂದೂ, ಉಳಿದ ಆರು ಬ್ರಹ್ಮಪರವಾದುವೆಂದೂ ಕಲ್ಪನೆಯಿದೆ. ಹರಿದಾಸರು ವಿಷ್ಣುಪರವಾದ ಪುರಾಣಗಳನ್ನೇ ಹೆಚ್ಚಾಗಿ ಅವಲಂಬಿಸುವುದು ಸಹಜವೇ. ಅದರಲ್ಲಿಯೂ ಭಾಗವತ, ವಿಷ್ಣುಪುರಾಣ,

ಮತ್ಸ್ಯಪುರಾಣಗಳ ಮೇಲೆ ಅವರ ಒಲವು ಹೆಚ್ಚು. ಬಹುಮಟ್ಟಿಗೆ ಭಾಗವತ ಪುರಾಣವೇ ಅವರ ಆದರವನ್ನು ಸೂರೆಗೊಂಡಿರುವುದು.

ಹರಿದಾಸರ ಗಮನವನ್ನು ಸೆಳೆದ ಪೌರಾಣಿಕ ವಿವರಗಳೆಂದರೆ ವಿಷ್ಣುವಿನ ದಶಾವತಾರಗಳು, ಭಕ್ತ–ಭಾಗವತರ ಪ್ರಸಂಗಗಳು. ಅವತಾರಗಳಲ್ಲಿ ಕೃಷ್ಣಾವತಾರ ಅವರ ಪಾಲಿಗೆ ಪ್ರಧಾನವಾದುದು ; ಇದನ್ನು ಬಿಟ್ಟರೆ ರಾಮಾವತಾರ. ಇವೆರಡನ್ನೂ ಬಿಟ್ಟರೆ ನರಸಿಂಹ, ವಾಮನ ಇವು. ಅವತಾರಗಳನ್ನು ಕುರಿತ ಒಕ್ಕಣೆ, ವರ್ಣನೆ ಹಲವಾರು ಪುರಾಣಗಳಲ್ಲಿ ಬರುತ್ತವೆ : ಮುಖ್ಯವಾಗಿ ಭಾಗವತಪುರಾಣ (೧, ೩, ೬–೨೫), ವರಾಹಪುರಾಣ (೧೫, ೯–೧೮), ಮತ್ಸ್ಯಪುರಾಣ (೧೭, ೧ ಮುಂದೆ), ವಿಷ್ಣುಪುರಾಣ (೧, ೪) ಇವುಗಳಲ್ಲಿ ವಿಶೇಷವಾದ ಉಲ್ಲೇಖವಿದೆ; ಭಾಗವತಪುರಾಣದಲ್ಲಿ ಇಪ್ಪತ್ತೆರಡು ಅವತಾರಗಳು, ಅಹಿರ್ಬುಧ್ನ್ಯಸಂಹಿತೆಯಲ್ಲಿ (೫, ೫೦–೫೭) ಮೂವತ್ತೊಂದು ಅವತಾರಗಳು ಎಣಿಕೆಗೆ ಬಂದಿದ್ದರೂ ವಾಡಿಕೆಯಲ್ಲಿ ಹತ್ತು ಅವತಾರಗಳದ್ದೇ ಪ್ರಸಿದ್ಧಿ.

೧. ಮತ್ಸ್ಯ (ಮತ್ಸ್ಯಪುರಾಣ ೧).
೨. ಕೂರ್ಮ (ವಿಷ್ಣುಪುರಾಣ ೧, ೯, ಪದ್ಮಪುರಾಣ ೬, ಭಾಗವತ ೮, ೭).
೩. ವರಾಹ (ಭಾಗವತ ೩, ೧೩, ವಾಯುಪುರಾಣ ೬, ಪದ್ಮಪುರಾಣ ೬, ೨೫೪, ಮತ್ಸ್ಯಪುರಾಣ ೧೪೭).
೪. ನರಸಿಂಹ (ಭಾಗವತ ೭, ೮, ಪದ್ಮಪುರಾಣ ೬, ೨೬೫, ಮತ್ಸ್ಯಪುರಾಣ ೪೭, ಹರಿವಂಶ ೩, ೪೨).
೫. ವಾಮನ (ಪದ್ಮಪುರಾಣ ೪೧, ೬, ಮತ್ಸ್ಯಪುರಾಣ ೨೪೪, ಭಾಗವತ ೮, ೧೮, ೨೨).
೬. ಜಾಮದಗ್ನಿ (ಮತ್ಸ್ಯಪುರಾಣ ೪೭, ಭಾಗವತ ೯, ೧೫, ಪದ್ಮಪುರಾಣ ೬, ೨೬೮).
೭. ರಾಮ (ಮತ್ಸ್ಯಪುರಾಣ ೪೬, ವಾಯುಪುರಾಣ ೮೮, ಭಾಗವತ ೯, ೧೦, ೧೧, ಪದ್ಮಪುರಾಣ ೬, ೨೬೨–೭೨೧).
೮. ಕೃಷ್ಣ (ಭಾಗವತ ೨, ವಿಷ್ಣುಪುರಾಣ ೫.೫, ಹರಿವಂಶ ೨, ೬ ಇತ್ಯಾದಿ).
೯. ಬುದ್ಧ (ಭಾಗವತ ೧, ೩).
೧೦. ಕಲ್ಕಿ (ಭಾಗವತ ೧, ೨, ೩, ವಿಷ್ಣುಪುರಾಣ ೬, ೧, ಮತ್ಸ್ಯಪುರಾಣ ೧೪೪).

ಭಕ್ತ–ಭಾಗವತರನ್ನು ಕುರಿತಂತೆ, ಮುಂದೆ ಕಾಣಿಸಿರುವ ಪಟ್ಟಿ ಪುರಂದರ ದಾಸರ ಪದಗಳಲ್ಲಿ ಮತ್ತೆ ಮತ್ತೆ ಉಲ್ಲೇಖಗೊಂಡಿರುವ ಪೌರಾಣಿಕ ವ್ಯಕ್ತಿಗಳನ್ನು ಹೆಸರಿಸುತ್ತದೆ. ಇದರಲ್ಲಿ ಭಕ್ತರಲ್ಲದ ಕೆಲವರೂ ಪ್ರಸಂಗಬಲದಿಂದ ಸೇರಿದ್ದಾರೆ.

ಅಜಾಮಿಳ (ಭಾಗವತ ೬, ೧).
ಅಂಬರೀಷ (ಭಾಗವತ ೯, ೪).
ಅಹಲ್ಯಾ (ರಾಮಾಯಣ, ಬಾಲಕಾಂಡ ೪೮).
ಇಂದ್ರದ್ಯುಮ್ನ (ಗಜೇಂದ್ರ ಮೋಕ್ಷ, ಭಾಗವತ ೮, ೪).
ಉದ್ಧವ (ಮಹಾಭಾರತ, ಆದಿಪರ್ವ ೨೦೧, ೨೩೯).
ಕಂಸ (ಮಹಾಭಾರತ, ಅರಣ್ಯಪರ್ವ ೬೮, ಹರಿವಂಶ ೨, ೩೦, ಭಾಗವತ ೧೦, ೩೬–೪೪).
ಕಾಳಿಯ (ಭಾಗವತ ೧೦, ೧೬ , ಹರಿವಂಶ ೨, ೧೨).
ಕುಬ್ಜಾ (ಭಾಗವತ, ೧೦, ೪೨).
ಗೋವರ್ಧನ (ಭಾಗವತ ೧೦, ೨೪ , ಹರಿವಂಶ ೨, ೨೮ ; ವಿಷ್ಣುಪುರಾಣ ೫, ೧೧)
ಚಾಣೂರ (ಭಾಗವತ ೧೦, ೪೪).
ದಂತವಕ್ರ (ಭಾಗವತ ೧೦, ೭೮).
ದುರ್ವಾಸ (ಭಾಗವತ ೪, ೧, ೯೪ ; ವಿಷ್ಣುಪುರಾಣ ೧, ೯).
ದ್ರೌಪದೀ (ದುಃಶಾಸನನಿಂದ ವಸ್ತ್ರಾಪಹರಣದಲ್ಲಿ ಅಕ್ಷಯ ವಸ್ತ್ರ ಪ್ರಸಂಗ, ಮಹಾಭಾರತ ಸಭಾಪರ್ವ ೮೯, ೯೦ ; ದುರ್ವಾಸಾತಿಥ್ಯ, ಅಕ್ಷಯ ಪಾತ್ರೆ ಪ್ರಸಂಗ, ಮಹಾಭಾರತ ವನಪರ್ವ ೨೬೩).
ಧ್ರುವ (ಭಾಗವತ ೪, ೮–೧೩ ; ವಿಷ್ಣುಪುರಾಣ ೧, ೧೧).
ನಾರದ (ಭಾಗವತ ೩, ೧೨, ಇತ್ಯಾದಿ).
ಪೂತನಿ (ಭಾಗವತ ೧೦, ೬ ; ಹರಿವಂಶ ೨, ೬ ; ವಿಷ್ಣುಪುರಾಣ ೫, ೫).
ಪ್ರಹ್ಲಾದ (ಭಾಗವತ ೭, ೪ ; ವಿಷ್ಣುಪುರಾಣ ೧, ೧೭ ; ಮತ್ಸ್ಯಪುರಾಣ ೧೬೧, ೧೬೩).
ಬಲಿ (ಭಾಗವತ ೮, ೧೮–೨೨).
ಮುಚುಕುಂದ (ಭಾಗವತ ೧೦, ೫೧–೫೨ ; ವಿಷ್ಣುಪುರಾಣ ೫, ೨೩ ; ಹರಿವಂಶ ೨, ೫೭).
ವಿದುರ (ಮಹಾಭಾರತ, ಉದ್ಯೋಗಪರ್ವ ೯೧).
ಶಕಟಾಸುರ (ಭಾಗವತ ೧೦, ೭ ; ಹರಿವಂಶ ೨, ೬).
ಶಿಂಶುಮಾರ (ಭಾಗವತ ೫, ೨೩ ; ವಿಷ್ಣುಪುರಾಣ ೨, ೯).
ಶಿಶುಪಾಲ (ಮಹಾಭಾರತ, ಸಭಾಪರ್ವ ೭೦ ; ಭಾಗವತ ೧೦, ೭೪).

# ಪದಾರಂಭದ ಅಕಾರಾದಿ

# ಪುರಂದರ ಸಾಹಿತ್ಯ ದರ್ಶನ

ಪುರಂದರದಾಸರಿಗೆ ಕನ್ನಡ ಸಾಹಿತ್ಯ ಇತಿಹಾಸದಲ್ಲೂ, ಕರ್ನಾಟಕ ಸಂಗೀತ ಪರಂಪರೆಯಲ್ಲೂ ಹಿರಿಯ ಸ್ಥಾನವಿದೆ. ಅವರ ಕಾಲವಾಗಿ ಸುಮಾರು ಐನೂರು ವರ್ಷಗಳು ಉರುಳಿದ್ದರೂ, ಅವರನ್ನು ಕುರಿತಂತೆ ಜನಪ್ರೀತಿ ಅಚ್ಚಳಿಯದೆ ಉಳಿದುಕೊಂಡಿದೆ. ಅವರು ವಿಜಯನಗರ ಸಾಮ್ರಾಜ್ಯದ ಏರಿಳಿತಗಳನ್ನು ಕಣ್ಣಾರೆ ಕಂಡವರು, ಜನರ ಸುಖದುಃಖ ಗಳಲ್ಲಿ ನೇರವಾಗಿ ಪಾಲ್ಗೊಂಡವರು, ತಮ್ಮ ಜೀವಿತಕಾಲದಲ್ಲೇ ಪ್ರಸಿದ್ಧರಾಗಿದ್ದವರು ; ಜನರಿಗೆ ಆಧ್ಯಾತ್ಮದ ತಾತ್ಪರ್ಯವನ್ನೂ ಬದುಕಿನ ಮೌಲ್ಯಗಳನ್ನೂ ಮನದಟ್ಟು ಮಾಡಿಸಿಕೊಡಲು ತಮ್ಮ ಜೀವನ ವನ್ನು ಮುಡಿಪಾಗಿಟ್ಟವರು. ಧರ್ಮದಲ್ಲೂ ನಿತ್ಯಜೀವನದಲ್ಲೂ ಇದ್ದ (ಇರುವ) ಬೂಟಕತನ, ಕಪಟ, ಆಡಂಬರ, ದುರಾಚಾರಗಳನ್ನು ಖಂಡಿಸಿದರು. ಜಾತಿಮತಗಳನ್ನು ಕಡೆಗಣಿಸಿ ಮಾನವಜನ್ಮ ದೊಡ್ಡ ದೆಂದೂ ಅದನ್ನು ಹಾನಿಮಾಡಿಕೊಳ್ಳಬಾರದೆಂದೂ ಊರೂರು ತಿರುಗಿ ಕೇರಿ ಕೇರಿಗಳಲ್ಲಿ ಅಲೆದಾಡಿ, ಮನೆಮನೆಗಳ ಮುಂದೆ ನಿಂತು ತಿಳಿಯ ಪಡಿಸಿದರು.

ಅವರ ಐದುನೂರನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವು ಅವರ ಸಮಗ್ರ ಸಾಹಿತ್ಯವನ್ನು ನಾಲ್ಕು ಸಂಪುಟ ಗಳಲ್ಲಿ ಪ್ರಕಟಿಸಿದೆ. ಅವರ ಕೃತಿಗಳಲ್ಲಿ ಈಗ ದೊರಕುವ ಸುಮಾರು ಒಂದು ಸಾವಿರವನ್ನು ಪರಿಶೀಲಿಸಿ ಪಾಠಶುದ್ಧಿಯ ಕಡೆ ಗಮನವಿಟ್ಟು, ಅಗತ್ಯವಾದ ವಿವರಣೆಗಳೊಂದಿಗೆ, ವಸ್ತುವೈವಿಧ್ಯವನ್ನನುಸರಿಸಿ ವಿಂಗಡಿಸಿ ಓರಣವಾಗಿ ಈ ಸಂಪುಟಗಳಲ್ಲಿ ಕೊಡಲಾಗಿದೆ. ಪ್ರತಿ ಸಂಪುಟಕ್ಕೂ ವಿಸ್ತಾರವಾದ ವಿದ್ವತ್ಪೂರ್ಣವಾದ ಪ್ರಸ್ತಾವನೆಯಿದೆ.

ಸಂಪುಟ ೧ : ಜೀವನ ದರ್ಶನ (ಮಹಿಮಾದರ್ಶನ, ಜೀವನ ದರ್ಶನ, ಕ್ಷೇತ್ರಸಂದರ್ಶನ)

ಸಂಪುಟ ೨ : ಅಧ್ಯಾತ್ಮ ದರ್ಶನ (ದೇವತಾದರ್ಶನ, ಮಾಹಾತ್ಮ್ಯ ದರ್ಶನ, ಸಾಧನ ದರ್ಶನ)

ಸಂಪುಟ ೩ : ಸಮಾಜ ದರ್ಶನ (ವ್ಯಕ್ತಿನೀತಿ, ಸಮಾಜ ಚಿಂತನ, ಮನೋಬೋಧೆ)

ಸಂಪುಟ ೪ : ಕೀರ್ತನ ದರ್ಶನ (ಕೃಷ್ಣಲೀಲೆ, ಸುಳಾದಿಗಳು, ಉಗಾಭೋಗಗಳು, ಸಂಕೀರ್ಣ ಪ್ರಕರಣ)

ಪುರಂದರದಾಸರನ್ನು ಕುರಿತಂತೆ ಇದೊಂದು ವಿಶ್ವಕೋಶ.